ಪ್ರತಿಭಾವಂತ ಸಂಸದೀಯಪಟು ಪುಸ್ತಕ ಮಾಲಿಕೆ

# ಡಾ. ಮಹಾದೇವ ಬಣಕಾರ

**ಪ್ರಕಟಣೆ**
ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ
ವಿಧಾನಸೌಧ, ಬೆಂಗಳೂರು

**Dr. Mahadeva Banakara**
Eminent Parliamentarian Series
Written by **Kumaraswamy Lingaiah Yalavathimatt**
**Writer, S.Pu. Halagi**
**T.D. Haveri**
**Published** by
Karnataka Legislature Library Committee
Vidhana Soudha, Bangalore - 560 001
Page: 302+xviii Price: Rs.40/-

First Edition: 2019 Copies: 750
**Printed & Designed by**
Government Press, Bengaluru.

**ಡಾ. ಮಹದೇವ ಬಣಕಾರ**
ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ
ಶ್ರೀ ಕುಮಾರಸ್ವಾಮಿ ಲಿಂಗಯ್ಯ ಯಳವತ್ತಿಮಠ್
ಸಾ.ಪೋ. ಹಾಲಗಿ
ತಾ.ಜಿ. ಹಾವೇರಿ
**ಪ್ರಕಾಶನ**
ಗ್ರಂಥಾಲಯ ಸಮಿತಿ
ಕರ್ನಾಟಕ ವಿಧಾನ ಮಂಡಲ
ವಿಧಾನಸೌಧ, ಬೆಂಗಳೂರು – 560 001
ಪುಟ: 302 + xviii ಬೆಲೆ: 40/– ರೂ.

ಮೊದಲ ಮುದ್ರಣ: 2019 ಪ್ರತಿಗಳು: 750
**ಮುದ್ರಣ ಮತ್ತು ವಿನ್ಯಾಸ**
ಸರ್ಕಾರಿ ಮುದ್ರಣಾಲಯ, ಬೆಂಗಳೂರು.

# ವಿಧಾನ ಮಂಡಲ ಗ್ರಂಥಾಲಯ ಸಮಿತಿ
# 2018 – 2019

ಅಧ್ಯಕ್ಷರು

**ಶ್ರೀ ಕೆ. ಪ್ರತಾಪ ಚಂದ್ರ ಶೆಟ್ಟಿ**

ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರು

**ಶ್ರೀ ಕೆ.ಆರ್. ರಮೇಶ್ ಕುಮಾರ್**

ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

**ಶ್ರೀ ಸಿದ್ದರಾಮಯ್ಯ**

ವಿಧಾನಸಭಾ ಸದಸ್ಯರು

**ಶ್ರೀ ರಾಮಲಿಂಗಾ ರೆಡ್ಡಿ**

ವಿಧಾನಸಭಾ ಸದಸ್ಯರು

**ಶ್ರೀ ಎಂ. ಕೃಷ್ಣಪ್ಪ (ಬೆಂಗಳೂರು ದಕ್ಷಿಣ)**

ವಿಧಾನಸಭಾ ಸದಸ್ಯರು

**ಶ್ರೀ ಉದಯ್ ಬಿ. ಗರುಡಾಚಾರ್**

ವಿಧಾನಸಭಾ ಸದಸ್ಯರು

**ಶ್ರೀ ಕೆ.ಟಿ. ಶ್ರೀಕಂಠೇಗೌಡ**

ವಿಧಾನ ಪರಿಷತ್ ಸದಸ್ಯರು

**ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ**

ವಿಧಾನ ಪರಿಷತ್ ಸದಸ್ಯರು

**ಶ್ರೀ ಪ್ರಕಾಶ್ ಕೆ. ರಾಥೋಡ್**

ವಿಧಾನ ಪರಿಷತ್ ಸದಸ್ಯರು

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಅಧಿಕಾರಿ – ಸಂಪಾದಕ ವರ್ಗ

### ಕರ್ನಾಟಕ ವಿಧಾನಸಭೆ ಸಚಿವಾಲಯ

| | |
|---|---|
| ಎಂ.ಕೆ. ವಿಶಾಲಾಕ್ಷಿ | ಕಾರ್ಯದರ್ಶಿ |
| ಜೆ.ಈ. ಶಶಿಧರ್ | ನಿರ್ದೇಶಕರು (ಐಟಿ) |
| ಕನಕಪ್ಪ ನಲವಾಗಲ | ಸಹಾಯಕ ಗ್ರಂಥಪಾಲಕರು |

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| ಕೆ.ಆರ್. ಮಹಾಲಕ್ಷ್ಮಿ | ಕಾರ್ಯದರ್ಶಿ (ಪ್ರ) |

# ಲೇಖಕರ ಮಾತು

ಕನ್ನಡ ನಾಡಿನ ಸಾಹಿತ್ಯ ಹಾಗೂ ರಾಜಕೀಯ ಚರಿತ್ರೆಯಲ್ಲಿ ಡಾ.ಮಹದೇವ ಬಣಕಾರರು ಒಬ್ಬ ವರ್ಣರಂಜಿತ ವ್ಯಕ್ತಿ. ಸಾಹಿತ್ಯ ಕೃಷಿ ಕ್ಷೇತ್ರದಿಂದ ಮೇಲೆ ಬಂದ ಬಣಕಾರರು ಜನರ ಒತ್ತಡಕ್ಕೆ ಮಣಿದು ರಾಜಕಾರಣದ ಒಲವು ತಾಳಿದರು ಐದು ದಶಕಗಳ ಕಾಲದವರೆಗಿನ ಅವರ ಸಾಹಿತ್ಯ ಮತ್ತು ಕಡಿಮೆ ಅವಧಿಯಲ್ಲಿನ ಅವರ ಸಕ್ರೀಯ ರಾಜಕೀಯ ಇತಿಹಾಸ ಹತ್ತು ಹಲವು ವೈಶಿಷ್ಟ್ಯಗಳಿಂದ ಕೂಡಿದೆ.

ಮಹದೇವ ಬಣಕಾರರಲ್ಲಿದ್ದ ಛಲ, ನಿಷ್ಠೆ, ಧೈರ್ಯ, ಪ್ರಾಮಣಿಕತೆ ಎಂಥಹವರಿಗೂ ಸ್ಪೂರ್ತಿಯಾಗಿದ್ದವು. ರಾಜಕಾರಣಿಗಿಂತ ಹೆಚ್ಚಾಗಿ ಕನ್ನಡ ನಾಡಿನ ಏಳ್ಗೆಕುರಿತು ಬಹುಮುಖ್ಯವಾಗಿ ಸಮಾಜ ಚಿಂತಕರಾಗಿದ್ದರು. ಇಂಥಹ ದೀಮಂತ ವ್ಯಕ್ತಿತ್ವದ ಬಣಕಾರರು ಬಹುಬೇಗನೇ ನಮ್ಮನ್ನಗಲಿದರು ಎಂಬುದನ್ನು ನಂಬಲಿಕ್ಕೆ ಸಾಧ್ಯವಾಗುತ್ತಿಲ್ಲ.

ಕರ್ನಾಟಕ ರಾಜ್ಯದ ವಿಧಾನ ಮಂಡಲ ಕನ್ನಡ ನಾಡಿನ ಪ್ರತಿಭಾವಂತ ಸಂಸದೀಯ ಪಟುಗಳನ್ನು ಕುರಿತು ಪುಸ್ತಕಗಳನ್ನು ಹೊರತರುತ್ತಿರುವುದು ಸಮಯೊಚಿತ ಮತ್ತು ಶ್ಲಾಘನೀಯವಾಗಿದಂತಹ ಕಾರ್ಯ. ಇಂತಹ ಪ್ರತಿಬಾವಂತ ಸಂಸದೀಯ ಪಟುಗಳು ಜನಪ್ರತಿನಿಧಿಗಳಾಗಿ ಸಲ್ಲಿಸಿದ ಸೇವೆ, ಅವರ ವಿಚಾರಗಳು, ಉನ್ನತ ಧ್ಯೇಯೋದ್ದೇಶಗಳು ಭವಿಷ್ಯದ ನಾಯಕರಿಗೆ ಅಧಿಕಾರಿ ವರ್ಗದವರಿಗೆ ಮಾರ್ಗದರ್ಶನವಾಗುವುದರ ಜೊತೆಗೆ ಉತ್ತಮ ಹಾಗೂ ಸುಗಮ ಆಡಳಿತಕ್ಕೆ ದಾರಿ ದೀಪಾವಾಗುವುದರಲ್ಲಿ ಎರಡು ಮಾತಿಲ್ಲ ಎಂಬುದು ನನ್ನ ವಯಕ್ತಿಕ ಅಭಿಲಾಷೆಯಾಗಿದೆ.

ಆ ನಿಟ್ಟಿನಲ್ಲಿ ಕರ್ನಾಟಕ ರಾಜ್ಯ ಸರ್ಕಾರದಲ್ಲಿ ವಿಧಾನ ಸಭೆ ಹಾಗೂ ವಿಧಾನ ಪರಿಷತ್ತ ಸದಸ್ಯರಾಗಿ, ಕನ್ನಡ "ಕರ್ನಾಟಕದ ಹಿತರಕ್ಷಣೆಗಾಗಿ ಹೋರಾಟ ಮಾಡಿ ನಾಡು, ನುಡಿ, ಭಾಷೆ ಹೀಗೆ ಅಪ್ರತಿಮ ಸೇವೆ ಸಲ್ಲಿಸಿದ ಪ್ರತಿಭಾವಂತ ಸಂಸದೀಯ ಪಟು ದಿವಂಗತ ಡಾ.ಮಹದೇವ ಬಣಕಾರರ ಜೀವನ ಸಾಧನೆ ಉಭಯ ಸದನಗಳಲ್ಲಿ ಅವರು ಮಾಡಿದ್ದ

ಭಾಷಣ ಇವೆಲ್ಲವುಗಳನ್ನು ಕುರಿತು, ಪುಸ್ತಕ ರಚಿಸಲು ನನಗೆ ದೊರೆತ ಅವಕಾಶಕ್ಕಾಗಿ ಕರ್ನಾಟಕ ವಿಧಾನ ಮಂಡಲ ಗ್ರಂಥಾಲಯ ಸಮಿತಿಗೆ ನಾನು ಅಭಾರಿಯಾಗಿದ್ದೇನೆ. ಪುಸ್ತಕ ಬರವಣಿಗೆಯಲ್ಲಿ ಅನುಭವ ಇಲ್ಲದ ನನಗೆ ಇಂತಹ ಮಹಾತ್ಕಾರ್ಯದ ಕೆಲಸಕ್ಕೆ ನನಗೆ ಅವಕಾಶ ಕಲ್ಪಿಸಿದ ವಿಧಾನ ಪರಿಷತ್ತಿನ ಸಭಾಪತಿಗಳಿಗೆ ನನ್ನ ಗೌರವ ಪೂರ್ವಕ ವಂದನೆಗಳು.

ಹುಟ್ಟು ಕವಿಯಾದ ಬಣಕಾರ ಬಾಲ್ಯ, ಹೋರಾಟದ ಬದುಕು ಒಂದು ಕುತೂಹಲಕಾರಿಯಾಗಿದೆ. ನಮ್ಮ ನಾಡಿನ ಅನೇಕ ಪ್ರತಿಭಾವಂತ ಸಾಹಿತಿಗಳು ಕಾಲೇಜು ಕಟ್ಟೆಯನ್ನೇರಿಲ್ಲ, ಅಂದ ಮಾತ್ರಕ್ಕೆ ಸಾಹಿತ್ಯ ಸರಸ್ವತಿಯನ್ನು ಪಡೆಯಲು ಕಡ್ಡಾಯವಾಗಿ ಕಾಲೇಜು ಶಿಕ್ಷಣದ ಅವಶ್ಯಕತೆನೂ ಬೇಕಿಲ್ಲ. ಆದರೆ ಕೇವಲ ಒಬ್ಬ ವ್ಯಕ್ತಿ ಪಡೆದ ಪದವಿಗಳ ಆಧಾರದಿಂದ, ಆತನ ಪ್ರತಿಭೆಯನ್ನು ಗುರುತಿಸಲಿಕ್ಕಾಗದು ಎಂಬುದಕ್ಕೆ ಬಣಕಾರರು ಸಾಕ್ಷಿಯಾಗಿದ್ದಾರೆ.

ಸಾಹಿತ್ಯ ಕೃಷಿಯಿಂದ ಮೇಲೆ ಬಂದ ಬಣಕಾರರು 1967ರಲ್ಲಿ ಮಹಾ ಚುನಾವಣೆಯಲ್ಲಿ ಸ್ಪರ್ಧಿಸಿ ವಿಧಾನ ಸಭೆಗೆ ಚುನಾಯಿತರಾದರಲ್ಲದೇ, ಬಹುಬೇಗನೆ ಸಮರ್ಥ ಶಾಸಕರೆಂಬ ಹೆಸರು ಪಡೆದುಕೊಂಡರು. ನುಡಿದರೆ ಮುತ್ತಿನ ಹಾರದಂತಿರಬೇಕು ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು ಎನ್ನುವ ಬಸವಣ್ಣನವರ ಉಕ್ತಿಯಂತೆ ಬಣಕಾರರ ಮಾತುಗಳಿದ್ದವು. ನಾಡಿನ ಬೆಳವಣಿಗೆಯ ಬಗ್ಗೆ ಕಾಳಜಿ ಹೊಂದಿದ್ದರು. ಒಳ್ಳೆಯ ಸರ್ಕಾರಕ್ಕೆ ಮಾರ್ಗದರ್ಶನ ನೀಡಬಲ್ಲ ಚಾಣಾಕ್ಷತನ ಅವರಲ್ಲಿತ್ತು. ಮಾತು ಬಲ್ಲ ಬಣಕಾರರಿಗೆ ಸದನದಲ್ಲಿ ದಿನನಿತ್ಯವೂ ಕಾವೇರಿದ ವಾತವರಣ ಸೃಷ್ಠಿಯಾಗುತ್ತಿತ್ತು. ಅನೇಕ ಸಂದರ್ಭದಲ್ಲಿ ಸಾರ್ವಜನಿಕರ ಹಿತದೃಷ್ಟಿಯಿಂದ ಸದನದಲ್ಲಿ ಅವರ ಮಾತುಗಳು ಕಿರುಕುಳ ಉಂಟು ಮಾಡುತ್ತಿದ್ದವು. ತಮ್ಮ ಮಾತುಗಾರಿಕೆಯಿಂದ ಎಂಥಹುದೇ ಕಠಿಣ ಸನ್ನಿವೇಶಗಳನ್ನು ನಿಯಂತ್ರಣಕ್ಕೆ ತೆಗೆದುಕೊಳ್ಳಬಲ್ಲವರಾಗಿದ್ದರು.

ಶಿಕ್ಷಣ, ಆರೋಗ್ಯ, ಕುಡಿಯುವ ನೀರಿನ ಸಮಸ್ಯೆ ಗಡಿವಿವಾದ, ಕನ್ನಡ ಭಾಷೆ, ನೀರಾವರಿ, ಹೀಗೆ ಯಾವುದೇ ವಿಚಾರವಿರಲಿ ತಮ್ಮದೇ ಬುದ್ಧಿ ಶಕ್ತಿಯಿಂದ ಆಳವಾದ ಅಧ್ಯಯನದ ಜೊತೆಗೆ, ಗಂಭೀರವಾಗಿ ಕರಾರುವಕ್ಕಾದ

ಅಂಕಿ ಅಂಶಗಳನ್ನು ಉಪಯೋಗಿಸಿಕೊಂಡು ಸದನದಲ್ಲಿ ಚರ್ಚೆಗೆ ಭಾಗವಹಿಸುತ್ತಿದ್ದರು.

ಈ ನಾಡಿನಲ್ಲಿ ಹುಟ್ಟಿದ ತಾನು ನಾಡಿಗೆ ಸೇವೆ ಸಲ್ಲಿಸಲೇಬೇಕೆಂದು ಪಣ ತೊಟ್ಟವರೆಂಬಂತೆ ಸಾರ್ವಜನಿಕ ಬದುಕಿಗೆ ಧುಮುಕಿ, ಸಾರ್ವಜನಿಕ ಕಲ್ಯಾಣಕ್ಕೆ ತಮ್ಮ ಜೀವನವನ್ನೇ ತೇಯ್ದ ಬಣಕಾರರು ಸ್ವಂತಕ್ಕಾಗಿ ಏನೂ ಮಾಡಿಕೊಂಡವರಲ್ಲ. ಮನೆ– ಮಠ ಎನ್ನದೇ, ದೇಶ,ನಾಡು, ಸಮಾಜ ಎಂದು ತಿರುಗಾಡಿದ್ದೇ ಹೆಚ್ಚು ಬಣಕಾರರು ಶಾಸಕರಾಗಿದ್ದ ಸಂದರ್ಭದಲ್ಲಿ ತಮ್ಮ ಕ್ಷೇತ್ರದ ಜನರು ಶಿಫಾರಸು ಪತ್ರಕ್ಕಾಗಿ ಅಥವಾ ಇನ್ನುಳಿದಂತೆ ಯಾವುದೇ ಕೆಲಸಕ್ಕೆ ಬೆಂಗಳೂರಿಗೆ ಬಂದರೆ ಸಾಧ್ಯವಾದಷ್ಟು ಹಣವನ್ನು ಸಾರ್ವಜನಿಕರ ಕೈಗೆ ನೀಡಿ ಕೆಲಸವನ್ನು ಒಂದು ನಯಾಪೈಸೆ ಖರ್ಚಾಗದಂತೆ ಮಾಡಿ ಕಳಿಸುತ್ತಿದ್ದರು.

ಎಲೆಮರಿ ಕಾಯಿಯಂತೆ ಇದ್ದ ಬಣಕಾರರು ಸದನದ ಒಳಗೆ ಮತ್ತು ಹೊರಗೆ ಜನಮನ್ನಣೆಗೆ ಪಾತ್ರರಾಗಿದ್ದರು. ತಮ್ಮ ಅಧಿಕಾರ ಸ್ಥಾನಕ್ಕೆ ಎಂದೂ ದ್ರೋಹ ಬಗೆದವರಲ್ಲ ಅಧಿಕಾರವನ್ನು ಸದ್ಬಳಕೆ ಮಾಡಿಕೊಂಡು, ಸಮಯ ವ್ಯರ್ಥಮಾಡದೇ ರಾಜಕೀಯ ಮತ್ತು ಸಾಹಿತ್ಯವನ್ನು ತಾವು ಸಾಯುವವರೆಗೂ ಕಾಪಾಡಿಕೊಂಡು ಬಂದವರಾಗಿದ್ದರು.ಅಧಿಕಾರ ವ್ಯಾಮೋಹದಿಂದ ಬಹಳಷ್ಟು ದೂರವಿದ್ದ ಬಣಕಾರರು ಅಪ್ರತಿಮ ವ್ಯಕ್ತಿತ್ವವನ್ನು ಹೊಂದಿದ್ದರು. ಹಾಗಾಗಿಯೇ ಬಣಕಾರರು ಉತ್ತಮ ಸಂಸದೀಯ ಪಟುವಾಗಿ ರೂಪಗೊಳ್ಳಲು ಸಾಧ್ಯವಾಯಿತು.

ಈ ಪುಸ್ತಕ ರಚನೆಯ ಹಿಂದೆ ಅನೇಕ ಮಹನೀಯರ ಸಹಕಾರವಿದೆ ಅವರನ್ನು ನೆನೆಯುವುದು ಕರ್ತವ್ಯವಾಗಿದೆ. ನಾನು ಪತ್ರಿಕೆಗೆ ವರದಿಯನ್ನು ಮಾಡುತ್ತಿದ್ದ ಸಂದರ್ಭದಲ್ಲಿ ಪುಸ್ತಕ ಬರವಣಿಗೆಗೆ ಸಹಕರಿಸಿದ ಪ್ರಜಾವಾಣಿ ಪತ್ರಿಕೆಯ ಹಾವೇರಿ ಜಿಲ್ಲಾ ವರದಿಗಾರರಾದ ವಿಜಯ ಹೂಗಾರ, ಚೊಚ್ಚಲ ಪುಸ್ತಕ ಬರವಣಿಗೆಗೆ ಬೆನ್ನು ತಟ್ಟಿ ಪ್ರೋತ್ಸಾಹಿಸಿದ ಕೌರವ ಪತ್ರಿಕೆಯ ಸಂಪಾದಕರಾದ ಶಿವಾನಂದಗೊಂಬಿ, ನನ್ನ ವರದಿಗಾರಿಕೆ ಪ್ರಾರಂಭವಾದಗಿನಿಂದ ಹಿಡಿದು ಪುಸ್ತಕ ರಚನೆಯಲ್ಲೂ ಪ್ರೋತ್ಸಾಹಿಸಿದ

ಸಾಹಿತಿ ಮತ್ತು ಉದಯ ಟಿ.ವ್ಹಿ ಹಾವೇರಿ ಜಿಲ್ಲಾ ವರದಿಗಾರರಾದ ಜಿ.ಎಂ.ಕುಲಕರ್ಣಿ, ಡಿಟಿಪಿ ಕೆಲಸಕ್ಕಾಗಿ ನನಗೆ ಏನಿಲ್ಲದ ಸಹಾಯ ಮಾಡಿದ ವಿಜಯ ಕರ್ನಾಟಕ ಪತ್ರಿಕೆಯ ಬಿಡಿ ಸುದ್ದಿಗಾರರಾದ ಆತ್ಮೀಯ ಸ್ನೇಹಿತ ಪ್ರದೀಪ ಸಾಲಗೇರಿ, ಮುನ್ನುಡಿ ಬರೆದು ಹರಸಿದ ಹಾವೇರಿ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಹನುಮಂತಗೌಡ ಗೊಲ್ಲರ ಅವರಿಗೆ ನಾನು ಕೃತಜ್ಞ, ಪುಸ್ತಕ ರಚನೆಗೆ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಏನಿಲ್ಲದ ಸಹಕಾರ ನೀಡಿದ ಮಹನೀಯರಿಗೆ ಸಹಕಾರ ಸಹಾನುಭೂತಿ ನೀಡಿದ ಮಹನೀಯರಿಗೆ ನಾನೆಂದೂ ಚಿರಋಣಿ.

ಕುಮಾರಸ್ವಾಮಿ ಯಳವತ್ತಿಮಠ

# ನಿವೇದನೆ

ದಿನ ಪತ್ರಿಕೆಗಳಿಗೆ ವರದಿಯನ್ನು ಮಾಡುವುದನ್ನು ಬಿಟ್ಟರೆ, ಪುಸ್ತಕ ಬರೆಯುವ ಸಾಹಸದ ಕೆಲಸಕ್ಕೆ ನಾನು ಎಂದೂ ಕೈಹಾಕಿದವನಲ್ಲ. ಪುಸ್ತಕ ಬರೆಯುವ ಹವ್ಯಾಸವೂ ಆಗ ನನ್ನಲ್ಲಿರಲಿಲ್ಲ. ದಿನ ಪತ್ರಿಕೆಯೊಂದಕ್ಕೆ ಸುದ್ದಿಗಾರನಾಗಿ ಕೆಲಸ ಮಾಡುತಿದ್ದ ಸಂದರ್ಭದಲ್ಲಿ, ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದ ನನ್ನ ವಿಶೇಷ ವರದಿಗಳನ್ನು ಆಗಾಗ ಕಣ್ಣಾಡಿಸುತ್ತಾ, ಮೇಲಿಂದ ಮೇಲೆ ನನ್ನ ಬರವಣಿಗೆಗೆ ಸದಾ ಮೆಚ್ಚುಗೆ ವ್ಯಕ್ತಪಡಿಸುತ್ತಿದ್ದವರು, ಡಾ. ಮಹದೇವ ಬಣಕಾರರ ಪರಮಾಪ್ತ ಶಿಷ್ಯರಲ್ಲಿ ಒಬ್ಬರಾದ ಹಾವೇರಿ ತಾಲೂಕಿನ ಯತ್ತಿನಹಳ್ಳಿ ಗ್ರಾಮದ ಅಬ್ದುಲ್ ಹುಬ್ಬಳ್ಳಿಯವರು.

ಅಬ್ದುಲ್ ಅವರ ಪರಿಚಯದ ನಂತರ ನನನ್ನು ತಮ್ಮ ಕುಟುಂಬದ ಒಬ್ಬ ಸದಸ್ಯನಂತೆ ಕಂಡರು. ನಂತರದ ದಿನಗಳಲ್ಲಿ ಅಬ್ದುಲ್ ಡಾ.ಮಹದೇವ

ಬಣಕಾರರ ಕುರಿತು ಆಗಾಗ ನನ್ನಲ್ಲಿ ಹೇಳಿಕೊಳ್ಳುತ್ತಿದ್ದರು. ಬಣಕಾರರು ರಚಿಸಿದ ಪುಸ್ತಕಗಳನ್ನು ಆಗಾಗ ನನಗೆ ಓದಲು ನೀಡುತ್ತಿದ್ದರು, ಅವರು ರಚಿಸಿದ ಕೆಲವೊಂದು ಮಹತ್ತರ ಪುಸ್ತಕಗಳತ್ತ ಕಣ್ಣಾಡಿಸಿದಾಗ ಅವರ ಹೋರಾಟದ ಬದುಕು, ಅಗಾಧ ಪ್ರತಿಭೆ ಅಮೂಲ್ಯವಾದ ಸಾಹಿತ್ಯ ನನ್ನಲ್ಲಿ ವಿಶೇಷ ಆಸಕ್ತಿಯೊಂದಿಗೆ ಒಂದು ಹೊಸ ಅನುಭವ ಬಂದಂತಾಗಿ, ಅವರ ಸಾಹಿತ್ಯಮಯ ಜೀವನ ನನಗೆ ದಾರಿದೀಪವಾಯಿತು.

ಒಂದು ದಿನಹಾಗೆ ಸಾಹಿತ್ಯದ ಬಗ್ಗೆ ಚರ್ಚಿಸುತ್ತಾ ಕುಳಿತ ಸಂದರ್ಭದಲ್ಲಿ, ಅಬ್ದುಲ್ ಅವರು ಏಕಾಏಕಿ ಎಂಬಂತೆ ಡಾ.ಮಹದೇವ ಬಣಕಾರರ ಕುರಿತು ಒಂದು ಪುಸ್ತಕವನ್ನು ರಚಿಸಿ ಸರ್ಕಾರಕ್ಕೆ ನೀಡಬೇಕೆಂದು ನನಗೆ ಹೇಳಿದರು. ಮೇರು ವ್ಯಕ್ತಿತ್ವದ ದೊಡ್ಡ ಸಾಹಿತಿ ಬಗ್ಗೆ ಪುಸ್ತಕ ರಚಿಸುವ ಕೆಲಸ ಸಾಮಾನ್ಯವಾದುದಲ್ಲ ನಾನು ಬೇಡವೆಂದೆ. ಜಿಲ್ಲೆಯಲ್ಲಿ ಬಣಕಾರರ ಕುರಿತು ಸಾಕಷ್ಟು ತಿಳಿದ ಸಾಹಿತಿಗಳಿದ್ದಾರೆ,

ಅಲ್ಲದೇ ಅವರ ಒಡನಾಡಿ ಸಾಹಿತಿಗಳಿದ್ದಾರೆ ಅವರಿಂದ ಪುಸ್ತಕ ರಚನೆ ಸಾಧ್ಯ ಎಂಬುದನ್ನು ಹೇಳಿಕೊಂಡೆ. ಆಗ ನನ್ನ ಮೇಲೆ ಕೋಪಿಸಿಕೊಂಡು ಈ ಪುಸ್ತಕ ರಚನೆ ನಿನ್ನಿಂದಾಗಬೇಕೆಂದು ಹಟ ಹಿಡಿದು, ನಿನ್ನ ಪುಸ್ತಕ ಬರವಣಿಗೆ ಇದರಿಂದಲೇ ಪ್ರಾರಂಭವಾಗಲಿ ಎಂದು ಹರಸಿ ಪುಸ್ತಕ ರಚನೆಗೆ ವಿಧಾನಮಂಡಲ ಗ್ರಂಥಾಲಯ ಸಮಿತಿಯಿಂದ ನನಗೆ ಕೊಡಿಸಿದರು. ಪುಸ್ತಕ ಬರವಣಿಗೆಯಲ್ಲಿ ಏನೋಂದು ತಿಳಿಯದ ನನಗೆ ಚೊಚ್ಚಲ ಪುಸ್ತಕ ರಚನೆಗೆ ಸರ್ವ ರೀತಿಯಲ್ಲಿ ಸಹಕಾರ ನೀಡಿದ ಅಬ್ದುಲ್ ಅವರಿಗೆ ಋಣಿಯಾಗಿರುವೆ.

ಡಾ ಮಹದೇವ ಬಣಕಾರರು ಧೀಮಂತ ವ್ಯಕ್ತಿತ್ವದ ಕನ್ನಡದ ದಿಟ್ಟ ಸಾಹಿತಿ ಪ್ರಬುದ್ಧ ಆಲೋಚನೆಗಳಿಗೆ ಪ್ರಸಕ್ತ ರಾಜಕೀಯ ವಿದ್ಯಮಾನಗಳಿಗೆ ಬಿಚ್ಚು ಮನಸ್ಸಿನಿಂದ ಪ್ರತಿಕ್ರಿಯಿಸುತ್ತಿದ್ದ ಅನುಭಾವಿ ಚೇತನ. ಬಹುಮುಖ ವ್ಯಕ್ತಿತ್ವದ ಮಹದೇವ ಬಣಕಾರರ ಬರಹದ ಹರವು ಬಹು ವಿಸ್ತಾರವಾದುದು, ಸಾರ್ವಜನಿಕ ಜೀವನದಲ್ಲಿ ಪ್ರಮುಖ ಪಾತ್ರವಹಿಸಿದಂತೆ ಸತ್ವಯುತ ಸಾಹಿತ್ಯ ಕೃಷಿಯಿಂದ ಕನ್ನಡ ಸರಸ್ವತಿಯ ಮಡಿಲು ತುಂಬಿದವರು. ಅನುಭಾವ ಸಾಹಿತ್ಯ ಶರಣ ಸಾಹಿತ್ಯ ಕುರಿತು ಬರೆದಂತೆ ನಾಡು ನುಡಿಯ ವಿಷಯಗಳನ್ನು ಸಾಕಷ್ಟು ಕರತಲಾಮಲಕ ಮಾಡಿಕೊಂಡರಷ್ಟೇ ಅಲ್ಲದೇ ಅತ್ಯುತ್ತಮ ಸಂಶೋಧಕರು ಹೌದು. ತಮ್ಮ ಉದಾತ್ತ ವಿಚಾರಗಳಿಂದ ಸಾಹಿತ್ಯದಿಂದ ಹಿಡಿದು, ರಾಜಕೀಯ ಜೀವನವರೆಗೆ ಹೀಗೆ ದುಡಿದ ಎಲ್ಲ ರಂಗಗಳಲ್ಲಿ ತಮ್ಮ ಛಾಪನ್ನು ಮೂಡಿಸಿದ ಕೀರ್ತಿ ಬಣಕಾರರದ್ದು.

ಕವಿ, ವಾಗ್ಮಿ, ಶಾಸಕ, ಪತ್ರಿಕೋದ್ಯಮಿ ಹೀಗೆ ವಿವಿಧ ಕ್ಷೇತ್ರಗಳಲ್ಲಿ ಬಣಕಾರರು ಬಹುದೊಡ್ಡ ಅನುಭವವನ್ನು ಪಡೆದಿದ್ದಾರೆ. ನಾಡಿನ ಜ್ವಲಂತ ಸಮಸ್ಯೆಗಳನ್ನು ವಿವೇಚಿಸಿ, ಸಮಕಾಲಿನ ರಾಜಕೀಯ ಪ್ರಜ್ಞೆಯನ್ನು ಮೈಗೂಡಿಸಿಕೊಂಡ ಅವರು 'ಏನಾದರು ಆಗು ಮೊದಲು ಮಾನವನಾಗು' ಎಂಬ ಕವಿವಾಣಿಯಂತೆ ಬಣಕಾರರು ಏನೆಲ್ಲಾ ಆಗಿದ್ದರು ಒಬ್ಬ ಮಾನವತಾವಾದಿಗಳಾಗಿದ್ದರು.

ಬಣಕಾರರು ಸಾರ್ವತ್ರಿಕವಾಗಿ ಅಲ್ಲದೆ ವಿಧಾನ ಸಭೆ ವಿಧಾನ ಪರಿಷತ್ತಿನಲ್ಲಿ ಬಹು ಬೇಗನೆ ಗುರುತಿಸಿಕೊಂಡಿದ್ದರು. ತಮ್ಮ ಹಾಸ್ಯ

ಪ್ರವೃತ್ತಿಯಿಂದ ವಿಧಾನ ಸಭೆ ಮತ್ತು ವಿಧಾನ ಪರಿಷತ್ತಿನ ಸದನಗಳಲ್ಲಿ ನಡೆಯುತ್ತಿರುವ ಚರ್ಚೆಗಳಲ್ಲಿ ಅಂಕಿ ಅಂಶಗಳನ್ನಿಟ್ಟುಕೊಂಡು ತಮ್ಮ ನೇರ ಹಾಗೂ ಮೊನಚಾದ ಮಾತುಗಳಿಂದ ಅವರು ಅನ್ಯಾಯ ಅಕ್ರಮಗಳನ್ನು ಖಂಡಿಸುತ್ತಿದ್ದ ರೀತಿ ಸದನದಲ್ಲಿರುವ ಶಾಸಕರಿಗೆ ಸಭಾಪತಿಗಳಿಗೆ ಕಿರಿಕಿರಿ ಉಂಟು ಮಾಡುತ್ತಿತ್ತು. ಹೀಗಾಗಿ ಕೆಲವೊಮ್ಮೆ ಶಾಸನಸಭೆಯಲ್ಲಿ ಮಾತನಾಡಲು ಅವಕಾಶ ನೀಡದಿರುವಂತೆ ಮಾಡಲಾಗುತ್ತಿತ್ತು. ಇದರಿಂದ ಬಣಕಾರರು ಅನೇಕ ವೇಳೆ ನೊಂದುಕೊಂಡಿದ್ದು ನಿಜ.

ಇಂಥಹ ಮಹಾನ್ ವ್ಯಕ್ತಿತ್ವದ ಬಣಕಾರರ ಕುರಿತು ಪುಸ್ತಕ ರಚಿಸುವ ಭಾಗ್ಯ ಸಿಕ್ಕರುವುದು ನನಗೊಂದು ಸುವರ್ಣ ಅವಕಾಶ ಎಂದು ನಂಬಿ ಈ ಪುಸ್ತಕ ರಚಿಸಿರುತ್ತೇನೆ.

ಕುಮಾರಸ್ವಾಮಿ ಯಳವತ್ತಿಮಠ

# ಅನಿಸಿಕೆ

ತ್ಯಾಗ ಮತ್ತು ಸೇವೆ ತನ್ನ ಜೀವನದ ಅವಳಿ ಧ್ಯೇಯಗಳನ್ನಾಗಿ ರೂಪಿಸಿಕೊಂಡು, ಜಾತಿ, ಮತ ಬೇದವೆನ್ನದೆ, ಹಿಡಿದ ಛಲವನ್ನು ಬಿಡದೇ ಸಾರ್ವಜನಿಕ ಜೀವನವನ್ನು ಅಚ್ಚುಕಟ್ಟಾಗಿ ನಿಭಾಯಿಸಿ, ಬಂಡಾಯ ಪ್ರವೃತ್ತಿಯ ಸಾರ್ವಜನಿಕ ಜೀವನವನ್ನು ನಿರ್ಭೀತಿಯಿಂದ ನಿಭಾಯಿಸಿದ ಕೀರ್ತಿ ಡಾ. ಮಹದೇವ ಬಣಕಾರರಿಗೆ ಸಲ್ಲುತ್ತದೆ.

ಇಂದು ರಾಜಕೀಯ ಕ್ಷೇತ್ರ ಬಹಳಷ್ಟು ಕಲುಷಿತಗೊಂಡಿದೆ. ಸ್ವಾರ್ಥ, ಜಾತಿ ರಾಜಕಾರಣ, ಹಣದ ಅಹಂಭಾವ, ರಾಜಕೀಯ ಮುಖವಾಡ ಕಟ್ಟಿಕೊಂಡು ಏನಿಲ್ಲದ ಕಾರ್ಯಗಳನ್ನು ಕೈಗೊಂಡು ಕಪ್ಪುಹಣ ಸಂಪಾದಿಸಿ ಅಧಿಕಾರದ ಅಟ್ಟಹಾಸವನ್ನೇರಿದ ರಾಜಕಾರಣಿಗಳೇ ಹೆಚ್ಚು. ಇಂತಹ ಸನ್ನಿವೇಶದಲ್ಲಿ ಬಣಕಾರರು ಬದುಕಿದ್ದರೆ ಎಷ್ಟು ವ್ಯಥೆಪಡುತ್ತಿದ್ದರೋ ಗೊತ್ತಿಲ್ಲ.

ಸುಧಾರಣೆ ತರುವ ಪ್ರಯತ್ನವಂತೂ ಬಣಕಾರರು ಮಾಡುತ್ತಿದ್ದರು ಎನ್ನುವುದರಲ್ಲಿ ಎರಡು ಮಾತಿಲ್ಲ.

ಬಾಲ್ಯ ಜೀವನದಿಂದಲೇ ಡಾ. ಮಹದೇವ ಬಣಕಾರರ ಶಿಷ್ಯನಾಗುವ ಅವಕಾಶ ನನಗೆ ಒದಗಿ ಬಂದಿತು. ತಾವೂ ಬದುಕಿರುವವರೆಗೂ ತಮ್ಮ ಮಗನಂತೆ ನನ್ನನ್ನು ನೋಡಿಕೊಂಡರು. ಅವರ ಕರ್ತವ್ಯನಿಷ್ಠೆ, ಅಪಾರವಾದ ಪಾಂಡಿತ್ಯ, ಭಾಷಾಜ್ಞಾನ, ಗಡಿನಾಡಿನ ಬಗ್ಗೆ ಇದ್ದ ಅಪಾರ ಕಾಳಜಿ, ಸಾಮಾಜಿಕ ಚಿಂತನೆ, ದಕ್ಷತೆಯ ರಾಜಕಾರಣವನ್ನು ನಾನು ಎಂದೂ ಮರೆಯುವಂತಿಲ್ಲ. ಹಾಸ್ಯ ಪ್ರವೃತ್ತಿಯವರಾದ ಬಣಕಾರರು, ರಾಜಕೀಯ ದ್ವೇಷ, ವೈಷಮ್ಯ, ಎದುರಾಳಿಗಳನ್ನು ಮಣಿಸುವ ತಂತ್ರ ಇವೆಲ್ಲವನ್ನು ಜೀರ್ಣಿಸಿಕೊಂಡು, ಬಹಳ ಕಡಿಮೆ ಅವಧಿಯಲ್ಲಿ ಹೆಚ್ಚಿನ ಸಾಧನೆ ಮಾಡಿದ ಅವರು ಈ ರಾಜ್ಯ ಕಂಡ ಮಹಾನ್ ವ್ಯಕ್ತಿ.

ನೀವು ಬದುಕಿ, ಇತರರನ್ನೂ ಬದುಕಲು ಬಿಡಿ ಎಂದು ಧ್ಯೇಯ ವಾಕ್ಯ ಬಣಕಾರರಲ್ಲಿತ್ತು. ಇಂತಹ ಯೋಗ್ಯ ರಾಜಕಾರಣಿಗಳ ಸಂತತಿ ಪ್ರಸ್ತುತ ರಾಜಕೀಯ ದಿನಮಾನಗಳಲ್ಲಿ ಕಣ್ಮರೆಯಾಗುತ್ತಿರುವುದು ವಿಷಾದದ ಸಂಗತಿಯಾಗಿದೆ.

ಎಲ್ಲರನ್ನೂ ಜೊತೆಯಲ್ಲಿ ತೆಗೆದುಕೊಂಡು ಹೋಗುವ ಶಕ್ತಿ ಎಲ್ಲರಲ್ಲಿಯೂ ಇರುವುದಿಲ್ಲ ಅದಕ್ಕೆ ಬಣಕಾರರು ಅಪವಾದವಾಗಿದ್ದರು. ಅಧಿಕಾರದ ಗದ್ದುಗೆಗೆ ಅಂಟಿಕೊಳ್ಳದೇ, ಸದಾ ನಾಡು–ನುಡಿ, ಜಲ–ಭಾಷೆಗಳಿಗೆ ಒತ್ತು ನೀಡಿ ತಮ್ಮ ಜೀವನವನ್ನೇ ಮುಡುಪಾಗಿಟ್ಟ ಮೇಧಾವಿ ಬಣಕಾರರು, ನಂಬಿಕೊಂಡ ಸಿದ್ಧಾಂತಗಳಿಗೆ ಬದ್ಧರಾಗಿರುವ ರಾಜಕೀಯ ಬದ್ಧತೆ ಇತ್ತು. ಸಾಮಾಜಿಕ ತುಡಿತವಿತ್ತು. ದೀನದಲಿತರ ಬಗ್ಗೆ ಅಪಾರ ಅಂತಃಕರಣವಿತ್ತು. ಸಾಹಿತ್ಯ, ರಾಜಕೀಯ, ಸಾಮಾಜಿಕ ಕಾರ್ಯ ಹೀಗೆ ಎಲ್ಲಮಗ್ಗಲೂಗಳಲ್ಲಿ ಶ್ರಮಿಸುತ್ತಿದ್ದ ಬಣಕಾರರಿಗೆ ಆಗಾಗ ಆರೋಗ್ಯ ಕೈಕೊಡುತ್ತಿದ್ದ ಸಂದರ್ಭದಲ್ಲಿ, ಆಸ್ಪತ್ರೆಯಲ್ಲಿದ್ದುಕೊಂಡೇ ಎಲ್ಲವನ್ನೂ ನಿಭಾಯಿಸುತ್ತಿದ್ದರು. ಆರೋಗ್ಯದ ಕಡೆ ಗಮನಹರಿಸದೇ ಬಿಡದ ಛಲದಿಂದ ಹಲವಾರು ಪುಸ್ತಕಗಳನ್ನು ಆಸ್ಪತ್ರೆಯಲ್ಲಿದ್ದುಕೊಂಡೇ ಪೂರ್ಣಗೊಳಿಸಿದರು. ಇಂಥಹ ಸನ್ನಿವೇಶಗಳನ್ನು ಕಂಡು ನಾನು ಬೆರಗಾಗಿ ಹೋಗಿದ್ದೆ. ವೈದ್ಯರ ಸಲಹೆಯನ್ನು ಮೀರಿ ಸಾಹಿತ್ಯ ಮತ್ತು ರಾಜಕೀಯ ಚಟುವಟಿಕೆಗಳನ್ನು ಗಂಭೀರವಾಗಿ ತೆಗೆದುಕೊಂಡು, ಲೀಲಾಜಾಲವಾಗಿ ಮಾಡಿ ಮುಗಿಸುತ್ತಿದ್ದರು. ಇಂತಹ ಪುಣ್ಯ ಪುರುಷನಿಗೆ ಶಿಷ್ಯನಾಗಿ ಸೇವೆ ಮಾಡುವ ಅವಕಾಶ ಒದಗಿಬಂದಿದ್ದು ನನ್ನ ಪುಣ್ಯ. ಮಹದೇವ ಬಣಕಾರ ಎಂಬ ಚೇತನದ ದಿವ್ಯ ಜ್ಯೋತಿ ಆರಿಹೋಗಿದ್ದು ಕನ್ನಡಿಗರ ದೌರ್ಭಾಗ್ಯ.

ಅಬ್ದುಲ್ ಹುಬ್ಬಳ್ಳಿ
ಡಾ. ಮಹದೇವ್ ಬಣಕಾರ್
ರಾಷ್ಟ್ರೀಯ ಸ್ಮಾರಕ ಸಮಿತಿ ಸದಸ್ಯರು, ಹಾವೇರಿ

# ಸ್ವ ಪರಿಚಯ

ಹೆಸರು: ಕುಮಾರಸ್ವಾಮಿ ಯಳವತ್ತಿಮಠ

ತಂದೆಯ ಹೆಸರು : ಲಿಂಗಯ್ಯ

ಹುಟ್ಟಿದ ದಿನಾಂಕ: 15.09.1974

ಹುಟ್ಟಿದ ಸ್ಥಳ : ಹಾಲಗಿ

ಮನೆ ವಿಳಾಸ : ಕುಮಾರಸ್ವಾಮಿ ಲಿಂಗಯ್ಯ ಯಳವತ್ತಿಮಠ
ಸಾ..ಪೋ. ಹಾಲಗಿ
ತಾ.ಜಿ. ಹಾವೇರಿ

ಅಂಚೆ ವಿಳಾಸ : ಕುಮಾರಸ್ವಾಮಿ ಲಿಂಗಯ್ಯ ಯಳವತ್ತಿಮಠ
ಸಾ..ಪೋ. ಹಾಲಗಿ
ತಾ.ಜಿ. ಹಾವೇರಿ

ವಿದ್ಯಾರ್ಹತೆ : ಎಸ್.ಎಸ್.ಎಲ್.ಸಿ.
ಸಮೂಹ ಸಂವಹನ ಡಿಪ್ಲೋಮಾ ಹಾಗೂ
ಬಿ.ಎ. (ಹಿಂದಿ)

ಅನುಭವ : ಕನ್ನಡ ದಿನ ಪತ್ರಿಕೆಗಳಾದ ಕನ್ನಡ ಪ್ರಭ ಹಾಗೂ ಪ್ರಜಾವಾಣಿಯಲ್ಲಿ ಸುಮಾರು ಹತ್ತು ವರ್ಷಗಳ ಕಾಲ ವರದಿಗಾರನಾಗಿ ಸೇವೆ ಸಲ್ಲಿಸಿದ ಅನುಭವ.

ಪ್ರಸ್ತುತ ಹಾವೇರಿ ಜಿಲ್ಲೆಯ ಗುತ್ತಲ ಪಟ್ಟಣದಲ್ಲಿ ಕನ್ನಡಪ್ರಭ ದಿನ ಪತ್ರಿಕೆಯಲ್ಲಿ ವರದಿಗಾರನಾಗಿ ಸೇವೆ ಸಲ್ಲಿಸುತ್ತಿದ್ದೇನೆ.

ಹವ್ಯಾಸ : ದಿನ ಪತ್ರಿಕೆ, ಕಾದಂಬರಿ ಕಥೆಗಳನ್ನು ಓದುವುದು, ನಾಟಕ ನೋಡುವುದು ಹಾಗೂ ಕ್ರಿಕೆಟ್, ವ್ಹಾಲಿಬಾಲ್, ಕೇರಂ ನನ್ನ ನೆಚ್ಚಿನ ಕ್ರೀಡೆಗಳು.

**ರುದ್ರಪ್ಪ ಮಾನಪ್ಪ ಲಮಾಣಿ**
ಜವಳಿ ಮತ್ತು ಮುಜರಾಯಿ ಸಚಿವರು
ಹಾಗೂ
ಹಾವೇರಿ ಜಿಲ್ಲಾ ಉಸ್ತುವಾರಿ ಸಚಿವರು

ಕೊಠಡಿ ಸಂಖ್ಯೆ: 234-235
2ನೇ ಮಹಡಿ, ವಿಕಾಸಸೌಧ
ಬೆಂಗಳೂರು-560 001
ದೂರವಾಣಿ ಸಂ: 080-22034584
22267889

ಕ್ರ.ಸಂಜಮು.ಜಿ.ಸ/ಹಾ/645/2017-18 ದಿನಾಂಕ :05.08.2017

**ಸಂದೇಶ**

ಡಾ|| ಮಹದೇವ ಬಣಕಾರ ಇವರು ಕರ್ನಾಟಕ ವಿಧಾನಸಭೆ ಮತ್ತು ವಿಧಾನಪರಿಷತ್ ಸದಸ್ಯರಾಗಿ ಹಾವೇರಿ ಜಿಲ್ಲೆಯಲ್ಲಿ ಅನೇಕ ಅಭಿವೃದ್ಧಿ ಕಾರ್ಯಗಳನ್ನು ಮಾಡಿರುವ ಇವರು ಇದರ ಜೊತೆಗೆ ಸಾಹಿತ್ಯ ಲೋಕದಲ್ಲಿ ಸಾಹಿತಿ, ಆಧುನಿಕ ವಚನಕಾರ ಹಾಗೂ ಸಾಂಸ್ಕೃತಿಕ ಕ್ಷೇತ್ರದಲ್ಲಿ ಅಪಾರ ಸೇವೆಯನ್ನು ಸಲ್ಲಿಸುತ್ತಾರೆ. ಬ್ಯಾಡಗಿ ವಿಧಾನಸಭಾ ಕ್ಷೇತ್ರದಿಂದ ಚುನಾಯಿತರಾಗಿ ಆಗಿನ ಕಾಲದಲ್ಲಿ ಅನೇಕ ಅಭಿವೃದ್ಧಿ ಕಾರ್ಯಗಳನ್ನು ಮಾಡಿ ನಂತರದಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡು ವಿಧಾನಪರಿಷತ್ ಸದಸ್ಯರಾಗಿ ಶಾಸಕಾಂಗದಲ್ಲಿ ಅನೇಕ ಜನಪರ ಹೋರಾಟಗಳನ್ನು ಮಾಡಿರುತ್ತಾರೆ. ಸದನದಲ್ಲಿ ಇವರು ಮಾಡಿರುವ ಅತ್ಯುತ್ತಮ ಭಾಷಣಗಳನ್ನು ಒಟ್ಟುಗೂಡಿಸಿ ಹೊರತರುತ್ತಿರುವುದು ಸಂತೋಷದ ವಿಷಯವಾಗಿದೆ.

ಡಾ|| ಮಹದೇವ ಬಣಕಾರರವರ ಸದನದಲ್ಲಿನ ಚರ್ಚೆಗಳು, ವಿಚಾರಧಾರೆಗಳು ಹಾಗೂ ಭಾಷಣಗಳ ಸಂಗ್ರಹವು ಉತ್ತಮ ರೀತಿಯಲ್ಲಿ ಮುದ್ರಿತಗೊಂಡು ಹೊರಬರಲಿ ಎಂದು ಆಶಿಸುತ್ತಾ ಅವರ ವಿಚಾರಧಾರೆಗಳು ಎಲ್ಲರನ್ನೂ ತಲುಪಲಿ ಎಂದು ಹಾರೈಸುತ್ತೇನೆ.

(ರುದ್ರಪ್ಪ. ಮಾ. ಲಮಾಣಿ)

# ಪರಿವಿಡಿ



## ಭಾಗ–1
## ಮಹದೇವ ಬಣಕಾರರು ನಡೆದು ಬಂದ ದಾರಿ

## ಭಾಗ–2

## ವಿಧಾನ ಸಭೆ ಮತ್ತು ವಿಧಾನ ಪರಿಷತ್ತಿನಲ್ಲಿ ಬಣಕಾರರು

ಭಕ್ತ ಶ್ರೇಷ್ಠ ಕನಕದಾಸ, ತ್ರಿಪದಿ ಬ್ರಹ್ಮ ಸರ್ವಜ್ಞ, ಸಂತ ಶಿಸುನಾಳ ಶರೀಫರು ಜನಿಸಿದ್ದು ಹಾವೇರಿ ಜಿಲ್ಲೆಯ ಪುಣ್ಯ ಭೂಮಿಯಲ್ಲಿ. ಇಂತಹ ಪುಣ್ಯ ಪುರುಷರ ನಾಡಿನ ಹಾವೇರಿ ಸಂಗೀತದ ಸೊಂಪು, ಶಿಲ್ಪ ಭೂಮಿಯ ತಂಪು, ಸಾಹಿತ್ಯದ ಇಂಪು ರಂಗಭೂಮಿಯ ರಂಗು ಹೀಗೆ ಎಲ್ಲ ಕ್ಷೇತ್ರಗಳಲ್ಲಿ ತನ್ನದೇ ಆದ ವೈಶಿಷ್ಟ್ಯತೆಯಲ್ಲಿ ಹಾವೇರಿ ಜಿಲ್ಲೆ ಮೆರೆಯುತ್ತದೆ.

ಕಷ್ಟಕಾಲದ ಒಂದು ಘಟ್ಟದಲ್ಲಿ ಸಾಹಿತ್ಯವನ್ನು ಮೇರು ಪಂಕ್ತಿಯಲ್ಲಿ ತರುವುದು ಅಷ್ಟು ಸುಲಭದ ಮಾತಲ್ಲ. ಅಂತಹ ಸಂದರ್ಭದಲ್ಲಿ ಕನಕದಾಸರು, ಸರ್ವಜ್ಞ, ಶರೀಪ ಶಿವಯೋಗಿಗಳು, ಕಾದಂಬರಿ ಪಿತಾಮಹ ಗಳಗನಾಥರು, ಶಾಂತಕವಿಗಳು, ಶ್ರೀನಿವಾಸ ರಿತ್ತಿ, ಶ್ರೀನಿವಾಸ ಹಾವನೂರ, ವಿ.ಕೃ.ಗೋಕಾಕ್‌ರಂಥಹ ಸಾಹಿತ್ಯ ದಿಗ್ಗಜರ ಕೊಡುಗೆ ಅಪಾರವಾಗಿದೆ. ಅಷ್ಟೆ ಅಲ್ಲದೆ ಮೈನವಿರೇಳಿಸುವಂತಹ ವಿಸ್ಮಯಗಳನ್ನು ಸಾಹಿತ್ಯದಲ್ಲಿ ಸೆರೆಹಿಡಿದಿದ್ದಾರೆ. ಅದಕ್ಕೆಂದೇ ಇಂದು ನಮ್ಮ ನಾಡಿನಲ್ಲಿ ಕನ್ನಡ ನವ್ಯ ಸಾಹಿತ್ಯ ಸುಲಲಿತವಾಗಿದೆ.

ಇನ್ನೂ ಒಂದು ಹೆಜ್ಜೆ ಮುಂದೆ ಬಂದರೆ ಜಿಲ್ಲೆಯ ಸಾಹಿತ್ಯ ದಿಗ್ಗಜರ ಪಟ್ಟಿಯೇ ನಮ್ಮ ಕಣ್ಮುಂದೆ ನಿಲ್ಲುತ್ತದೆ. ಚಂದ್ರಶೇಖರ್ ಪಾಟೀಲ್, ಕಸ್ತೂರಿ ಕೋಶ ಬರೆದ ಕವಿಲಿ, ನಾಡೋಜ ಡಾ:ಪಾಟೀಲ್ ಪುಟ್ಟಪ್ಪ, ಡಾ:ಮಹದೇವ ಬಣಕಾರ, ಡಾ:ಚನ್ನಕ್ಕ ಪಾವಟೆ, ಮೋಹನ್ ನಾಗಮ್ಮನವರ, ಬಿ.ಜಿ. ಬಣಕಾರ, ಶ್ರೀಮತಿ ಸಂಕಮ್ಮ ಸಂಕಣ್ಣನವರ ಇನ್ನೂ ಅನೇಕಾನೇಕ ಸಾಹಿತಿಗಳು ಈ ಜಿಲ್ಲೆಯ ಹೆಮ್ಮೆಯ ಸಾಹಿತ್ಯದ ಗರಿಗಳೆನ್ನಬಹುದು. ತಮ್ಮ ವಿಶಿಷ್ಟ ಸಾಹಿತ್ಯದ ಮೂಲಕ ನಾಡಿನ ಸೊಗಡನ್ನು, ಪ್ರಾದೇಶಿಕ ಪರಿಸರವನ್ನು, ಒಟ್ಟಿನಲ್ಲಿ ಸಾಹಿತ್ಯದ ಸೌರಭವನ್ನು ನಾಡಿನಾದ್ಯಂತ ಪಸರಿಸಿ ಸಮಾಜದಲ್ಲಿನ ಏರಿಳಿತಗಳನ್ನು ಸಾಹಿತ್ಯದ ಮೂಲಕ ಸರಿಪಡಿಸಿದ ಮಹನೀಯರಿವರು.

ಮತ್ತೊಂದು ವಿಶಿಷ್ಠ ದಿಕ್ಕಿನತ್ತ ಕಣ್ಣು ಹಾಯಿಸಿದರೆ, ಅಖಂಡ ಭಾರತ ಸ್ವಾತಂತ್ರ್ಯಕ್ಕಾಗಿ ದೇಶಭಕ್ತಿಯ ಕಿಡಿ ಪ್ರಜ್ವಲಿಸಿದ್ದು ಇದೇ ಹಾವೇರಿ ಎಂದು ನಿಸ್ಸಂದೇಹವಾಗಿ ಹೇಳಬಹುದು. ಸ್ವಾತಂತ್ರ್ಯ ಹೋರಾಟಕ್ಕಾಗಿ ತಮ್ಮ ಪ್ರಾಣವನ್ನೇ ಮುಡುಪಾಗಿಟ್ಟು, ಹೋರಾಟ ಮಾಡಿದ ಪುಣ್ಯಪುರುಷರ ದಂಡೇ ಈ ಹಾವೇರಿ ಜಿಲ್ಲೆಯಲ್ಲಿ ಇದೆ. ತಿಳಿದಷ್ಟು ಹೇಳಬೇಕೆಂದರೆ, ಕರ್ನಾಟಕ ಯಾವ ಮೂಲೆಯಲ್ಲಿ ನಿಂತು ಸ್ವಾತಂತ್ರ್ಯದ ಒಂದು ಕೂಗು ಹಾಕಿದರೆ ಸಾಕು ಅದು ಹಾವೇರಿ ಜಿಲ್ಲೆಯ

ಸ್ವಾತಂತ್ರ್ಯ ಯೋಧರ ಮನೆ ತಟ್ಟುತ್ತದೆ. ಈ ಮಾತು ಅಕ್ಷರಶ: ನಿಜ ಜಿಲ್ಹೆಯಲ್ಲಿದಷ್ಟು ಸ್ವಾತಂತ್ರ್ಯ ಸೇನಾನಿಗಳು ಕನ್ನಡನಾಡಿನ ಇನ್ನಾವ ಜಿಲ್ಹೆಯಲ್ಲಿ ಇರಲಿಕ್ಕಿಲ್ಲ ಎಂದರೆ ತಪ್ಪಾಗದು. ಹಳ್ಳಿಕೇರೆ ಗುದ್ಲೆಪ್ಪ, ಗಾಂಧೀಜಿಯವರ ಪರಮಾಪ್ತ ಶಿಷ್ಯ ವೀರಸೇನಾನಿ ಹುತಾತ್ಮ ಮಹದೇವ ಮೈಲಾರ, ಹೊಸಮನಿ ಸಿದ್ಧಪ್ಪ, ಟಿ.ಆರ್. ನೇಸ್ವಿ, ಕೆ.ಎಫ್. ಪಾಟೀಲ್, ಸರ್ದಾರ್ ವೀರನಗೌಡ್ರು, ಮಡಿವಾಳರ ತಿರಕಪ್ಪ, ವೀರಯ್ಯ ಪರಮಣ್ಣ ಹರಕಂಗಿ, ಹೀರೇಮಠ, ಪಂಚಾಕ್ಷರಪ್ಪ ಒಳಸಂಗದ, ವೀರುಪಾಕ್ಷಪ್ಪ ಅಂಗಡಿ ಹೀಗೆ ಮುಗಿಯದ ದಿಟ್ಟರ ಪಟ್ಟಿಯೇ ನಮ್ಮ ಕಣ್ಮುಂದೆ ನಿಲ್ಲುತ್ತದೆ. ಇಂತಹ ಪುಣ್ಯವೀರ ಸೇನಾನಿಗಳಿಗೆ ಜನ್ಮ ನೀಡಿದಕ್ಕಿಂತಹ ಇನ್ನಾವ ಹೆಸರು ಬೇಕಿದೆ ಈ ಹಾವೇರಿ ಜಿಲ್ಹೆಗೆ.

ಸಾಮಾಜಿಕವಾಗಿ, ಸಾಹಿತ್ಯಕವಾಗಿ, ಬೆಳೆದ ಹಾವೇರಿ ಜಲ್ಲೆ ರಾಜಕೀಯತನವನ್ನು ಅಷ್ಟೇ ಗಟ್ಟಿಗೊಳಿಸಿಕೊಂಡಿದೆ. ಇಂಥಹ ನಾಡಿನಲ್ಲಿ ಇಗಾಗಲೇ ರಾಜಕೀಯವಾಗಿ, ಸಾಹಿತ್ಯಕವಾಗಿ, ಸಾಮಾಜಿಕವಾಗಿ, ಪ್ರಸಿದ್ಧರಾದವರ ಕುರಿತು ಬರೆಯುವದಕ್ಕಿಂತ, ಎಲೆಮರೆಕಾಯಿಯಂತೆ, ಬೆಳಕಿಗೆ ಬಾರದ ಅಷ್ಟೊಂದು ಪ್ರಚಾರ ಪಡೆಯದ ಪ್ರತಿಭಾವಂತರನ್ನು ಗುರುತಿಸಿ ಪುಸ್ತಕ ರಚಿಸುವುದು ಮುಖ್ಯವಾಗಿದೆ.

ಸಾಹಿತ್ಯ ಮತ್ತು ರಾಜಕೀಯ ಒಂದು ನಾಣ್ಯದ ಎರಡು ಮುಖಗಳಿದ್ದಂತೆ, ಇವುಗಳ ನಡುವಿನ ಬಾಂಧವ್ಯ ಎಣ್ಣೆ ಸೀಗೆಕಾಯಿಯಂತೆ. ಅಂತೆಯೇ ಇಂತಹ ಪವಿತ್ರ ಬಾಂಧವ್ಯವನ್ನು ಕಟ್ಟಿಬೆಳಸಿದವರು ಅದೆಷ್ಟೋ ಮಹನೀಯರು. ಇಂಥಹ ಮಹನೀಯರ ಸಾಲಿನಲ್ಲಿ ಹಾವೇರಿ ಜಿಲ್ಹೆಯ ಬ್ಯಾಡಗಿ ತಾಲೂಕಿನ ಮೋಟೇಬೆನ್ನೂರ ಗ್ರಾಮದ ಸೃಜನಶೀಲವ್ಯಕ್ತಿ "ಮಹದೇವ ಬಣಕಾರರು" ಬಂದು ನಿಲ್ಲುತ್ತಾರೆ.

ನಮ್ಮ ಕನ್ನಡ ನಾಡಿನಲ್ಲಿ ಏಕಕಾಲದಲ್ಲಿ ಶ್ರೇಷ್ಠ ರಾಜಕಾರಣಿಯಾಗಿ, ಉತ್ತಮ ಸಾಹಿತಿಯಾಗಿ ಮೇರು ವೃತ್ತದಲ್ಲಿ ರೂಪಗೊಂಡವರು ಅತೀ ವಿರಳ. ಇದಕ್ಕೆ ಅಪವಾದವೆಂಬಂತೆ ಮಹದೇವ ಬಣಕಾರರು ವಿಭಿನ್ನ ರೀತಿಯಲ್ಲಿ ತಮ್ಮ ಸೃಜನಶೀಲ ಪ್ರತಿಭೆಯನ್ನು ಮೆರೆದ ಶ್ರೇಷ್ಠ ವ್ಯಕ್ತಿ. ಬಣಕಾರರು ಆಧುನಿಕ ವಚನಕಾರಾಗಿ ಹೊಸಗನ್ನಡ ಸಾಹಿತ್ಯ ಲೋಕದಲ್ಲಿ ಬಹಳಷ್ಟು ಪರಿಚಿತರಾದವರು. ನಾಡಿನ ಬಹುತೇಕ ಪ್ರತಿಭಾವಂತ ಸಾಹಿತಿಗಳಾಗಲಿ, ಶ್ರೇಷ್ಠ ರಾಜಕಾರಣಿಯಾಗಲಿ ಕಾಲೇಜಿನ ಮೆಟ್ಟಿಲುಗಳನ್ನೇರಿಲ್ಲ. ಕೇವಲ ಒಬ್ಬ ವ್ಯಕ್ತಿ ಪಡೆದ ಪದವಿಗಳ ಆಧಾರದಿಂದ ಆತನ ಪ್ರತಿಭೆಯನ್ನು ಗುರುತಿಸಲಾಗದು ಎಂಬುದಕ್ಕೆ ಬಣಕಾರರು ಪ್ರತ್ಯಕ್ಷ ಸಾಕ್ಷಿಯಂತಿದ್ದಾರೆ.

ಪ್ರೌಢ ಶಿಕ್ಷಣವನ್ನು ಪೂರೈಸದೆ ಮಣ್ಣಿನಮಗನಾಗಿ ಹುಟ್ಟಿ ದನಕರುಗಳ ಹಿಂದೆ ಸುತ್ತಿಸುಳಿದು, ಜನಪದ ಸತ್ವವನ್ನೇ ಮೈಗೂಡಿಸಿಕೊಂಡ ಬಂದ ಬಣಕಾರರು

ಕವಿಯಾಗಿ, ಸೃಜನಶೀಲ ಸಾಹಿತಿಯಾಗಿ, ಪತ್ರಿಕೋದ್ಯಮಿಯಾಗಿ, ವಚನಕಾರರಾಗಿ ಸಂಶೋಧಕರಾಗಿ, ಕನ್ನಡ ನಾಡು ಹೋರಾಟಗಾರರಾಗಿ, ನಾಟಕಗಾರರಾಗಿ, ಕನ್ನಡಿಗರ ಮನಸ್ಸಿನಲ್ಲಿ ರೂಪಗೂಂಡವರು. ಹೀಗೆ ಹತ್ತು ಹಲವು ಮುಖಗಳಲ್ಲಿ ಬೆಳೆದ ಬಣಕಾರರು ಉದಾತ್ತ ವಿಚಾರವಾದಿಗಳಾಗಿ ದುಡಿದ ಎಲ್ಲ ರಂಗಗಳಲ್ಲಿ ತಮ್ಮದೆ ಛಾಪು ಮೂಡಿಸಿದ ಕೀರ್ತಿ ಬಣಕಾರರಿಗೆ ಸಲ್ಲುತ್ತದೆ.

ಬಹುಮುಖ ಪ್ರತಿಭೆಯುಳ್ಳ ಬಣಕಾರರು ಸಾಹಿತ್ಯ, ರಾಜಕೀಯ ಇನ್ನೂ ಅನೇಕ ರಂಗಗಳಲ್ಲಿ ನಡೆದುಬಂದ ದಾರಿ ಕ್ರಮಿಸಿದ ದೂರ ಅಗಣಿತ. ಈ ಹಿನ್ನೆಲೆಯಲ್ಲಿ ಮಹದೇವ ಬಣಕಾರರ ಸಾಹಿತ್ಯ ಮತ್ತು ರಾಜಕೀಯ ವಿಶೇಷವಾಗಿ ಸಾಮಾಜಿಕ ಜೀವನದ ಮಹತ್ತರ ಅಂಶಗಳನ್ನು ಸಾಧ್ಯವಾದಷ್ಟು ಈ ಪುಸ್ತಕದಲ್ರಿ ಅಳವಡಿಸಲು ಶ್ರಮಿಸಲಾಗಿದೆ.

## ಮಹದೇವ ಬಣಕಾರರ ಬಾಲ್ಯ ಜೀವನ:

ಅವಿಭಜಿತ ಧಾರವಾಡ ಜಿಲ್ಲೆಯಿಂದ ಬೇರ್ಪಟ್ಟ ಹಾವೇರಿ ಜಿಲ್ಲೆಯ ಬ್ಯಾಡಗಿ ತಾಲೂಕಿನ ಗಂಡು ಮೆಟ್ಟಿನ ನೆಲ, ಕೀರ್ತಿವಂತ ಸುಪುತ್ರರಿಗೆ ಜನ್ಮನೀಡಿದ ಗ್ರಾಮವೆಂದೇ ಸುತ್ತಮುತ್ತ ಖ್ಯಾತಿ ಹೊಂದಿದ ಮೊಟೇಬೆನ್ನೂರ ಬಣಕಾರರಿಗೆ ಜನ್ಮ ನೀಡಿದ ಪಣ್ಯಭೂಮಿ ಇಂಥಹ ಪುಣ್ಯಭೂಮಿಯ, ಗಂಡು ಮೆಟ್ಟಿನ ಊರಲ್ಲಿ ಓರ್ವ ಸ್ವಾತಂತ್ರ್ಯ ಪ್ರವೃತ್ತಿಯ ಹುಟ್ಟು ಹೋರಾಟಗಾರರಾದ ಮಹದೇವ ಬಣಕಾರರು 1932 ಅಕ್ಟೋಬರ್ 3ರಂದು ರೈತ ಕುಟುಂಬದ ಸಾಧ್ವಿ ಗದಿಗೆಪ್ಪ ಹಾಗೂ ಸಿದ್ದಮ್ಮನವರ ಉದರದಲ್ಲಿ ಜನಿಸಿದರು.

ಬಣಕಾರರು ಹುಟ್ಟಿದ್ದು ಶ್ರೀಮಂತ ದೊಡ್ಡ ರೈತಾಪಿ ಕುಟುಂಬದಲ್ಲಿ. ಬಣಕಾರ ಎಂಬುದು ತಮ್ಮ 'ಬಣದ' ಮುಖ್ಯ ಕಾರಣವಾಗಿ 'ಬಣಕಾರ' ಎಂಬ ಹೆಸರು ಪೂರ್ವಜರಿಂದ ಬಂದಿದೆ. ಸಾಂಪ್ರದಾಯವೆಂಬಂತೆ ಊರಿನಲ್ಲಿ ಗೌಡ, ಶಾನುಭೋಗ, ಬಣಕಾರ ಇವರು ಬುದ್ಧಿವಂತರೆಂಬಂತೆ ಪಂಚರಾಗಿದ್ದರು. ಒಂದು ಕಾಲದಲ್ಲಿ ಊರಿನಲ್ಲಿ ಇವರು ಹೇಳಿದ್ದೇ ವೇದವಾಕ್ಕೆವಾಗಿತ್ತು. ಬಣಗಳ ಓಡೆಯರಂತೆ ತೀರ್ಮಾನಿಸುವ ಕಾರ್ಯ ಈ ಮನೆತನಗಳದ್ದಾಗಿತ್ತು. ಹಾಗೆಂದೆ ಊರಿನಲ್ಲಿ ಏನೇ ತಂಟೆತಗಾದೆಗಳು ಬಂದರೆ ಬಣಕಾರರ ಮನೆತನ ಮಧ್ಯಪ್ರವೇಶಿಸುತ್ತಿತ್ತು. ಊರಿನಲ್ಲಿ ಹೆಣ್ಣು – ಗಂಡು ಅಂತಾ ಕೊಡಕೊಳ್ಳುವ ವಿಚಾರದಲ್ಲಿ, ವರೋಪಚಾರ, ಇನ್ನಿತರ ವಡಂಬಿಕೆಗಳಿದ್ದರೂ ಈ ಬಣಕಾರರ ಮನೆತನದ ಸಮಕ್ಷಮವೇ ತೀರ್ಮಾನವಾಗುವ ಕಾಲ ಅದಾಗಿತ್ತು. ಈ ಸಂದರ್ಭದಲ್ಲಿ ಗೌರವಕ್ಕೆ ಎನ್ನುವಂತೆ ಮೊದಲನೆ

ಅಗ್ರತಾಂಬೂಲ ಇವರಿಗೇ ಸಲ್ಲಬೇಕು ನಂತರ ದೇವತೆಗಳಿಗೆ, ಊರಿನವರಿಗೆ ಅನ್ನುವ ಸಂಪ್ರದಾಯ ಬೆಳೆದು ಬಂದಿತ್ತು ಎಲ್ಲಾ ಜಾತಿಗಳಲ್ಲಿಯೂ "ಬಣಕಾರರು" ಎಂಬ ಗೌರವದ ಹುದ್ದೆ ಯಾವಾಗಲೂ ಇತ್ತು ಇಂದಿನ ದಿನಮಾನಗಳಲ್ಲಿ ಈ ಪದ್ಧತಿ ನಶಿಸಿ ಹೊಗಿದ್ದರೂ ವಿಶೇಷವಾಗಿ  ಮದುವೆ ಕಾರ್ಯದಲ್ಲಿ ಈ ಪದ್ಧತಿ ಪ್ರಮುಖ ಕಾರ್ಯಕ್ರಮವಾಗಿ ಈಗಲೂ ಉಳಿದುಕೊಂಡು ಬಂದಿರುವ ವಿಚಾರವಾಗಿದೆ ಇಂಥಹ ಗೌರವಾನ್ವಿತ ಕುಟುಂಬದಲ್ಲಿ ಬಣಕಾರರು ಬೆಳೆದು ಬಂದವರು.

ಎಂಥಹ ಆದರ್ಶ ಕುಟುಂಬವಿರಲಿ, ಶ್ರೀಮಂತ ಕುಟುಂಬವಿರಲಿ ಸ್ವಾಭಾವಿಕವೆಂಬಂತೆ ಸಂದಿಗ್ಧ ಸಮಯದಲ್ಲಿ ಸಾಕಷ್ಟು ಭಿನ್ನಾಬಿಪ್ರಾಯಗಳನ್ನು ಕಾಣುವುದು ಸಹಜ ಇದಕ್ಕೆ ಬಣಕಾರರ ಕುಟುಂಬ ಹೊರತಾಗಿರಲಿಲ್ಲ.

ಮಹದೇವ ಬಣಕಾರರ ತಂದೆ ಗದಿಗೆಪ್ಪನವರ ಮತ್ತು ಇವರ ದೊಡ್ಡಪ್ಪ ಚನ್ನಬಸಪ್ಪನವರು ಒಂದು ತಾಯಿಯ ಮಕ್ಕಳಾದರೆ, ಮನೆಯಲ್ಲಿ ಕುಟುಂಬದ ಜವಾಬ್ದಾರಿಯನ್ನು ಹೊತ್ತು ವ್ಯವಹರಿಸುವ ಬಸವಣ್ಣೆಪ್ಪನವರು ಅಂದರೆ ಬಣಕಾರರ ಕಾಕರವರು ಇನ್ನೊಬ್ಬ ತಾಯಿಯ ಮಗನಾಗಿದ್ದರು. ದೊಡ್ಡಪ್ಪ ಚನ್ನಬಸಪ್ಪನವರಿಗೆ ಮಕ್ಕಳಿರಲಿಲ್ಲಾ ಬಸವಣ್ಣೆಪ್ಪನವರು ಚುರುಕು ಬುದ್ಧಿಯವರಾಗಿದ್ದರು. ತಮ್ಮ ಜಾಣ್ಮೆಯಿಂದ ಸಮಗ್ರ ಆಸ್ತಿಯನ್ನು ಲಪಟಾಯಿಸುವ ಉದ್ದೇಶದಿಂದ ಚನ್ನಬಸಪ್ಪನವರ ಮನವೊಲಿಸಿ ತಮ್ಮ ಮಗನೊಬ್ಬನನ್ನು ಚನಬಸಪ್ಪನರಿಗೆ ದತ್ತಕ ಮಾಡಿಸಿಬಿಟ್ಟರು. ಮೂಕ ಪ್ರಾಣಿಯಂತೆ ಇದ್ದ ಬಣಕಾರರ ತಂದೆ ಗದಿಗೆಪ್ಪನವರಿಗೆ ಇದರಿಂದ ಮನಸ್ಸಿಗೆ ಆಘಾತವಾಯಿತು. ಮಹಾದೇವ ಬಣಕಾರರಿಗೆ ಒಬ್ಬ ಅಣ್ಣ ಇಬ್ಬರು ತಮ್ಮಂದಿರು,ಇಬ್ಬರು ಅಕ್ಕಂದಿರು ಹಾಗು ಒಬ್ಬ ತಂಗಿ ಹೀಗೆ ಬಣಕಾರರದು ದೊಡ್ಡ ಕುಟುಂಬ. ಹೀಗಿರುವಾಗ ಇವರೆಲ್ಲರನ್ನ ಬಸವಣ್ಣೆಪ್ಪನವರು ಮಹದೇವ ಬಣಕಾರರ ದೊಡ್ಡ ಕುಟುಂಬವನ್ನು ಅಷ್ಟೊಂದು ನೋಡಿಕೊಳ್ಳಲಿಲ್ಲ, ಹೀಗಿರುವಾಗ ಗದಿಗೆಪ್ಪನವರು ಹಾಗೂ ಅವರ ಮಕ್ಕಳು ಮೇಲಿಂದ ಮೇಲೆ ಕೌಟುಂಬಿಕ ಹಿಂಸೆಗೆ ಬಲಿಯಾಗತೊಡಗಿದರು. ದನಕಾಯುವ ಕೆಲಸಕ್ಕೆ, ಒಕ್ಕಲುತನ ಕೆಲಸಕ್ಕೆ ಕಳುಹಿಸಿ ಮನೆಯ ಆಳು ಮಕ್ಕಳಂತೆ ಅತ್ಯಂತ ಕೀಳುದೃಷ್ಠಿಯಿಂದ ಗದಿಗೆಪ್ಪನವರ ಸಂಸಾರವನ್ನು ನೋಡಲಾಯಿತು.

ಓದಿನಲ್ಲಿ ಹೆಚ್ಚು ಆಸಕ್ತಿಯನ್ನಿಟ್ಟುಕೊಂಡ ಬಾಲಕ ಮಹದೇವ ರಾತ್ರಿಹೊತ್ತು ದೀಪಹಚ್ಚಿಕೊಂಡು ಓದಬೇಕಾದ  ಸಂದರ್ಭದಲ್ಲಿ, ಅಸೂಯೆಯಿಂದ ಅವರ ದೊಡ್ಡಪ್ಪ ದೀಪ ಆರಿಸಿ ಬೈದು ಕೆಲಸಕ್ಕೆ ಹಚ್ಚುತ್ತಿದ್ದರು. ಅಲ್ಲದೆ ಮಹದೇವ ಬಣಕಾರರ ಅಣ್ಣನಾದ ಮಹಾಲಿಂಗಪ್ಪನವರು ಸಹಿತ ಮಹದೇವರಂತೆ ಓದಿನಲ್ಲಿ ತುಂಬಾ

ಆಸಕ್ತಿಯೊಂದಿಗೆ ಬಹಳಷ್ಟು ಜಾಣರೆನಿಸಿಕೊಂಡಿದ್ದರು. ಶಾಲೆಯಲ್ಲಿ ಗುರುಗಳಿಂದ ಮಹಾಲಿಂಗಪ್ಪನವರು ಪ್ರಶಂಸೆಗೊಳಗಾಗಿದ್ದರು. ಗುರುಗಳ ಒತ್ತಡಕ್ಕೆ ಮಣಿದು ಏನೆ ಕಷ್ಟಬಂದರೂ ಓದಬೇಕೆಂಬ ಮಹಾದಾಸೆಯೊಂದಿಗೆ ದೊಡ್ಡಪ್ಪ ಬಸವಣೆಪ್ಪನವರಿಂದ ಪರವಾನಿಗೆ ಪಡೆದು ಮಾಧ್ಯಮಿಕ ಶಾಲೆಯನ್ನು ಪೂರ್ಣಗೊಳಿಸಿ, ಮುಂದೆ ಮನೆಯವರೆಲ್ಲರ ಮನಸ್ಸನ್ನು ಗೆದ್ದು ಮೆಟ್ರಿಕ್ ಪಾಸ್ ಮಾಡಿಕೊಂಡರು. ಮುಂದೆ ಮಹಾಲಿಂಗಪ್ಪನವರು ಕಾಲೇಜಿಗೆ ಹೋಗಬೇಕೆನ್ನುವಷ್ಟರಲ್ಲಿ ಕುಟುಂಬದಲ್ಲಿ ಕಲಹವೆದ್ದಿತ್ತು. ತಮ್ಮ ಮಕ್ಕಳು ಜಾಣರೆಂದು ತಿಳಿದ ಗದಿಗೆಪ್ಪನವರು ಮುಂದೆ ಓದಿಸಿ ಬುದ್ದಿವಂತರನ್ನಾಗಿ ಮಾಡಿಸಬೇಕೆನ್ನುವ ವಾದಕ್ಕೆ ಸಂಪೂರ್ಣತೆರೆ ಬಿದ್ದಂತಾಯಿತು. ಮುಂದೆ ಊರ ಯಜಮಾನರಾದ ಶಿವಪ್ಪ ಕಾಳೇನೂರ ಬಣಕಾರರ ಕುಟುಂಬದ ಒಳಜಗಳದಲ್ಲಿ ಮದ್ಯಪ್ರವೇಶಿಸಿ ಗದಿಗೆಪ್ಪನವರಿಗೆ ಒಂದು ಮುರುಕು ಮನೆ, ದುಡಿದು ಹೈರಣಾದ ಎರಡು ಎತ್ತುಗಳನ್ನು ಮತ್ತು ತಗ್ಗು ಪ್ರದೇಶಹೊಂದಿದ 15 ಎಕರೆ ಎಡಾದ ಭೂಮಿಯನ್ನು ಮತ್ತು ತಿನ್ನಲಿಕ್ಕೆ ಎರಡು ತಿಂಗಳಾಗುವಷ್ಟು 16 ಪಡಿ ಸಾವಕ್ಕಿಯ ಚೀಲವನ್ನ ಕೊಡಸಿಬಿಟ್ಟರು.

ಇದರ ಮೇಲೆ ಏನಾದರೂ ಜಗಳಮಾಡಿ ಕೇಳಬೇಕೆಂದರೆ ಗದಿಗೆಪ್ಪನವರಿಗೆ ಆಗದು, ಏಕೆಂದರೆ ಗದಿಗೆಪ್ಪನವರು ಅಂಥಹ ಸೂಕ್ಷ್ಮಬುದ್ದಿವುಳ್ಳವರಾಗಿದ್ದರು. ಜೂತೆಗೆ ಊರಲ್ಲಿ ಮದ್ಯಪ್ರವೇಶಿಸಿ ಇವರ ಕುಟುಂಬಕ್ಕೆ ಬುದ್ದಿ ಹೇಳುವ ಸ್ಥಿತಿ ಊರಿನವರಲ್ಲಿರಲಿಲ್ಲ. ಯಾಕೆಂದರೆ ಬಣಕಾರರೆ ಊರಿಗೆ ದೊಡ್ಡವರಾಗಿದ್ದರು. ಈ ವಿಚಾರವನ್ನು ಊರಿನ ಯಾವಜನರತ್ತ ಹೇಳಿಕೊಳ್ಳುವ ವ್ಯವಧಾನಕ್ಕೆ ಗದಿಗೆಪ್ಪನವರು ಕೈಹಾಕಲಿಲ್ಲ. ಸೂಕ್ಷ್ಮವಾಗಿ ಅರಿತುಕೊಂಡು ಮನದಲ್ಲಿ ನೊಂದುಕೊಂಡು ಭಾರವಾದ ಮನಸ್ಸಿನಿಂದ ಗದಿಗೆಪ್ಪನವರು ತಮ್ಮ ದೊಡ್ಡ ಸಂಸಾರವನ್ನು ಕಟ್ಟಿಕೊಂಡು ಮನೆ ಬಿಟ್ಟು ಬಂದರು. ಬಂದ ಸಂದರ್ಭದಲ್ಲಿ ಮೂರುಕುಮನೆಯ ಕಟ್ಟೆಯೊಂದರಲ್ಲಿ ಗದಿಗೆಪ್ಪನವರು ಹೆಂಡತಿ ಮಕ್ಕಳೊಡನೆ ಜೀವಿಸತೊಡಗಿದರು.

ಆಗ ಮಹದೇವ ಬಣಕಾರರು 11 ವರ್ಷವಯಸ್ಸಿನ ಚಿಕ್ಕ ಬಾಲಕ. ಎಳೆಯ ವಯಸ್ಸಿನಲ್ಲಿರುವಾಗಲೇ ಬಣಕಾರರಿಗೆ ತಮ್ಮ ತಂದೆಗಾದ ನೋವಿನಸಂಗತಿಯ ಸ್ಪಷ್ಟ ಚಿತ್ರಣಗಳು ಅಚ್ಚಳಿಯದೆ ಉಳಿದು ಹೋದವು. ಅಂದಿನ ಇವರ ಕಲ್ಪನಾ ಶಕ್ತಿಗೆ ಪಾರವೇ ಇರಲಿಲ್ಲ. ತಮ್ಮ ದೊಡ್ಡಪ್ಪ, ಕಾಕನವರಿಂದ ತಮ್ಮ ತಂದೆಗಾದ ನೋವು ಮತ್ತು ಆ ನೋವಿಗೆ ಹೆಗಲನ್ನೇರಿಸಿ ತ್ಯಾಗಮಯ ಜೀವನವನ್ನು ನಡಸಿಕೊಟ್ಟ ತಮ್ಮ ತಂದೆಯ ಸಾರ್ಥಕ ಬದುಕಿನ ಕುರಿತು ಮಹದೇವ ಬಣಕಾರರು ತಮ್ಮ "ಮರುಳಸಿದ್ದ" ಕಾವ್ಯದಲ್ಲಿ ತುಂಬಾ ಮಾರ್ಮಿಕವಾದ ಪದ್ಯವನ್ನು ಈ ರೀತಿಯಾಗಿ ರಚಿಸಿದ್ದಾರೆ.

ತಂದೆಗೊಡ ಹುಟ್ಟಿದವರಿಬ್ಬರು
ತಂದು ನಿಲ್ಲಿಸಿದರೆಲ್ಲ ದುಃಖವ
ಸಂದ ಸಂಪದಕೆಲ್ಲ ತಾವಧಿಪತಿಗಳಾಗುತಲಿ
ಅಂದು ಬರಿಗೈಯಿಂದ ತಂದೆಯು
ನಿಂದು ದೈವವ ನೆನೆದು ಮನದೊಳು
ನೊಂದು ಮಕ್ಕಳ ಭಾಗ್ಯವೆನಗಿರಲೆಂದು ಬಯಸಿದನು

(ಮರುಳಸಿದ್ಧಕಾವ್ಯ ಪದ್ಯ 15)

ಬಾಲಕ ಮಹದೇವ ಬಣಕಾರರು ಶಾಲೆಯಲ್ಲಿ ಇತರ ಮಕ್ಕಳಂತೆ ಆಟವಾಡಿಕೊಂಡು ಶಾಲೆಗೆ ಹೋಗಿ ನಲಿದಾಡಿಕೊಂಡು ಇರಬೇಕಾಗಿರಲಿಲ್ಲ ಎಕೆಂದರೆ ಮನೆಯ ಪರಿಸ್ಥಿತಿ ಒತ್ತಡಕ್ಕೆ ಸಿಕ್ಕು ದನಕಾಯುವದು, ಹೊಲಕ್ಕೆ ಬುತ್ತಿ ಒಯ್ಯುವುದು ಮನೆಯಲ್ಲಿ ತಾಯಿ ಕೆಲಸ, ಹೊಲದಲ್ಲಿ ತಂದೆಗೆ  ವ್ಯವಸಾಯದಲ್ಲಿ ಸಹಾಯ ಮಾಡುವುದು ಅನಿವಾರ್ಯವಾಯಿತು. ಪರಿಸ್ಥಿತಿಯ ಬಿರುಗಾಳಿಗೆ ಸಿಕ್ಕು ಜೀವನದಲ್ಲಿ ಒಂದು ಹೊಸ ಅನುಭವವಾದದ್ದಕ್ಕಿಂತ ಸ್ವಾಭಿಮಾನ ಗರಿಗೆದರಿತು ಎನ್ನುವುದು ಇಲ್ಲಿ ಸ್ಪಷ್ಟವಾಗಿದೆ.

ಧರ್ಮರಾಯರಂತಿದ್ದ ಮಹದೇವರ ತಂದೆ ಗದಿಗೆಪ್ಪನವರ ಮತ್ತು  ಧಾರ್ಮಿಕ ಮನೋವೃತ್ತಿಯ ತಾಯಿ ಸಿದ್ದಮ್ಮನವರ ಅನನ್ಯ ದಾಂಪತ್ಯ, ಹಾಗೂ ಸ್ವಭಾವ ಊರಿನ ಜನರನ್ನು ಆಕರ್ಷಿಸಿತು. ಶ್ರೀಮಂತ ಕುಟುಂಬದವರಾದರೂ ಇವರ ಬಡತನದ ಪರಿಸ್ಥಿತಿಗೆ ಜನ ಬಹಳಷ್ಟು ಮರುಕ ವ್ಯಕ್ತಪಡಿಸುತ್ತಿದ್ದರು. ಮನೆಯಲ್ಲಿ ಬಡತನದ ಬೇಗೆ ಕುದಿಯುತ್ತಿದ್ದರೂ ತಾಯಿ ಸಿದ್ದಮ್ಮನವರಿಗೆ ಬಡವರನ್ನು, ಭಿಕ್ಷುಕರನ್ನು ಅಕ್ಕರೆಯಿಂದ ಕಾಣುತ್ತಿದ್ದರು. ಕೂಡಿಟ್ಟ ಹಣವಿರಲಿ, ದವಸಧಾನ್ಯಗಳಿರಲಿ ದಾನಮಾಡಿ ಬಿಡುತ್ತಿದ್ದರು. ಅಲ್ಲದೆ ತಮ್ಮ ಹಾಗೂ ಅಕ್ಕಪಕ್ಕದ ಮನೆಯವರಿಂದ ಹರುಕುಮುರುಕು ಸೀರೆಗಳನ್ನು ಕೂಡಿಸಿಕೊಂಡು ವರ್ಷವಿಡಿ ಬಿಡುವಿದ್ದ ಸಮಯದಲ್ಲಿ ಕುಂಚಿಗೆ ಕುಲಾಯಿಗಳನ್ನು ಹೆಣೆಯುತ್ತಿದ್ದರು. ಅಲ್ಲದೆ ಕೂಸು ಎತ್ತಿಕೊಂಡು ಭಿಕ್ಷುಕ ಮಹಿಳೆ ಮನೆಬಾಗಿಲಿಗೆ ಬಂದರೆ, ಹೃದಯವನ್ನೇ ಹಿಸುಕಿಕೊಂಡು ಕನಿಕರ ಪಟ್ಟು ಆ ಕೂಸಿನ ನೆತ್ತಿಗೆ ಎಣ್ಣೆಹಾಕಿ ಕುಂಚಿಗೆಕುಲಾಯಿ ಕೊಟ್ಟು, ತಮ್ಮ ಮಾನವೀಯತೆ ಮೆರೆಯುತ್ತಿದ್ದರು. ಬಡತನದ ಬೇಗೆ ಬೆನ್ನುಹತ್ತಿದ್ದರ ಪರಿಣಾಮ ಕೊರಗಿ ಕೊರಗಿ ಶ್ರೀಮಂತ ಹೃದಯದ ತಾಯಿ ಸಿದ್ದಮ್ಮನವರು ಚಿಂತೆ ಎಂಬ ಚಿತೆಯಲ್ಲಿ ಶಿವನಪಾದ ಸೇರಿದರು.

ಮಹದೇವ ಬಣಕಾರರಿಗೆ ಮೂವರು ಸಹೋದರರು, ಮೂವರು ಸೋದರಿಯರು ಇವರೆಲ್ಲರೂ ತಾಯಿ ಇಲ್ಲದ ತಬ್ಬಲಿಯಾದರು. ತಾಯಿಯ ಸ್ಥಾನದಲ್ಲಿ ಮಹದೇವರ ಹಿರಿಯಕ್ಕ ಗಂಗಮ್ಮಳು ಇವರೆಲ್ಲರನ್ನ ಸಂರಕ್ಷಿಸಹತ್ತಿದಳು. ತಾಯಿಯನ್ನು ಕಳೆದುಕೊಂಡ ದುಃಖದಲ್ಲಿದ್ದ ಬಣಕಾರರಿಗೆ ಮತ್ತೊಂದು ಅಘಾತವಾಯಿತು. ತಾಯಿಯ ಸ್ಥಾನವನ್ನು ತುಂಬಿಕೊಂಡಿದ್ದ ಹಿರಿಯಕ್ಕ ಗಂಗಮ್ಮನವರ ಗಂಡ ಅತ್ತೆಮಾವ ಇವರೆಲ್ಲ ಪ್ಲೇಗ್ ರೋಗ ತಗಲಿ ಒಂದೇ ದಿನ ಸಾವನ್ನಪ್ಪಿದರು. ಅದೇ ಸಮಯದಲ್ಲಿ ಗಂಗಮ್ಮ ಹೆಣ್ಣು ಮಗುವಿಗೆ ಜನ್ಮನೀಡಿ ಒಂದು ತಿಂಗಳಾಗಿತ್ತು. ಬಾಣಂತಿಯಾದ ಗಂಗಮ್ಮ ಗಂಡನ ಮನೆಯ ಅಲ್ಪ ಸ್ವಲ್ಪ ಆಸ್ತಿಯನ್ನು ಮಾರಿ, ಬಡತನದಲ್ಲಿ ಕಾಲನೂಕುತ್ತಿದ್ದ ಬಣಕಾರರ ಮನೆಗೆ ಸಹಾಯ ಮಾಡಿದರು. ನಂತರ ಅಣ್ಣ ಮಹಾಲಿಂಗಪ್ಪನವರ ಓದಿಗೆ ಅದೇ ದುಡ್ಡಿನಲ್ಲಿ ಸಹಾಯ ಮಾಡಿ ತಾಯಿ ಇಲ್ಲದ ದುಃಖವನ್ನು ಮರೆಯುವಂತೆ ಅಣ್ಣ ತಮ್ಮಂದಿರನ್ನು ಕಂಡಳು.

ಈ ಸಂದರ್ಭದಲ್ಲಿ ಮಹದೇವ ಬಣಕಾರರು ಶಾಲೆಗೆ ಹೋಗುವದನ್ನೇ ಕಡಿಮೆ ಮಾಡಿದರು. ಒಂದು ದಿನ ಹೋದರೆ ಹತ್ತು ದಿನ ಶಾಲೆ ತಪ್ಪಿಸುವುದನ್ನು ರೂಢಿಮಾಡಿಕೊಂಡು ದನಕಾಯುವುದನ್ನು, ವ್ಯವಸಾಯ ಮಾಡುವುದನ್ನು ಮತ್ತು ಅಕ್ಕ ಗಂಗಮ್ಮ ಹೇಳಿದ ಕೆಲಸವನ್ನು ಅಚ್ಚುಕಟ್ಟಾಗಿ ಮಾಡ ಹತ್ತಿದರು.

## ಬಣಕಾರರ ವಿದ್ಯಾಭ್ಯಾಸ :

ಮಹದೇವ ಬಣಕಾರರು ತಮ್ಮ ಸ್ವಂತ ಊರಾದ ಮೊಟೆಬೆನ್ನೂರಿನಲ್ಲಿ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿದರು. ಸಣ್ಣವನಿರುವಾಗಲೇ ಬಣಕಾರರ ಪತಿಭೆಯನ್ನು ಮನೆಯವರು ಹಾಗು ಅಕ್ಕಪಕ್ಕದವರು ಗುರುತಿಸಿದ್ದರು. ಪ್ರಾಥಮಿಕ ಶಾಲೆಗೆ ಬಣಕಾರರು ಹೋಗುತಿದ್ದಾಗ ಇವರ ಜಾಣತನವನ್ನು ಕಂಡ ಅವರ ಗುರುಗಳು, ಪ್ರತಿಭಾವಂತ ಬಾಲಕ ಎಂಬ ಹೆಗ್ಗಳಿಕೆಯನ್ನು ನೀಡಿದ್ದರು. ಪ್ರಾಥಮಿಕ ಶಿಕ್ಷಣವನ್ನು ಓದುವಾಗಲೇ ಮಹದೇವ ಬಣಕಾರರು ಹಳಗನ್ನಡದ "ಜೈಮಿನಿ ಭಾರತ"ದ ಪದ್ಯಗಳನ್ನು ನಿರ್ಗಳವಾಗಿ ಓದಿ ಶಿಕ್ಷಕರನ್ನು ಬೆರಗಾಗುವಂತೆ ಮಾಡುತ್ತಿದ್ದರು. ಸರ್ವಶ್ರೀ ಕುಸನೂರು, ಬ್ಯಾಡಪ್ಪನವರ, ಶಿ.ಫ.ಕಿತ್ತೂರ, ಗು.ಬ.ಅಂಗಡಿ, ಹಿರೇಕುಂದಿ ಮುಂತಾದ ಶಿಕ್ಷಕ ವರ್ಗಕ್ಕೆ ಪರಮಶಿಷ್ಯರಾಗಿದ್ದರು. ತನ್ನ ವರ್ಗದ ಸಹಪಾಠಿಗಳಿಗೆ ಕ್ಲಿಷ್ಟವಾದ ವಿಷಯಗಳನ್ನು ಓದಿ ಹೇಳುವ ಕೆಲಸವನ್ನು ಗುರುಗಳು ಬಣಕಾರರಿಗೆ ನೀಡುತ್ತಿದ್ದರು.

ಪ್ರಾಥಮಿಕ ಹಂತವನ್ನು ಮುಗಿಸಿ ಬಣಕಾರರು ಮಾಧ್ಯಮಿಕ ಶಾಲೆಯ ಮೆಟ್ಟಿಲೇರಿದಾಗ ಕವನಗಳನ್ನು ಬರೆಯುವ ಮತ್ತು ಓದುವ ಹಂಬಲವನ್ನು

ಹೆಚ್ಚಿಸಿಕೊಂಡರು. ಈ ಕವನದ ಹುಚ್ಚು ಹಿಡಿದಾಗಲೇ ಶಾಲೆಯ ಪಠ್ಯದ ವಿಷಯದ ಕಡೆ ಬಣಕಾರರ ಚಿತ್ತ ನಿಂತು ಹೋಯಿತು. ದನ ಕಾಯಲಿಕ್ಕೆ ಹೊದಾಗಲೇ ಕವನ ಕಟ್ಟಿ ಹಾಡುವ ಗೀಳನ್ನಿಟ್ಟುಕೊಂಡ ಬಣಕಾರರು ಕಾದಿದ್ದು ಎಮ್ಮೆ, ಕಟ್ಟಿದ್ದು ಕವಿತೆ ಎನ್ನುವಷ್ಟರ ಮಟ್ಟಿಗೆ ಇವರ ಕವನದ ಹುಚ್ಚು ನೆತ್ತಿಗೇರ ತೊಡಗಿತು. ಹೀಗಿದ್ದಾಗ ಮಾಧ್ಯಮಿಕ ಶಾಲೆಗೂ ಸರಿಯಾಗಿ ಹೋಗದೆ ಚೆಕ್ಕರ್ ಹೊಡೆಯುತ್ತಿದ್ದರು. ಮಾದ್ಯಮಿಕ ಶಿಕ್ಷಣದ ಒಂದು ಪರೀಕ್ಷೆಯನ್ನಾದರೂ ಸಹಿತ ಬಣಕಾರರು ಬರೆಯಲಿಲ್ಲ. ಅವರ ನೋಟ್ ಪುಸ್ತಕ ತೆರೆದರೆ ವರ್ಗದ ಶಿಕ್ಷಕರು ಹೇಳುವ ವಿಷಯವೇ ಇರುತ್ತಿರಲಿಲ್ಲ ಬದಲಾಗಿ ಕವನದ ಸಾಲುಗಳೇ ಕಾಣಸಿಗುತ್ತಿದ್ದವು. ಅಷ್ಟೋಂದು ಕವನದ ಬಗ್ಗೆ ಹುಚ್ಚು.

ಕ್ರಮೇಣವಾಗಿ ದಿನಗಳು ಉರುಳಿದಂತೆ ಶಾಲೆಗೆ ಶರಣು ಹೊಡದೆ ಬಿಟ್ಟರು. ಶಾಲೆ ಬಿಟ್ಟ ನಂತರ ಬಣಕಾರರು ಪಡ್ಡೆ ಹುಡುಗರನ್ನು ಕಟ್ಟಿಕೊಂಡು ದನ ಕಾಯುವುದನ್ನೇ ಕಾಯಕ ಮಾಡಿಕೊಂಡು ಬಿಟ್ಟರು. ದಿನಂಪ್ರತಿ ಬೆಳಿಗ್ಗೆ ಏಳುವುದು, ಸಗಣಿ ಕಸ ಗುಡಿಸುವುದು, ಹಾಲು ಕರೆಯುವುದು, ನಂತರ ಹೊಟ್ಟೆ ತುಂಬ ಊಟಮಾಡಿ ಪಡ್ಯೆ ಹುಡುಗರೊಂದಿಗೆ ಕಾಡಿಗೆ ದನಕಾಯಲಿಕ್ಕೆ ಹೋಗುತ್ತಿದ್ದರು. ದಿನ ಕಳೆದಂತೆ ಪಡ್ಡೆ ಹುಡುಗರ ಗೆಳೆತನ ಹೆಚ್ಚಾಗ ತೊಡಗಿತು. ಮನೆಯವರ ಕಣ್ ತಪ್ಪಿಸಿ ಆಟ ಆಡುವುದು, ನಾಟಕ ನೋಡುವುದು ಬಣಕಾರರಿಗೆ ಅಭ್ಯಾಸವಾಯಿತು.

ಬಣಕಾರರು ಎಮ್ಮೆ ಕಾಯಲು ಹೊರಡುತ್ತಿದ್ದಂತೆ ಊರ ಅಗಸಿ ದಾಟಿದರೆ ಸಾಕು, ಎಮ್ಮೆಯ ಮೇಲೆ ಕುಳಿತು ಹಾಡುಕಟ್ಟಿ ದಾರಿತುಂಬಾ ಹಾಡುತ್ತ ಅಡವಿ ಕಡೆಗೆ ಹೋಗುತ್ತಿದ್ದರು. ಅಡವಿಯಲ್ಲಿ ತನಗೆ ತೋರಿದಂತೆ ಕವನಗಳನ್ನು ಕಟ್ಟಿ ತನ್ನ ಗೆಳೆಯರೊಂದಿಗೆ ಹಾಡಿ ಸಂಭ್ರಮಿಸುತ್ತಿದ್ದರು. ಊರಿನ ಸುತ್ತ ಮುತ್ತ ಗೆಳೆಯರೊಂದಿಗೆ ನೋಡಿಕೊಂಡು ಬಂದ ನಾಟಕದ ಸನ್ನಿವೇಶಗಳನ್ನು ಅಡವಿಯಲ್ಲಿ ತನ್ನ ಗೆಳೆಯರ ಮುಂದೆ ಮಾಡಿ ತೋರಿಸುವುದರಲ್ಲಿಯೇ ಬಣಕಾರರು ಅನೇಕ ವಸಂತಗಳನ್ನು ಕಳೆದರು. ಅದೇ ಅವರಿಗೆ ಸ್ಫೂರ್ತಿಯಾಗಿ ತಮ್ಮ 18 ನೇಯ ವಯಸ್ಸಿನಲ್ಲಿಯೇ ಕವನ ಸಂಕಲನ "ಕಾವ್ಯೋದಯ" ಹೊರತರುವ ಮೂಲಕ ಕಾವ್ಯಲೋಕದಲ್ಲಿ ಕಾಲಿರಿಸಿದರು. ಈ ಕವನ ಸಂಕಲನಕ್ಕೆ ಕವಿ ಸಾಲಿ ರಾಮಚಂದ್ರರಾಯರು ಮುನ್ನೂಡಿ ಬರೆದು ಹರೆಸಿದ್ದಾರೆ. "ಹಲಗೆ ಬಳಪವನು ಹಿಡಿಯದೊಂದಗ್ಗಳಿಕೆ" ಎಂದು ಕುಮಾರ ವ್ಯಾಸನು ಬಣಕಾರರನ್ನೇ ಕುರಿತು ಹೇಳಿದಂತೆ ಅನಿಸುತ್ತದೆ. ಒಟ್ಟಿನಲ್ಲಿ ಬಣಕಾರರು ತಮ್ಮ ಜೀವನದುದ್ದಕ್ಕೂ ಕಾವ್ಯ ಕೃಷಿ ಪರಂಪರೆಯನ್ನು ಬೆಳೆಸಿಕೊಂಡು ಬಂದರು.

ಪ್ರಾಥಮಿಕ ಶಿಕ್ಷಣಕ್ಕೆ ಬಣಕಾರರು ಶರಣುಹೊಡೆದಾಗ ಮನೆಯವರ ಒತ್ತಡಕ್ಕೆ ಸ್ವಾಭಾವಿಕವಾಗಿ ಮಣಿಯಬೇಕಾಯಿತು. ಮಾಧ್ಯಮಿಕ ಶಿಕ್ಷಣ ಪೂರೈಸಿ ಮುಂದೆ ದೊಡ್ಡ ಸಾಹೇಬನಾಗಬೇಕೆಂಬ ಬಯಕೆ ಅಣ್ಣ ಮಹಾಲಿಂಗಪ್ಪವರದಾಗಿತ್ತು. ಅಂತೂ ಇಂತೂ ಅಣ್ಣ ಮಹಾಲಿಂಗಪ್ಪನವರ ಒತ್ತಡಕ್ಕೆ ಮಣಿದು ಮಾಧ್ಯಮಿಕ ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸಿ ಇಂಗ್ಲೀಷ್ ವಿದ್ಯಾಭ್ಯಾಸ ಮಾಡಲು ಅಣ್ಣ ಮಹಲಿಂಗಪ್ಪನವರ ಜೊತೆ ಧಾರವಾಡಕ್ಕೆ ಹೋದರು. ಭವಿಷ್ಯದ ಹಲವಾರು ಕನಸುಗಳನ್ನು ಕಟ್ಟಿಕೊಂಡು ಬಂದ ಬಣಕಾರರಿಗೆ ಅಲ್ಲಿಯು ಬಡತನ ಕಿತ್ತು ತಿನ್ನುತ್ತಿತ್ತು. ಒಂದೊಪ್ಪತ್ತಿನ ಊಟಕ್ಕು ಗತಿ ಇಲ್ಲದ ಸಂದರ್ಭದಲ್ಲಿ ಬಣಕಾರರೊಂದಿಗೆ ಹಂಚಿಕೊಂಡು ತಿನ್ನುತ್ತಿದ್ದರು. ತೇಪೆ ಹಚ್ಚಿದ ಅಂಗಿ, ಹರಿದು ಪಂಜೆಯಿಂದ ಬಣಕಾರರು ಓಡಾಡಿದ ದಿನಗಳೆಷ್ಟೊ, ಧಾರವಾಡದಿಂದ ಊರಿಗೆ ಬರಬೇಕೆಂದರೆ ಸಾಕಷ್ಟು ಹಣದ ಅಡಚಣೆ ಹೀಗಾಗಿ ಯಾವಾಗಲೋ ಒಮ್ಮೆ ಊರಿಗೆ ಬಂದು ಹೋಗುತ್ತಿದ್ದರು. ಹೀಗೆ ಒಮ್ಮೆ ಊರಿಗೆ ಬರುವ ಸಂದರ್ಭದಲ್ಲಿ ಅರ್ಧ ಅಣೆ ಕಡಿಮೆಯಾದಾಗ ಹಾವೇರಿಯಿಂದ ಮೊಟೇಬೆನ್ನೂರಿಗೆ ಏಳೆಂಟು ಮೈಲು ಕಾಲು ನಡುಗೆಯಲ್ಲಿ ನಡೆದುಬಂದ ಪ್ರಸಂಗ ಬಂದೊದಗಿತ್ತಂತೆ. ಬಡತನದ ಬೇಗೆಯಿಂದ ತಮ್ಮೂರಿನಲ್ಲಿ ಬಳಲುತಿದ್ದ ತಮ್ಮ ಕುಟುಂಬದ ದಯನೀಯ ಸ್ಥಿತಿಯನ್ನು ಮನಗೊಂಡ ಬಣಕಾರರು ಕಷ್ಟದಲ್ಲಿ ಓದುವುದಕ್ಕಿಂತ, ಓದಿದಷ್ಟನ್ನೇ ಬೆಳೆಯಿಸಿಕೊಂಡು ತಾನುಸ್ವಲ್ಪ ದುಡಿದು ದುಡಿದ ಹಣದಿಂದ ಮನೆತನದ ನಿರ್ವಹಣೆಯನ್ನು ನೀಗಿಸಿದರಾಯಿತು ಎಂದು ಭಾವಿಸಿ ಸ್ವಇಚ್ಛೆಯಿಂದ ಓದಿಗೆ ಸಲಾಮುಹೊಡೆದು ಹುಬ್ಬಳ್ಳಿಗೆ ಬಂದು ಪತ್ರಿಕಾ ಪ್ರಪಂಚಕ್ಕೆ ಕಾಲಿಟ್ಟರು.

## ಪತ್ರಿಕಾ ಪ್ರಪಂಚ :

ಅರ್ಧಕ್ಕೆ ನಿಂತ ಶಿಕ್ಷಣದ ನಂತರ ಬಣಕಾರರು ಆಯ್ದುಕೊಂಡಿದ್ದು ಪತ್ರಿಕೋದ್ಯಮವನ್ನು, ಅಣ್ಣ ಮಹಾಲಿಂಗಪ್ಪನವರಿಗೆ ತಮ್ಮ ಮಹದೇವ ಎಂ.ಎ.ಪದವಿ ಪಡೆಯಬೇಕೆಂಬ ಆಸೆ, ತಂದೆಗೆ ಏಳನೇ ಇಯತ್ತೇ ಪಾಸಾಗಿ ಕನ್ನಡ ಶಾಲೆ ಮಾಸ್ತರನನ್ನಾಗಿ ಮಾಡಬೇಕೆಂಬ ಬಯಕೆ, ಆದರೆ ಅಣ್ಣನ ಮತ್ತು ತಂದೆಯ ಆಸೆಗಳಿಗೆ ತೀಲಾಂಜಲಿಯನ್ನಿಟ್ಟ ಬಣಕಾರರಿಗೆ ಒಂದೇ ಒಂದು ಚಿಂತೆ ಕಾಡುತ್ತಿತ್ತು. ಮನೆಯ ಪರಿಸ್ಥಿತಿಯನ್ನು ಹೇಗಾದರು ಮಾಡಿ ಸುಧಾರಿಸಿದರಾಯಿತೆಂದು ಮನೆಯ ಖರ್ಚಿಗಾಗಿ ನಾಲ್ಕು ಕಾಸು ಸಂಪಾದಿಸಬೇಕೆನ್ನುವ ಹಂಬಲ ಬಣಕಾರರದಾಗಿತ್ತು. ಇಂಥಹ ಸಂದರ್ಭದಲ್ಲಿ ತಂದೆ ಗದಿಗೆಪ್ಪನವರ ಮನೆತನದ ಪರಿಸ್ಥಿತಿ ತುಂಬಾ

ಗಂಭೀರವಾಗಿತ್ತು ಇವೆಲ್ಲವನ್ನು ಅರಿತ ಬಣಕಾರರು ಓದಿದಷ್ಟನ್ನು ಬಳಸಿಕೊಂಡು ಹಿಡಿಕಾಸು ಸಂಪಾದಿಸಿ ತಂದೆ ಗದಿಗೆಪ್ಪನವರ ಕೈಬಲಪಡಿಸಬೇಕೆಂದು ತೀರ್ಮಾನಿಸಿ 1951 ರಲ್ಲಿ ಹುಬ್ಬಳ್ಳಿಗೆ ಬಂದು "ನವಯುಗ" ಪತ್ರಿಕೆಯ ಉಪಸಂಪಾದಕರಾಗಿ ಕೆಲಸಕ್ಕೆ ಹಾಜರಾದರು.

ಅಣ್ಣ ಮಹಲಿಂಗಪ್ಪನವರ ಒತ್ತಡದ ಮೇರೆಗೆ ಇಂಗ್ಲೀಷ್ ವಿದ್ಯಾಭ್ಯಾಸಕ್ಕೆಂದು ಧಾರವಾಡಕ್ಕೆ ಬಂದ ಮೇಲಂತೂ ಬಣಕಾರರು ತಮ್ಮ ಬರವಣಿಗೆಯನ್ನು ಅತ್ಯಂತ ಸಮೃದ್ಧಗೊಳಿಸಿಕೊಂಡಿದ್ದರು. ಪ್ರಾಥಮಿಕ ಶಿಕ್ಷಣದಿಂದಲೇ ಕವಿತೆ ಬರೆಯುವ ಗೀಳು ಇಟ್ಟುಕೊಂಡಿದ್ದರು. ಬಣಕಾರರು ಧಾರವಾಡಕ್ಕೆ ಬಂದ ನಂತರವಂತೂ ಲೇಖನ, ಕವನ, ಹನಿಗವನಗಳನ್ನು ಬರೆಯುವದು ಹೆಚ್ಚಾಗತೊಡಗಿತು ಅವರು ಬರೆದ ಕವನಗಳು ಜಯಕರ್ನಾಟಕ, ಜಯಂತಿ, ಅಂಕುಶ, ಕರ್ನಾಟಕ-ನವಯುಗ, ವಿಶಾಲ ಕರ್ನಾಟಕ, ಕರ್ಮವೀರ, ಸಿಡಿಲು ಹೀಗೆ ಮುಂತಾದ ಪತ್ರಿಕೆಗಳಲ್ಲಿ ಆಗಾಗ ಪ್ರಕಟಗೊಳ್ಳುತ್ತಿದ್ದವು. ಬಣಕಾರರ ಲೇಖನಗಳನ್ನು ಹಾಗೂ ಕವಿತೆಗಳನ್ನು ನಾಡೋಜ ಪಾಟೀಲ ಪುಟ್ಟಪ್ಪನವರು ನೋಡಿ ಬಹಳಷ್ಟು ಮೆಚ್ಚುಗೆ ವ್ಯಕ್ತಪಡಿಸುತ್ತಿದ್ದರು ಹೀಗಾಗಿ ಪಾಟೀಲ ಪುಟ್ಟಪ್ಪನವರ ಸಂಪಾದಕತ್ವದಲ್ಲಿ ಸಾಗುತ್ತಿದ್ದ "ನವಯುಗ" ಪತ್ರಿಕೆಯಲ್ಲಿ ಸುಲಭವಾಗಿ ಕೆಲಸ ಸಿಕ್ಕಿತು. ನಂತರ ತಮ್ಮ ಮೊದಲನೆ ಸಂಬಳದಲ್ಲಿ ತಮ್ಮ ತಂದೆಯವರಿಗೆ ಒಂದು ಕಂಬಳಿ, ಒಂದು ಜೊತೆ ಚಪ್ಪಲಿ ಖರೀದಿಸಿ ತಮ್ಮ ತಂದೆಗೆ ಕೊಟ್ಟು ಕಳುಹಿಸಿದ್ದರಂತೆ.

ಮುಂದೆ 1953 ರಲ್ಲಿ "ಬಣ್ಣದ ಕಾರಂಜಿ" ಎಂಬ ಪ್ರಣಯ ಗೀತೆಗಳ ಕವನ ಸಂಕಲನವನ್ನು ರಚಿಸಿ ಪ್ರಕಟಿಸಿದರು. ಮುಂಬೈ ಸರ್ಕಾರ ಬಣಕಾರರ ಈ ಕವನ ಸಂಕಲನವನ್ನು ಉತ್ತಮ ಕೃತಿ ಎಂದು ಪರಿಗಣಿಸಿ 1956 ರಲ್ಲಿ 500 ರೂಪಾಯಿಗಳ ಬಹುಮಾನವನ್ನು ನೀಡಿತು. ಬಣಕಾರರಿಗೆ ಸಾಹಿತ್ಯ ಕ್ಷೇತ್ರದಲ್ಲಿ ಹೆಮ್ಮರವಾಗಿ ಬೆಳೆಯಲು ಪೂರಕವಾಯಿತು.

ಬರವಣಿಗೆಯ ಒಂದೊಂದೆ ಮೆಟ್ಟಿಲುಗಳನ್ನು ಹತ್ತಿದ ಬಣಕಾರರು ತಮ್ಮ ಕನ್ನಡ ಭಾಷೆಯ ಶುದ್ಧ ಬರವಣಿಗೆಯೊಂದಿಗೆ ಇಂಗ್ಲೀಷ್ ಭಾಷೆಯ ಮೇಲೂ ಪ್ರಭುತ್ವ ಸಾಧಿಸಿದರು. ನಿರ್ಗಳವಾಗಿ ಇಂಗ್ಲೀಷನಲ್ಲಿ ಮಾತನಾಡುವ, ಬರೆಯುವ ಸಾಮರ್ಥ್ಯ ಪಡೆದರು ಜೊತೆಗೆ ರಾಜಕೀಯ ವಿದ್ಯಮಾನಗಳ ರಹಸ್ಯಗಳನ್ನು ಆಯಸ್ಕಾಂತದಂತೆ ಸೆಳೆದುಕೊಂಡು ಪಾಂಡಿತ್ಯವನ್ನು ಬೆಳಸಿಕೊಂಡು ಅದರಲ್ಲೂ ಹಿಡಿತ ಸಾಧಿಸಿದರು. ಅಷ್ಟೊತ್ತಿಗೆ ಬಣಕಾರರು ತಮ್ಮ ಶುದ್ಧ ಬರವಣಿಗೆಯೊಂದಿಗೆ ಕನ್ನಡ ನಾಡಿನ ಜನತೆಯ ಮನಸ್ಸಿನಲ್ಲಿ ಚಿರಸ್ಥಾಯಿಯಾಗಿ ಉಳಿದರು.

ಬಣಕಾರರು ಮುಂದೆ ಪ್ರಜಾವಾಣಿ, ಜಯಕರ್ನಾಟಕ, ಕರ್ನಾಟಕಬಂಧು, ಜಯಂತಿ, ಅಂಕುಶ ಮುಂತಾದ ಪತ್ರಿಕೆಗಳಿಗೆ ಉಪ ನಿರ್ದೇಶಕರಾಗಿ ಕಾರ್ಯನಿರ್ವಹಿಸಿದರು. ಪತ್ರಿಕೋದ್ಯಮದಲ್ಲಿ ಒಂದು ಮೈಲಿಗಲ್ಲನ್ನು ಸ್ಥಾಪಿಸಿ ಜನಮಾನದಲ್ಲಿ ಜೀವಂತವಾಗಿ ಉಳಿದು ಕೊಂಡು ಪತ್ರಿಕೋದ್ಯಮದಲ್ಲಿ ಸಿಗುತ್ತಿದ್ದ ಅಲ್ಪ ಸ್ವಲ್ಪ ಸಂಬಳದಿಂದ ಮನೆಯ ಆರ್ಥಿಕ ಪರಿಸ್ಥಿತಿ ಹಿಗ್ಗಲಿಲ್ಲ. ಹೇಗಾದರು ಮಾಡಿ ಕೈತುಂಬ ಸಂಪಾದಿಸಿ ತಂದೆಯ ಕೈ ಬಲಪಡಿಸಬೇಕೆಂಬ ಆಸೆ ಹೆಚ್ಚಾಗತೊಡಗಿತು. ನಾಟಕವನ್ನು ಬರೆದು ಯಾವುದಾದರು ಒಂದು ನಾಟಕ ಕಂಪನಿಗೆ ಮಾರಿ ಬಂದ ಹಣದಿಂದ ಮನೆಯ ಪರಿಸ್ಥಿತಿಯನ್ನು ನಿಭಾಯಿಸಿದರಾಯಿತೆಂಬ ಚಿಂತನಾ ಲೋಕಕ್ಕೆ ಬಣಕಾರರು ಮಾರು ಹೋದರು.

## ರಂಗಭೂಮಿಯತ್ತ ಬಣಕಾರರು :

ಮಹದೇವ ಬಣಕಾರರು ಸಾಮಾನ್ಯವಾಗಿ ಕನ್ನಡ ಸಾಹಿತ್ಯದ ಅನೇಕ ಮೆಟ್ಟಿಲುಗಳನ್ನು ಏರಿ ವಿಜಯ ಸಾಧಿಸಿದ್ದಾರೆ. ಅದರಲ್ಲಿ ನಾಟಕ ಕ್ಷೇತ್ರದಲ್ಲಿನ ಅವರ ಸಾಧನೆ ಮೆಚ್ಚುವಂಥಹದ್ದು.ಚಿಕ್ಕವರಿರುವಾಗಲೇ ಬಣಕಾರರು ನಾಟಕಗಳನ್ನು ರಚಿಸುವ ಹವ್ಯಾಸಹೊಂದಿದ್ದರು.ತಮ್ಮ 15–16 ನೇ ವಯಸ್ಸಿನಲ್ಲಿಯೇ 'ಗರತಿಯ ಗೋಳು' ಎಂಬ ಸುಂದರ ನಾಟಕವನ್ನು ಬರೆದರು. ಈ ನಾಟಕದಲ್ಲಿ ಬ್ರಾಹ್ಮಣನೊಬ್ಬನ ಅನೈತಿಕತೆಯನ್ನು ಮೂಲವಸ್ತುವನ್ನಾಗಿ ಬಣಕಾರರು ಈ ನಾಟಕವನ್ನು ರಚಿಸಿದರು, ಅಲ್ಲದೆ ತಮ್ಮ ಸ್ನೇಹಿತರೊಡಗೂಡಿ ತಮ್ಮೂರಾದ ಮೊಟೆಬೆನ್ನೂರಿನಲ್ಲಿ ಈ ನಾಟಕವನ್ನು ಪ್ರಯೋಗಿಸಿದರು. ಅಚ್ಚರಿ ಎಂಬಂತೆ ಸ್ವತ: ಈ ನಾಟಕದಲ್ಲಿ ಅಭಿನಯಿಸಿ ಜನರ ಮೆಚ್ಚುಗೆಯನ್ನು ಪಡೆದರು.

ಬಣಕಾರರಿಗೆ ನಾಟಕಗಳನ್ನು ರಚಿಸುವ ತವಕ ಹೆಚ್ಚಾದಂತೆ ಹಣದಾಸೆ ಹೆಚ್ಚಾಗ ತೊಡಗಿತು. ಇದಕ್ಕೆ ಕಾರಣಬೇಕಿಲ್ಲ ಮನೆಯ ದಾರುಣ ಪರಿಸ್ಥಿತಿಯೇ ಇದಕ್ಕೆ ಕಾರಣವಾಗಿತ್ತು. ಒಂದು ರೀತಿಯಲ್ಲಿ ಹೇಳಬೇಕಾದರೆ ಇವರ ಸಾಹಿತ್ಯ ರಚನೆ ಪ್ರಾರಂಭವಾದುದೇ ನಾಟಕಗಳಿಂದ ಎಂಬುದನ್ನು ಇಲ್ಲಿ ಮರೆಯುವಂತಿಲ್ಲ. ಅವರು ರಚಿಸಿದ 'ಗರತಿಯ ಗೋಳು' ಎಂಬ ಈ ನಾಟಕವನ್ನು ಶ್ರೀ ಮದ್ಧವೀರಾಚಾರ್ಯರ ನಾಟಕ ಕಂಪನಿಗೆ ಸಾವಿರ ರೂಪಾಯಿಗಳಿಗೆ ಮಾರಿದರು. ತದನಂತರದಲ್ಲಿ ದುಡ್ಡು ಮತ್ತು ಖ್ಯಾತಿಯನ್ನು ಮನದಲ್ಲಿರಿಸಿಕೊಂಡು 'ದುಡ್ಡೇ ದೇವರು', 'ತೂಗಿದ ತೊಟ್ಟಿಲು', 'ಸುಖ ಬೇಡಿದ ಸತಿ', 'ದೇಶ ಭಕ್ತನ ದಶಾವತಾರ', 'ಹೊಸಲು ದಾಟಿದ ಹೆಣ್ಣು' ಮುಂತಾದ ನಾಟಕಗಳನ್ನು ಅತೀ ಕಡಿಮೆ ಅವಧಿಯಲ್ಲಿ

ರಚಿಸಿ ನಾಟಕ ಕಂಪನಿಗಳಿಗೆ ಮಾರಿದ್ದರಿಂದ ಇವೆಲ್ಲ ನಾಟಕಗಳು ಅಷ್ಟೊಂದು ಜನಪ್ರೀಯತೆಯನ್ನು ಪಡೆಯಲಿಲ್ಲ ಎನ್ನುವುದಕ್ಕಿಂತ ಇದ್ದುದರಲ್ಲಿಯೇ ಸ್ವಲ್ಪ ಲಾಭವನ್ನು ಮಾಡಿ ಕೊಟ್ಟವು. ಅದರಲ್ಲಿಯೇ ಮನೆತನದ ಖರ್ಚಿಗೆ ಬಣಕಾರರು ನೀಡುತ್ತಿದ್ದರು.ಇವೆಲ್ಲ ನಾಟಕಗಳು 1950 ಮತ್ತು 1960 ರ ಅವಧಿಯಲ್ಲಿ ರಚಿತಗೊಂಡಿವೆ. ಇದರಲ್ಲಿ ಕೆಲವೊಂದು ನಾಟಕಗಳನ್ನು ಕೇವಲ ಎರಡೇ ದಿನದಲ್ಲಿ ರಚಿಸಿದ್ದಾರಂತೆ. ಇಂಥ 10–15 ರಂಗಭೂಮಿಯ ನಾಟಕಗಳನ್ನು ಬರೆದು ನಾಟಕ ಕ್ಷೇತ್ರದಲ್ಲಿ ಹೆಸರುಗಳಿಸಿದರು. ಈ ಎಲ್ಲ ನಾಟಕಗಳನ್ನು ವೃತ್ತಿನಿರತ ನಾಟಕ ಕಂಪನಿಗಳು ಅನೇಕ ವರ್ಷಗಳ ಪ್ರದರ್ಶನ ನೀಡಿದವು.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ನಾಟಕ ಸಾಹಿತ್ಯ ಸಂಪತ್ತನ್ನು ಸಂಪದ್ಭರಿತವಾಗಿ ಬೆಳೆಸಲು ಅನೇಕ ನಾಟಕಗಾರರು ಕಾರಣರಾಗಿದ್ದಾರೆ. ಅವರಲ್ಲಿ ಬಣಕಾರರು ಒಬ್ಬರು. ಇವರು ರಂಗ ನಾಟಕಗಳನ್ನು ಬರೆಯುವಲ್ಲಿ ನಿಪುಣತೆಯನ್ನು ಪಡೆದಿದ್ದರು. 1960 ನೇ ಇಸ್ವಿಯ ನಂತರದಲ್ಲಿ ಹೆಚ್ಚಿನ ಆಸಕ್ತಿ ಮತ್ತು ಅತೀ ಶ್ರಮವಹಿಸಿ 'ಯಾರು ಹೊಣೆ', 'ಕಲ್ಯಾಣ ಕ್ರಾಂತಿ' ನಾಟಕಗಳನ್ನು ರಚಿಸುವುದಲ್ಲದೆ ಐದಾರು ರೇಡಿಯೋ ನಾಟಕಗಳನ್ನು ರಚಿಸಿದ್ದಾರೆ. ಈ ಎಲ್ಲ ನಾಟಕಗಳಲ್ಲಿ 'ಯಾರು ಹೊಣೆ' ನಾಟಕವು ಸಾಮಾಜಿಕ ನಾಟಕವಾಗಿದ್ದು, ಈ ನಾಟಕವನ್ನು ಬಣಕಾರರು ಒಂದೇ ರಾತ್ರಿಯಲ್ಲಿ ಬರೆದಿದ್ದರು. ಇದು ಆಶ್ಚರ್ಯವಾದರೂ ಸತ್ಯವಾಗಿದೆ. ಬಣಕಾರರ ಮನಸ್ಸಿನ ಏಕಾಗ್ರತೆಗೆ ಇದು ಸ್ಪಷ್ಟ ಉದಾಹರಣೆಯಾಗಿದೆ. ಈ ನಾಟಕವು ಮಿತ ಸಂತಾನವನ್ನು ಪ್ರೋತ್ಸಾಹಿಸುವ ಸಾಮಾಜಿಕ ನಾಟಕ,ಸಂತಾನ ನಿಯಂತ್ರಣದ ಅವಶ್ಯಕತೆಯನ್ನು ಪರಿಣಾಮಕಾರಿಯಾಗಿ ತಿಳಿಸುವ ಈ ನಾಟಕದ ಹತ್ತು ಸಾವಿರ ಪ್ರತಿಗಳನ್ನು ಸರ್ಕಾರವೇ ಮುಂದೆ ಬಂದು ಖರೀದಿಸಿ ನೂರಾರು ಗ್ರಾಮಾಂತರ ಪ್ರದೇಶಗಳ ಸರ್ಕಾರಿ ಆಸ್ಪತ್ರೆಗಳಿಗೆ ಹಂಚಿದೆ. 'ಯಾರು ಹೊಣೆ', ಕಲ್ಯಾಣ ಕ್ರಾಂತಿ ನಾಟಕಗಳೆರಡು ಭಾರಿ ಜನಮನ್ನಣೆಯನ್ನು ಪಡೆದು ನಿರೀಕ್ಷೆಗೂ ಮೀರಿ ಲಾಭವನ್ನು ತಂದುಕೊಟ್ಟವು ಎನ್ನುವದು ಇಲ್ಲಿ ಗಮನಾರ್ಹ. ಅಷ್ಟೆ ಅಲ್ಲದೆ 'ತಿಂದೋಡಿ', 'ಎಬಿಸಿಡಿ', 'ಉರಿಲಿಂಗ ಪೆದ್ದಿ' ಎಂಬ ಮಹತ್ತರ ನಾಟಕಗಳನ್ನು ರಚಿಸಿ ಉತ್ತಮ ಕಲಾವಿದರಿಂದ ಆಡಿಸಿದರು. ಈ ನಾಟಕಗಳು ಸಹಿತ ಜನರ ಮೆಚ್ಚುಗೆಗೆ ಪಾತ್ರವಾದವು.

ಸಣ್ಣವನಿರುವಾಗಲೇ ಬಣಕಾರರು ತಮ್ಮ ಊರಿನ ಸುತ್ತಮುತ್ತ ನಾಟಕ ಕಂಪನಿಗಳು ಬಂದಾಗ ತಪ್ಪದೇ ಮನೆಯವರ ಕಣ್ ತಪ್ಪಿಸಿ ಸ್ನೇಹಿತರೊಂದಿಗೆ ನಾಟಕ ನೊಡಲು ಹೊಗುತ್ತಿದ್ದರು. ನೋಡಿ ಬಂದ ಮರುದಿನವೇ ದನಗಳನ್ನು ಕಾಯಲಿಕ್ಕೆ ಅಡವಿಗೆ ಹೋದಾಗ ನಾಟಕದ ಸನ್ನಿವೇಶಗಳನ್ನು ನಟನೆಯ ಮೂಲಕ

ಸ್ನೇಹಿತರಿಗೆ ಮಾಡಿ ತೋರಿಸುತ್ತಿದ್ದರು ಅಲ್ಲಿಂದ ಬಂದ ನಾಟಕದ ವ್ಯಾಮೋಹ ಬಣಕಾರರ ಮನೆಯ ಆರ್ಥಿಕ ಪರಿಸ್ಥಿತಿಯನ್ನು ನಿಭಾಯಿಸಿದ್ದು ಒಂದು ಪವಾಡವೇ ಸರಿ. ಹೀಗೆ ಕಥೆ, ಕಾವ್ಯ, ಪತ್ರಿಕೋದ್ಯಮ, ನಾಟಕ ಅಂತ ಹಲವು ಕ್ಷೇತ್ರಗಳಲ್ಲಿ ಪರಿಶ್ರಮ ಪಟ್ಟು ಮಹತ್ತರ ಸೇವೆಗೈದ ಬಣಕಾರರು ತಮ್ಮ ಕುಟುಂದವರಿಗಷ್ಟೇ ಅಲ್ಲದೇ ನಾಡಿನಾದ್ಯಂತ ಹೆಸರುಗಳಿಸಿದರು. ಅವರ ಪರಿಶುದ್ಧ ಬರವಣಿಗೆಯೇ ಇದಕ್ಕೆಲ್ಲ ಕಾರಣವಾಗಿತ್ತು. ಅಷ್ಟೆ ಅಲ್ಲದೆ ಬಣಕಾರರು ನೆಚ್ಚಿನ ಕನ್ನಡ ಅಭಿಮಾನಿಯು ಹೌದು. ಕನ್ನಡ ಪರ ಹೋರಾಟಕ್ಕೆ ಅವರ ಒಂದು ಹೆಜ್ಜೆ ಮುಂದೆ.

**ಬಣಕಾರರ ಕನ್ನಡ ಚಳುವಳಿ :** ಕನ್ನಡ ನಾಡು, ನುಡಿ, ಗಡಿ, ಜಲಗಳಿಗೆ ಧಕ್ಕೆ ಬಂದಾಗ ಮಹದೇವ ಬಣಕಾರರು ಕೈಕಟ್ಟಿ ಕುಳಿತು ಕೊಳ್ಳುವ ಜಾಯಮಾನದವರಲ್ಲ. ಅಪ್ರತಿಮ ಕನ್ನಡ ಹೋರಾಟಗಾರರಾದ ಇವರು ತಮ್ಮ 14 ನೇ ವಯಸ್ಸಿನಲ್ಲಿಯೇ ಕರ್ನಾಟಕದ ಏಕೀಕರಣಕ್ಕಾಗಿ 1947 ರಲ್ಲಿ 'ಮೈಸೂರ ಚಲೋ' ಚಳುವಳಿಯಲ್ಲಿ ಧುಮುಕಿ ಶಿಕಾರಿಪುರದ ಜೈಲಿನಲ್ಲಿ ಕೆಲವು ತಿಂಗಳು ಜೈಲು ವಾಸ ಅನುಭವಿಸಿದರು. ಇದನ್ನು ಕಂಡುಕೊಂಡಾಗ ಬಣಕಾರರಿಗಿದ್ದ ಕನ್ನಡದ ಅಭಿಮಾನ, ಗೌರವವನ್ನು ಎತ್ತಿ ತೋರಿಸುತ್ತದೆ ಇದಕ್ಕೆ ಅವರ ಆತ್ಮ ಸ್ಥೈರ್ಯವೇ ಕಾರಣವಾಗಿದೆ.

ನವಯುಗ ಪತ್ರಿಕೆಯಲ್ಲಿ ಉಪಸಂಪಾದಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಕರ್ನಾಟಕದ ಏಕೀಕರಣದ ಬಗ್ಗೆ ನಾಡಿನ ಅಲ್ಲಲ್ಲಿ ಆಂದೋಲನವೇ ಪ್ರಾರಂಭವಾಗಿತ್ತು. ಏಕೀಕರಣದ ಬಗ್ಗೆ ಆಳವಾಗಿ ತಿಳಿದುಕೊಂಡ ಬಣಕಾರರು ಅರ್ಥಪೂರ್ಣವಾದ ಲೇಖನಗಳನ್ನು ಬರೆಯತೊಡಗಿದರೂ. ಇವರ ಲೇಖನಗಳನ್ನು ಸಾರ್ವಜನಿಕರು ಓದತೊಡಗಿದಾಗ ಮತ್ತಷ್ಟು ಅಂದೋಲನ ಚುರುಕು ಗೊಂಡಿತು. ಏಕೀಕರಣದ ಬಗ್ಗೆ ಆಗಾಗ ನಡೆಯುತ್ತಿದ್ದ ಜಾಗೃತ ಸಭೆಗಳಲ್ಲಿ ಮತ್ತು ಪ್ರತಿಭಟನೆಗಳಲ್ಲಿ ಸಾರ್ವಜನಿಕರು ಮುಕ್ತವಾಗಿ ಪಾಲ್ಗೊಳ್ಳಲು ಬಣಕಾರರ ಬರವಣಿಗೆಗಳು ಸಹಕಾರಿಯಾದವು. ಹೀಗೆ ಬಣಕಾರರು ಒಂದಿಲ್ಲೊಂದು ರೀತಿಯಲ್ಲಿ ಕನ್ನಡದ ಏಳಿಗೆಗಾಗಿ ಪರಿಶ್ರಮ ಪಡುತ್ತಿದ್ದರು.

ಸ್ವಾತಂತ್ರ್ಯ ಚಳುವಳಿಯಲ್ಲಿ ಬ್ರಿಟಿಷರ ಗುಂಡಿಗೆ ಬಲಿಯಾಗಿ ಸ್ವಾತಂತ್ರ್ಯದ ಚರಿತ್ರೆಯಲ್ಲಿ ಅಜರಾಮರರಾದ ಹುತಾತ್ಮ ಮಹದೇವ ಮೈಲಾರರವರು ಬಾಳಿ ಬೆಳಗಿದ ಪರಿಸರದಲ್ಲಿ ಹುಟ್ಟಿ ಬೆಳೆದ ಬಣಕಾರರಿಗೆ ದೇಶ ಭಕ್ತಿ ಹಾಗೇನೆ ಹೋರಾಟದ ಮನೋಭಾವ ರಕ್ತಗತವಾಗಿ ಹರಿದುಬಂದಿತ್ತು.

ಬಾಲ್ಯಾವಸ್ಥೆಯಲ್ಲಿ ತಮ್ಮೂರಾದ ಮೊಟೆಬೆನ್ನೂರಿನ್ನಲ್ಲಿ ಸಭೆ, ಸಮಾರಂಭದ ಭಾಷಣಗಳು ಬಣಕಾರರ ಕಿವಿಗೆ ಬಿದ್ದಾಗಲಂತೂ. ಮನೆಯವರ ಮಾತು ಲೆಕ್ಕಿಸದೆ

‘ಶಾಲೆಗೆ ಚಕ್ಕರ್ ಸಭೆಗೆ ಹಾಜರ್’ ಅನ್ನುವಂತೆ ಅಲ್ಲಿ ಹಾಜರಿರುತ್ತಿದ್ದರು. ಹೀಗಿರುವಾಗ ಒಮ್ಮೆ ಮೊಟೆಬೆನ್ನೂರಿಗೆ ಕೀರ್ತನಕಾರರೊಬ್ಬರು ಬಂದಿದ್ದರು. ಕೀರ್ತನೆ ಮಾಡುವಾಗ ಆ ಕೀರ್ತನಗಾರ ಮಧ್ಯದಲ್ಲಿ ಆಗಾಗ ಕಾಂಗ್ರೇಸ್‌ನ್ ಬಗ್ಗೆ, ಧೇಶಾಭಿಮಾನದ ಕುರಿತು, ಸ್ವಾತಂತ್ರ್ಯದ ಬಗ್ಗೆ ಪರಿಣಾಮಕಾರಿಯಾಗಿ ಮಾತನಾಡುತ್ತಿದ್ದ. ಅಲ್ಲಿಯೇ ಆಸಕ್ತಿಯಿಂದ ಕೇಳುತ್ತಿದ್ದ ಬಾಲಕ ಬಣಕಾರರಿಗೆ ಕೀರ್ತನಕಾರನ ಪರಿಣಾಮಕಾರಿ ಭಾಷಣದ ತುಣುಕುಗಳು, ದೇಶಾಭಿಮಾನದ ಮಾತುಗಳು ಮನಸ್ಸಿನ ಮೇಲೆ ಬಹಳಷ್ಟು ಪರಿಣಾಮ ಬೀರಿದವು. ಅಲ್ಲದೆ ಇನ್ನೊಂದು ಪ್ರಸಂಗದಲ್ಲಿ ಆರ್‌ಎಸ್‌ಎಸ್.ದ ಕಾರ್ಯಕರ್ತನ ದೇಶಾಭಿಮಾನದ ಆವೇಶಭರಿತ ಭಾಷಣಕ್ಕೆ ಬಣಕಾರರು ಮಾರು ಹೋಗಿಬಿಟ್ಟರು. ಇವೆಲ್ಲ ಕ್ಷಣಗಳು ಬಣಕಾರರ ಹೋರಾಟದ ಮನೋಭಾವನೆ ಬೆಳೆಯಲು ಪೂರಕವಾದವು.

ಇನ್ನೊಂದು ಸಂದರ್ಭ ಹೇಗಿತ್ತೆಂದರೆ ಹುಬ್ಬಳ್ಳಿಯ ಟೌನ್ ಹಾಲಿನಲ್ಲಿ ಸಭೆನಡೆದಿತ್ತು. ಆಗ ಪ್ರಭಾವಿ ಮುಖಂಡರೆನಿಸಿಕೊಂಡಿದ್ದ ಕಾಂಗ್ರೇಸಿನ ಗುದ್ಲೆಪ್ಪ ಹಳ್ಳಿಕೇರಿಯವರು ಆ ಸಭೆಯಲ್ಲಿ ಪಾಲ್ಗೊಂಡಿದ್ದರು. ಸಭೆಯಲ್ಲಿ ಮಹದೇವ ಬಣಕಾರರಿಗೆ ಮತ್ತು ಗುದ್ಲೆಪ್ಪ ಹಳ್ಳಿಕೇರಿಯವರಿಗೆ ಮಾತಿನ ಚಕಮಕಿಯಾಗಿ ಜಗಳವಾಯಿತು. ಪಕ್ಷಾತೀತವಾದ ಏಕೀಕರಣದ ಸಭೆಯಲ್ಲಿ ಹಳ್ಳಿಕೇರಿಯವರು ತಮ್ಮ ಭಾಷಣದಲ್ಲಿ ಕಾಂಗ್ರೇಸ್ ಪಕ್ಷವನ್ನ ಬಳಸಿಕೊಂಡಿದ್ದು ಈ ಜಗಳಕ್ಕೆ ಕಾರಣವಾಯಿತು. ಪಕ್ಷವನ್ನು ಬಳಸಿಕೊಂಡು ಮಾತನಾಡಿದ ಹಳ್ಳಿಕೇರಿಯವರ ವಿರುದ್ದ ಸಿಡಿದೆದ್ದ ಬಣಕಾರರು, ಹಳ್ಳಿಕೇರಿಯವರನ್ನ ಕೇಳಿದ್ದು ಒಂದೇ ಒಂದು ಪ್ರಶ್ನೆಯನ್ನು ನಿಮಗೆ ಕಾಂಗ್ರೇಸ್ ಬೇಕೋ? ಇಲ್ಲ ಕರ್ನಾಟಕ ಬೇಕೋ? ಇದು ಮೊದಲು ಚರ್ಚೆಯಾಗಲಿ ಎಂದು ಸಭೆಯಲ್ಲಿ ಹಟಹಿಡಿದರು. ಇದರಿಂದ ಸಭೆ ಗೊಂದಲದ ಗೂಡಾಯಿತು. ಸಭೆಯಲ್ಲಿ ಭಾಗವಹಿಸಿದ ಅನೇಕರು ಬಣಕಾರರ ನಿಲುವಿಗೆ ಬದ್ದರಾದರು. ಪಕ್ಷಾತೀತ ಏಕೀಕರಣದ ಸಭೆಯಲ್ಲಿ ಪಕ್ಷವನ್ನು ಬಳಸಿಕೊಂಡು ಮಾತನಾಡಿದ ಹಳ್ಳಿಕೇರಿಯವರಿಗೆ, ಬಣಕಾರರು ತಮ್ಮ ಮಾತಿನ ಏಟಿನಿಂದ ಬೆವರಿಳಿಸಿದರು ಇದು ಪತ್ರಿಕೆಗಳಲ್ಲಿ ಬಿಸಿಬಿಸಿ ಸುದ್ದಿಯಾಗಿ ಚರ್ಚೆಯಾಯಿತು.

ಮುಂದೆ ಬಣಕಾರರು ಏಕೀಕರಣಕ್ಕಾಗಿ ಪಣತೊಟ್ಟು ನಿಂತರು. ಸ್ನೇಹಿತರಾದ ಶ್ರೀ ಸಂಗಣ್ಣ ಕುಪ್ಪಸ, ಶ್ರೀ ಎನ್.ಆರ್.ಗುಂಜಳ ಅವರ ಸಹಾಯದೊಂದಿಗೆ ಏಕೀಕರಣಕ್ಕಾಗಿ ಕಿಂಕರ ಬಳಗವನ್ನು ಕಟ್ಟಿಕೊಂಡು ನಾಡಿನಾದ್ಯಂತ ಸಂಚರಿಸಿ ಜನರಲ್ಲಿ ಏಕೀಕರಣದ ಕಹಳೆಯನ್ನು ಊದಿ ಜಾಗೃತಗೊಳಿಸುತ್ತಾ ಸಾಗಿದರು.

ನಿಸ್ವಾರ್ಥ ಮನೋಧರ್ಮ ನಿಷ್ಪಕ್ಷಪಾತದ ನಿಲುವುಗಳು ಬಣಕಾರರ ಮೇರು ವ್ಯಕ್ತಿತ್ವಕ್ಕೆ ಕನ್ನಡಿಯಾದವು.

ಮಹದೇವ ಬಣಕಾರರು ವಿಧಾನ ಸಭೆಯ ಸದಸ್ಯರಾಗಿದ್ದ ಕಾಲ ಆಗ ಎಸ್.ನಿಜಲಿಂಗಪ್ಪನವರು ಮುಖ್ಯ ಮಂತ್ರಿಯಾಗಿದ್ದರು. ಆಗ ಲಿಂಗಾಯತ ಒಳಪಂಗಡಗಳಾದ ಸಾದರು ಮತ್ತು ಬಣಜಿಗರಿಗೆ ಬದ್ದ ವೈರತ್ವ ಈ ಎರಡು ಪಂಗಡಗಳನ್ನು ಪ್ರತಿನಿಧಿಸುವ ಸಿರಿಗೇರಿ ಶ್ರೀ ತರಳುಬಾಳು ಜಗದ್ಗುರು ಬ್ರಹನ್ಮಠ ಮತ್ತು ಚಿತ್ರದುರ್ಗದ ಬ್ರಹನ್ಮಠಗಳ ಮಧ್ಯ ಬಾರಿ ವಿರಸ. ಈ ಸಂದರ್ಭದಲ್ಲಿ ಜಾತಿಯ ಕಾರಣಕ್ಕಾಗಿ ಮುಖ್ಯಮಂತ್ರಿ ಎಸ್.ನಿಜಲಿಂಗಪ್ಪನವರ ಸರಕಾರ ಸಿರಿಗೇರಿ ಮಠದ ಮೇಲೆ ದಿಗ್ಭಂಧನ ಹಾಕಿತ್ತು. ಈ ಸಮಯದಲ್ಲಿ ಅಪ್ಪಟ ಜಾತ್ಯಾತೀತ ಮನೋಭಾವನೆಯುಳ್ಳ ಶಾಸಕ ಬಣಕಾರರು, ಜಾತಿಯ ಕಾರಣಕ್ಕಾಗಿ ಶ್ರೀ ಮಠದ ಮೇಲೆ ದಿಗ್ಭಂದನ ಹಾಕಿದ ಎಸ್. ನಿಜಲಿಂಗಪ್ಪನವರ ಸರಕಾರದ ಕ್ರಮವನ್ನು ಖಂಡಿಸಿ, ಪ್ರತಿಭಟಿಸಿ ದಿಗ್ಭಂದನವನ್ನು ಹಿಂದಕ್ಕೆ ಪಡೆಯುವಂತೆ ಬಣಕಾರರು ಮಾಡಿದ ಹೋರಾಟದ ಪ್ರಸಂಗವು ವಿಧಾನ ಸಭೆಯ ಇತಿಹಾಸದ ಪುಟದಲ್ಲಿ ಅಚ್ಚಳಿಯಾಗಿ ಉಳಿಯುವಂತಾಯಿತು.

ಈ ಒಂದು ಪ್ರಸಂಗವನ್ನು ಬಳಸಿಕೊಂಡು ಬಣಕಾರರು ತಮ್ಮ ಅದ್ಭುತ ಮಹಾಕಾವ್ಯ "ಶಿವಕುಮಾರ ಚರಿತಂ" ದಲ್ಲಿ ಭಾಮಿನಿ ಷಟ್ಪದಿಯಲ್ಲಿ ಈ ರೀತಿಯಾಗಿ ಪದ್ಯವನ್ನು ರಚಿಸಿದ್ದಾರೆ.

ನೂರು ನಿಜಲಿಂಗಪ್ಪ ಬಂದರು
ತೋರುವೆವು ನಾವಾರು ಎಂಬುದ
ತೋರಬಾರದು ಬೆನ್ನ ವೈರಿಗೆ ಯುದ್ಧ ನಡೆದಿರಲು
ಆರ ಹಂಗೆಮಗೇಕೆ ಸತ್ಯದ
ದಾರಿಯಲಿ ವಿಜಯವನು ಸಾಧಿಸಿ
ಸಾರಿ ವಿಶ್ವಕ್ಕೆ ನಮ್ಮ ಮಠ ಸದ್ಧರ್ಮ ತೋರಿಹುದು
ಅಂದು ಶಾಸನ ಸಭೆಯು ನಡೆದಿರೆ
ನಿಂದು ಗುಡುಗಿದೆ ಅಳಿದು ಸ್ಯೆರಣೆ
ನೊಂದು ನುಡಿದೆನು ಸಭೆಯ ನಿಯಮಾವಳಿಗಳನು ಮೀರಿ
ಬಂದು ಧ್ವನಿಗೂಡಿಸುತಾ ಶಾಸಕ
ರೆಂದರೇನಿ ನೀಚಕಾರ್ಯವು
ಸಂದವು ಗೌರವವು ರಾಜ್ಯಾಡಳಿತವೆಂಬುದಕೆ.

ಹೀಗೆ ಜಾತಿ ಮತ ಪಂಥಗಳನ್ನು ಎಣಿಸದ ಬಣಕಾರರು ಜಾತೀಯ ಗಡಿದಾಟಿ ಬೆಳೆದವರು. ಅನ್ಯಾಯವಾದಾಗ ತಮ್ಮ ಶಕ್ತಿ ಮೀರಿ ಪ್ರತಿಭಟಿಸುತ್ತಿದ್ದರು. ತಮ್ಮ ಮಾತಿನ ಚಾಟಿ ಏಟನಿಂದ ಎಂಥವರನ್ನು ಮೂಕರನ್ನಾಗಿರಿಸುತ್ತಿದ್ದರು. ತಮ್ಮ ನೀತಿವಂತ ರಾಜಕೀಯ ಚಾಣಾಕ್ಷತನದಿಂದ, ಕಾರಣವಿಲ್ಲದೆ ಸಿರಿಗೇರಿ ಮಠದ ಮೇಲಿನ ದಿಗ್ಭಂಧನವನ್ನು ಸರಕಾರ ರದ್ದುಪಡಿಸುವಲ್ಲಿ ಯಶಸ್ವಿಯಾಯಿತು.

ನ್ಯಾಯಾ ನೀತಿಗಳೊಂದಿಗೆ ಹಿಡಿದ ಕೆಲಸವನ್ನು ಮುಗಿಸಿಬಿಡುವ ಛಲದಂಕ ಮಲ್ಲರಾಗಿದ್ದರು ಬಣಕಾರರು. ಹೀಗೆ ವೈಯಕ್ತಿಕ ಅವರ ಸಾಧನೆಗಳೆಲ್ಲವೂ ಒಂದು ಕುಟುಂಬಕ್ಕೆ, ಒಂದು ವರ್ಗಕ್ಕೆ ಮೀಸಲುವಾಗದೆ ಸಾರ್ವಜನಿಕವೇ ಆಗಿವೆ. ತಮಗೆ ತಮ್ಮ ಕುಟುಂಬಕ್ಕೆ ಎನ್ನುವುದಕ್ಕಿಂತ ನಾಡು, ನುಡಿ, ದೇಶ ಅಂತ ಸಾಮಾಜಿಕ ಬದುಕಿಗೆ ದುಡಿದದ್ದೇ ಹೆಚ್ಚು. ನಿಶ್ಚಿತ ಗುರಿ ಹೊಂದದೆ ಲೌಕಿಕ ಜೀವನವನ್ನು ಅರುಹುದೇ, ವ್ಯವಸ್ಥಿತ ಬದುಕಿನ ಚೌಕಟ್ಟಿಗೆ ಅಂಟಿ ಕೊಳ್ಳದೆ ಸುಂಟರ ಗಾಳಿಯಂತೆ ಸುಳಿದಾಡಿ ಕಂಡಕಂಡಲ್ಲಿ ಪರಿಣಾಮಕಾರಿ ಭಾಷಣಗಳನ್ನಾಡುತ್ತಿದ್ದ ಬಣಕಾರರು ತಮ್ಮ ದಾಂಪತ್ಯ ಜೀವನದ ಬಗ್ಗೆ ಯಾವತ್ತೂ ಚಿಂತಿಸಲಿಲ್ಲಾ.

## ದಾಂಪತ್ಯ ಜೀವನ :

ಬಹುತೇಕ ಎಲ್ಲಾ ಕ್ಷೇತ್ರಗಳಲ್ಲಿ ಸ್ವಪ್ರೇರಣೆಯಿಂದ ಪಾಂಡಿತ್ಯವನ್ನು ಪಡೆದುಕೊಂಡ ಶ್ರೀ ಬಣಕಾರರ ಕೀರ್ತಿ ನಾಡಿನೆಲ್ಲಡೆ ಹಬ್ಬಿತ್ತು. ಆ ಸಂದರ್ಭದಲ್ಲಿ ಮಾಕನೂರ ಮಲ್ಲೇಶಪ್ಪನವರೆಂದರೆ ದಾವಣಗೇರಿಗೆ ಸುಪ್ರಸಿದ್ಧ ವರ್ತಕರಾಗಿದ್ದರು. ಶ್ರೀ ಬಣಕಾರರ ಕೀರ್ತಿವಾಸನೆ ಮಲ್ಲೇಶಪ್ಪನವರಿಗೆ ಬಡಿದಿತ್ತು. ಅತ್ಯಂತ ಉಧಾರಿಗಳು ಹಾಗೂ ಶ್ರೀಮಂತರು ಆಗಿದ್ದ ಮಲ್ಲೇಶಪ್ಪನವರು ಬಣಕಾರರ ವಿಭಿನ್ನ ವ್ಯಕ್ತಿತ್ವಕ್ಕೆ ಮನಸೋತು ತಮ್ಮ ಸಹೋದರಿಯಾದ ಪಾರ್ವತಮ್ಮನವರನ್ನು ಬಣಕಾರರಿಗೆ ಕೊಟ್ಟು ಮದುವೆ ಮಾಡಿಸಬೇಕೆಂಬ ಮಹಾದಾಶೆ ಹೊಂದಿದ್ದರು. ಇದಕ್ಕೆ ಮಲ್ಲೇಶಪ್ಪನವರ ಕುಟುಂಬ ಬಳಗವೆಲ್ಲ ಸಹಮತ ವ್ಯಕ್ತಪಡಿಸಿತ್ತು. ಮಲ್ಲೇಶಪ್ಪನವರು ತಮ್ಮ ಮಗಳ ಮದುವೆಯಲ್ಲಿ ತಮ್ಮ ತಂಗಿ ಪಾರ್ವತಮ್ಮಳ ಮದುವೆ ಮಾಡಿದರಾಯಿತೆಂಬ ತೀರ್ಮಾನವನ್ನು ಹೊಂದಿದ್ದರು. ಆದರೆ ಮಲ್ಲೇಶಪ್ಪನವರು ಕೈಗೊಂಡ ಈ ಮದುವೆ ವಿಚಾರ ಶ್ರೀ ಬಣಕಾರರಿಗೆ ತಲುಪಿರಲಿಲ್ಲ, ಬಣಕಾರರಿಗೆ ಈ ವಿಚಾರವಾಗಿ ವಿಷಯವನ್ನು ಹೇಗೆ ತಲುಪಿಸಬೇಕೆಂಬ ಆಲೋಚನೆಯಲ್ಲಿದ್ದಾಗ ಮಲ್ಲೇಶಪ್ಪನವರಿಗೆ ತಟ್ಟನೆ ನೆನಪಾಗಿದ್ದು ಮೊಟೆಬೆನ್ನೂರಿನ ಶಿವನಗೌಡ ಶಿಕ್ಷಕರು. ಇವರು ಮಲ್ಲೇಶಪ್ಪನವರ ತಂಗಿ ಪಾರ್ವತಮ್ಮನವರಿಗೆ ಮಾಕನೂರಿನಲ್ಲಿ ಶಿಕ್ಷಣ ನೀಡಿದ್ದರು.ಆಕಾರಣಕ್ಕಾಗಿ

ಶಿವನಗೌಡ ಶಿಕ್ಷಕರನ್ನು ದಾವಣಗೇರಿಗೆ ಕರೆಯಿಸಿಕೊಂಡು. ತಮ್ಮ ತಂಗಿಯನ್ನು ಶ್ರೀ ಬಣಕಾರರಿಗೆ ಕೊಟ್ಟು ಮದುವೆ ಮಾಡಬೇಕೆಂಬ ವಿಚಾರವನ್ನು ಮುಂದಿಟ್ಟರು. ಶ್ರೀ ಬಣಕಾರರಿಗೆ ಪಾರ್ವತಮ್ಮನವರು ಹೇಳಿಮಾಡಿಸಿದ ಜೋಡಿ, ಈ ಸಂಬಂಧ ಬೆಳೆಸಲು ಶಕ್ತಿ ಮೀರಿ ಪ್ರಯತ್ನಿಸುತ್ತೇನೆಂದು ಹೇಳಿ ಶಿವನಗೌಡರು ಮೊಟೆಬೆನ್ನೂರಿಗೆ ಬಂದರು. ಮಲ್ಲೇಶಪ್ಪನವರಲ್ಲಿನ ವಿಚಾರಗಳೆಲ್ಲವೆನ್ನು ಬಣಕಾರರ ತಂದೆ ಗದಿಗೆಪ್ಪನವರಿಗೆ ಹೇಳಿದರು. ಗದಿಗೆಪ್ಪನವರು ಸಂತಸಪಟ್ಟರೂ ತಮ್ಮ ಮನೆಯ ಆರ್ಥಿಕ ಪರಿಸ್ಥಿತಿಯಿಂದ ಸ್ವಲ್ಪ ಹಿಂಜರಿದಿದ್ದರು. ದೊಡ್ಡ ಶ್ರೀ ಮಂತ ಕುಟುಂಬದೊಂದಿಗೆ ಸಂಬಂಧ ಬೆಳೆಸುವುದು ಸ್ವಲ್ಪ ಕಷ್ಟವೆ ಎಂಬಕೊರಗು ಗದಿಗೆಪ್ಪನವರಲ್ಲಿ ಮನೆಮಾಡಿತ್ತು. ಆದರೂ ಶಿವನಗೌಡರು ಗದಿಗೆಪ್ಪನವರ ಮನವೊಲಿಸಿ ಶ್ರೀ ಬಣಕಾರರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಪಾರ್ವತಮ್ಮನವರನ್ನು ಮನೆ ತುಂಬಿಸಿಕೊಳ್ಳಲು ಶಿಕ್ಷಕ ಶಿವನಗೌಡರು ಯಶಸ್ವಿಯಾದರು. ಕೆಲವೇ ದಿನಗಳಲ್ಲಿ ಸಾಂಪ್ರದಾಯಕ ಪದ್ಧತಿಗಳನ್ನು ಮಾಡಿಮುಗಿಸಿ ಬಿಟ್ಟರು. ಮುಂದೆ 1955 ಮೇ 19 ರಂದು ಶ್ರೀ ಬಣಕಾರರು ಮತ್ತು ಪಾರ್ವತಮ್ಮನವರ ಮದುವೆ ದಾವಣಗೇರಿಯಲ್ಲಿ ತಮ್ಮ ಧಾರ್ಮಿಕ ಪದ್ಧತಿಯಲ್ಲಿ ಜರುಗಿಹೋಯಿತು. ಇದು ಆಕಸ್ಮಿಕ ಮತ್ತು ಅನೀರಿಕ್ಷಿತ ಮದುವೆ ಅನ್ನುವದಕ್ಕಿಂತ ಬಣಕಾರರ ಒಂಟಿ ಜೀವನ, ಅಲೆಮಾರಿತನ ಮಾಯವಾಗಿ ಪಾರ್ವತಮ್ಮನವರನ್ನ ಕೈ ಹಿಡಿದ ಬಣಕಾರರ ಜೀವನ ಸಾರ್ಥಕವಾಯಿತು ಎಂದರೆ ತಪ್ಪಾಗಲಾರದು. ಇದು ಅವರ ಕಾಯಕ ನಿಷ್ಠೆ ತಂದೆ ಗದಿಗೆಪ್ಪನವರ ಸಾತ್ವಿಕ ಮನುಷ್ಯತ್ವವೇ ಸಾಕ್ಷಿಯಾಗಿತ್ತು.

ಮುಂದೆ ಬಣಕಾರರು 1957 ರಿಂದ 67 ರವರೆಗೆ ಪತ್ರಿಕೆಯ ಸಂಪಾದಕರಾಗಿ ಕಾರ್ಯನಿರ್ವಹಿಸುತ್ತಿದ್ದ ವೇಳೆಯಲ್ಲಿ, ಸಾರ್ವಜನಿಕ ವಲಯದಲ್ಲಿ ಬಣಕಾರರ ಮೇಲಿದ್ದ ಗೌರವ ಇಮ್ಮಡಿಯಾಯಿತು. ಕೆಲವೇ ದಿನಗಳಲ್ಲಿ ಸಾರ್ವಜನಿಕ ಒತ್ತಡಕ್ಕೆ ಮಣಿದು 1967 ರಲ್ಲಿ ರಾಜ್ಯ ವಿಧಾನ ಸಭೆಯ ಚುನಾವಣೆಗೆ ಸ್ಪರ್ಧಿಸಿ ಚುನಾಯಿತರಾಗಿ ಶಾಸನ ಸಭೆಯ ಒಳಗೆ ಹೊರಗೆ ಸಮರ್ಥ ಶಾಸಕರೆಂದು ಹೆಸರು ಪಡೆದರು.

ರಾಜಕೀಯ ಕ್ಷೇತ್ರಕ್ಕೆ ಅಂಟಿಕೊಂಡ ಮೇಲೆ ರಾಜಧಾನಿ ಬೆಂಗಳೂರಿಗೆ ತಮ್ಮ ಗಂಟು ಮೂಟೆ ಕಟ್ಟಿಕೊಂಡು ಕುಟುಂಬ ಸಮೇತ ಬಂದರು. ಕೇವಲ ತಮ್ಮ ವೈಯಕ್ತಿಕ ಹಿತಾಸಕ್ತಿಯನ್ನು ಬಯಸದ ಬಣಕಾರರು ತಮ್ಮ ಕುಟುಂಬದ ಬಳಗವನ್ನೆಲ್ಲ ಜೊತೆಗೆ ಕರೆದು ಕೊಂಡು ಬಂದರು. ತಾವು ಶಿಕ್ಷಣ ಪಡೆಯುತ್ತಿದ್ದ ಸಂದರ್ಭದಲ್ಲಿ ಅನುಭವಿಸಿದ ಬವಣೆ ತಮ್ಮ ಮಕ್ಕಳಿಗೆ ಹಾಗೂ ಇನ್ನಾರಿಗೂ ಬರಬಾರದೆಂದು

ಬಯಸಿ ಪ್ರತಿಯೊಬ್ಬ ಮಕ್ಕಳಿಗೆ ಸೂಕ್ತ ಸಮಯದಲ್ಲಿ ಶಿಕ್ಷಣ ಕೊಡಿಸಿ ಉದ್ಯೋಗದಲ್ಲಿ ತೊಡಗಿಸಿದರು. ಅದೇ ಸಮಯದಲ್ಲಿ ವಯಸ್ಸಿಗೆ ಬಂದ ಮಕ್ಕಳನ್ನು ಮದುವೆಮಾಡಿ ನೆಲಕಾಣುವಂತೆ ಮಾಡಿದರು. ಆದರೆ ಇವೆಲ್ಲವುಗಳಿಗೆ ತಾವೆ ಕಾರಣಿಭೂತರೆಂದು ತಮ್ಮಷ್ಟಕ್ಕೆ ಬೆನ್ನುಚಪ್ಪರಿಸಿಕೊಳ್ಳಲಿಲ್ಲ ಇದೆಲ್ಲಕ್ಕೆ ಪತ್ನಿ ಪಾರ್ವತಮ್ಮನವರ ಸಹಾನುಭೂತಿ ಕಾರಣವಾಗಿತ್ತು. "ಯಶಸ್ವಿ ಪುರುಷನ ಹಿಂದೆ ಒಬ್ಬ ಮಹಿಳೆ" (Behind every successful man there is a woman) ಅನ್ನುವುದಕ್ಕೆ ಪಾರ್ವತಮ್ಮನವರು ನಿದರ್ಶನದಂತಿದ್ಧರು.

## ಪತಿಗೆ ತಕ್ಕ ಪತ್ನಿ :

ತಮ್ಮ ಪತಿಯನ್ನು ದೇವರೆಂದು ತಿಳಿದಕೊಂಡಿದ್ದ ಪಾರ್ವತಮ್ಮನವರು ಹೆಸರಿಗೆತಕ್ಕಂತೆ ಇವರು ಸಾಕ್ಷಾತ್ ಪಾರ್ವತಿಯಂತ್ತಿದ್ದರು. ಶ್ರೀಮಂತ ಕುಟುಂಬವೊಂದರ ಸಂಸ್ಕೃತಿಯಲ್ಲಿ ಬೆಳೆದ ಇವರಿಗೆ ಅಹಂಕಾರ ಅಹಂಭಾವದಿಂದ ದೂರವಿದ್ದ ಪಾರ್ವತಮ್ಮನವರು, ಸಹನೆಯ ಪ್ರತಿರೂಪದಂತ್ತಿದ್ದರು ಪತಿಯ ಮನೆಯಕಡೆಯವರೆಗೆ ಸಹಾಯ ಮಾಡುತ್ತಿರುವುದನ್ನು ಅಸೂಯೆ ಪಡುತ್ತಿರುವ ಎಷ್ಟೋ ಕುಟುಂಬಗಳನ್ನು ನಿತ್ಯ ಕಾಣುತ್ತಿರುವ ಸಮಾಜದಲ್ಲಿ, ಶ್ರೀಮತಿ ಪಾರ್ವತಮ್ಮನವರು ಇದಕ್ಕೆ ಅಪವಾದ ಎನ್ನುವಂತಿದ್ದರು. ಯಾವುದೆ ಭೇದಭಾವವಿಲ್ಲದೆ ಪತಿಯ ಮನೆಯ ಕಡೆ ಸಂಬಂಧಿಗಳನ್ನು ತಮ್ಮ ಮಕ್ಕಳಂತೆ ಸಮಾನವಾಗಿ ಕಂಡ ಉದಾರ ಜೀವಿಗಳಾಗಿದ್ದರು.

ಶ್ರೀ ಬಣಕಾರರು ಸಾಹಿತ್ಯ, ರಾಜಕೀಯ, ಸಮಾಜ ಸೇವೆ ಅಂತ ಅನೇಕ ಚಟುವಟಿಕೆಯಲ್ಲಿ ತೊಡಗಿಕೊಂಡು ಮನೆಗೆ ಬರುವುದೇ ಅಪರೂಪವಾಗಿತ್ತು. ಇಂತಹ ಸನ್ನಿವೇಶದಲ್ಲಿ ಪತ್ನಿ ಪಾರ್ವತಮ್ಮನವರ ಮನೆತನದ ಜವಾಬ್ದಾರಿ ಹೇಳತಿರದು. ಶ್ರೀಮಂತ ಮನೆತನದಲ್ಲಿ ಬೆಳೆದ ಪಾರ್ವತಮ್ಮನವರು ಆಡಂಬರದ ಜೀವನಕ್ಕೆ ಎಂದೂ ಮಾರುಹೋದವರೇ ಅಲ್ಲ, ಅದನ್ನು ಯಾವಾಗಲೂ ಬಯಸಿರಲೂ ಇಲ್ಲ. ಸರಳ ನಡೆ–ನುಡಿಗೆ ಹೆಸರಾದ ಪಾರ್ವತಮ್ಮನವರಿಗೆ ಕಡು ಬಡವರನ್ನು ಕಂಡರೆ ಬಹಳಷ್ಟು ಪ್ರೀತಿ. ಪತಿ ದೇವರನ್ನು ಕೇಳಿಕೊಂಡು ಯಾರಾದರು ಮನೆ ಬಾಗಿಲಿಗೆ ಬಂದರೆ ಊಟ, ಉಪಚಾರ ಅಂತ ಅತಿಥಿ ಸತ್ಕಾರಗಳೆಲ್ಲ ಪಾರ್ವತಮ್ಮನವರದೇ. ಹೀಗಾಗಿ ಎಲ್ಲರ ಬಾಯಲ್ಲಿ ಪಾರ್ವತಮ್ಮ 'ಅಮ್ಮ' ಅಂತ ಕರೆಯಿಸಿಕೊಳ್ಳುತ್ತಿದ್ದರು. ಪತಿ ಬಣಕಾರರು ಎಲ್ಲಿಗೆ ಹೋಗಲಿ, ಯಾವುದೇ ಕೆಲಸಕ್ಕೆ ಕೈಹಾಕಿದಾಗಲೂ ಒಳ್ಳೆಯದನ್ನು ಬಯಸಿ ಹರಸುತ್ತಿದ್ದರು. ಪ್ರತಿ ದಿನ ಪತಿ ಮನೆಯಿಂದ

ಹೊರಟಾಗ ಬಾಗಿಲದವರೆಗೆ ಬಂದು, ಮನದೊಳಗೆ ದೇವರನ್ನು ಪ್ರಾರ್ಥಿಸಿ ಶ್ರೀಬಣಕಾರರನ್ನು ಬೀಳ್ಕೊಡುತ್ತಿದ್ದರು. ಒಟ್ಟಿನಲ್ಲಿ ಬಣಕಾರರ ಜೀವನಕ್ಕೆ ಒಳ್ಳೆಯದನ್ನೇ ಬಯಸುತಿದ್ದ ಪಾರ್ವತಮ್ಮನವರು ಪತಿಗೆ ತಕ್ಕ ಪತ್ನಿಯಾಗಿದ್ದರು.

## ಸಂಸಾರ ಆನಂದಸಾಗರ :

ಶ್ರೀ ಬಣಕಾರರ ಸಂಸಾರ ಆನಂದಮಯವಾಗಿತ್ತು. ಈ ಸಂಸಾರ ಸಾಗರಕ್ಕೆ ಪತ್ನಿ ಪಾರ್ವತಮ್ಮನವರು ಸೇತುವೆಯಂತಿದ್ದರು. ಶ್ರೀ ಬಣಕಾರರು ಬೆಂಗಳೂರಿನಲ್ಲಿ ವಾಸಿಸುತ್ತಿರುವ ಸಂದರ್ಭದಲ್ಲಿ ಯೋಗಾ ಯೋಗವೆಂಬಂತೆ ಬೆಂಗಳೂರಿನ ರಾಜಾಜೀನಗರದ ಇಎಸ್ಇ ಆಸ್ಪತ್ರೆಯ ವೈದ್ಯರಾಗಿದ್ದ ಡಾ: ಲಲಿತಾರವರನ್ನು ಮದುವೆಯಾದರು. ಆಸ್ಪತ್ರೆಯ ಸ್ಥಿತಪ್ರಜ್ಞೆಯಾಗಿದ್ದ ಲಲಿತಾರವರು ಬಣಕಾರರ ಬಹುಮುಖ ಪ್ರತಿಭೆಯನ್ನು ದೂರದಿಂದಲೇ ಗುರುತಿಸಿ, ವ್ಯಕ್ತಿತ್ವಕ್ಕೆ ಮಾರುಹೊಗಿ ಆತ್ಮ ಸಂತೋಷದಿಂದ ಮದುವೆಯಾಗಿದ್ದರು.

ಅಷ್ಟೋತ್ತಿಗೆ ಆರು ಮಕ್ಕಳ ತಂದೆಯಾಗಿದ್ದ ಬಣಕಾರರರಿಗೆ ಡಾ: ಲಲಿತಾರವರನ್ನು ಮದುವೆಯಾದ ನಂತರ ಧರ್ಮಪತ್ನಿ ಪಾರ್ವತಮ್ಮನವರಿಗೆ ಮೋಸ ಮಾಡಿದೆನೆಂದು, ಕೆಲವು ದಿನ ಏನೋ ಕಳೆದುಕೊಂಡವರಂತೆ ಚಿಂತೆಗೊಳಗಾದರು. ಆದರೆ ಸಹನಾ ಮೂರ್ತಿಯಂತಿದ್ದ ಪಾರ್ವತಮ್ಮನವರು ಪತಿಗೆ ಆತ್ಮ ಸ್ಥೈರ್ಯ ತುಂಬಿದರು. ನಡೆದದ್ದು ನಡೆದು ಹೋಗಿದೆ, ಆಗಿ ಹೋದ ಕ್ಷಣಗಳಿಗೆ ಚಿಂತಿಸಿ ಆರೋಗ್ಯ ಸಂಪತ್ತನ್ನು ಹಾಳು ಮಾಡಿಕೊಳ್ಳಬೇಡಿರೆಂದು ನಾನೇನು ಅಡ್ಡಿ ಪಡಿಸಲಾರೆ ಎಂದು ಧೈರ್ಯ ಹೇಳುವುದರ ಮೂಲಕ ಪಾರ್ವತಮ್ಮನವರು ಹೃದಯ ಶ್ರೀಮಂತಿಕೆ ಮೆರೆದರು ಪಾರ್ವತಮ್ಮನವರ ಉದರದಲ್ಲಿ ಜನಿಸಿದ ಆರು ಮಕ್ಕಳಲ್ಲಿ ಐದು ಜನ ಗಂಡು ಮಕ್ಕಳು. ಒಬ್ಬಳೆ ಹೆಣ್ಣು ಮಗಳು ಹಿರಿಯ ಮಗ ಬಸವರಾಜ ಪದವೀಧರರಾಗಿದ್ದು ಚಾಣಾಕ್ಷತರು. ಮದುವೆಯಾಗಿ ಎರಡು ಮಕ್ಕಳನ್ನು ಉನ್ನತ ವ್ಯಾಸಾಂಗದಲ್ಲಿ ತೊಡಗಿಸಿ ಬೆಂಗಳೂರಿನಲ್ಲಿ ವಾಸವಾಗಿದ್ದಾರೆ. ಎರಡನೇಯ ಮಗಳಾದ ಗೀತಾ ಬಿಎಎಲ್ಎಲ್ಬಿ ಪದವೀಧರೆ ಮದುವೆಯಾಗಿ ಪತಿಯೊಂದಿಗೆ ಬೆಂಗಳೂರಿನಲ್ಲಿ ನೆಮ್ಮದಿಯ ಜೀವನ, ಇನ್ನು ಮೂರನೇಯ ಮಗನಾದ ಶಿವಕುಮಾರನಿಗೂ ಮದುವೆಯಾಗಿ ಎರಡು ಮಕ್ಕಳೊಂದಿಗೆ ಬೆಂಗಳೂರಿನಲ್ಲಿ ಸುಖಿಯಾಗಿದ್ದಾರೆ ನಂತರ ರವಿ ಐದನೇದವನಾದ ಸುರೇಶನು 1996 ರಲ್ಲಿ ಅನಾರೋಗ್ಯದಿಂದ ನಿಧನರಾದರು. ಕೊನೆಯ ಮಗನಾದ ಉಮೇಶರವರಿಗೆ ಚಲನಚಿತ್ರೋದ್ಯಮದಲ್ಲಿ ಬಹಳಷ್ಟು ಆಸಕ್ತಿ 'ರಂಜಿತಾ' ಚಲನಚಿತ್ರದಲ್ಲಿ ಹಾಗೂ

ಇನ್ನೂ ಅನೇಕ ಚಿತ್ರಗಳಲ್ಲಿ ಅಭಿನಯಿಸಿ ಚಲನಚಿತ್ರೋದ್ಯಮದಲ್ಲಿ ಒಂದು ಹೊಸ ಆಯಾಮ ಕಂಡು ಕೊಂಡು ಮದುವೆಯಾಗಿ ಮಕ್ಕಳೊಂದಿಗೆ ಸುಖಮಯ ಜೀವನ ಸಾಗಿಸುತ್ತಿದ್ದಾರೆ.

ಇನ್ನೂ ಎರಡನೇ ಪತ್ನಿಯಾದ ಡಾ: ಲಲಿತಾರವರಿಗೆ ಮಧು ಮತ್ತು ಮುಕ್ತ ಅಂತಾ ಇಬ್ಬರು ಹೆಣ್ಣು ಮಕ್ಕಳು, ಡಾ:ಲಲಿತಾರವರು ರಸ್ತೆ ಅಪಘಾತದಲ್ಲಿ 1992 ರಲ್ಲಿ ನಿಧನರಾದರು. ತಾಯಿ ಸತ್ತ ನಂತರ ಪಾರ್ವತಮ್ಮನವರು ಮಧು ಮತ್ತು ಮುಕ್ತಾ ಇವರಿಬ್ಬರನ್ನು ತಮ್ಮ ಸ್ವಂತ ಮಕ್ಕಳಂತೆ ಸಾಕಿ ಬೆಳಸಿದರು. ಇಬ್ಬರನ್ನು ಬೆಂಗಳೂರಿನಲ್ಲಿಯೇ ಸುಸಂಸ್ಕೃತ ಮನೆತನದ ಯೋಗ್ಯ ವರನನ್ನು ಹುಡುಕಿ ಮದುವೆ ಮಾಡಿಸಿ ಸುಖ ದಾಂಪತ್ಯಕ್ಕೆ ದಾರಿ ಮಾಡಿ ಕೊಟ್ಟರು. ಹೀಗೆ ಬಣಕಾರರದು ದೊಡ್ಡ ಸಂಸಾರವಾದರೂ ಸುಖ ಸಂಸಾರ. ಮಕ್ಕಳು ಮೊಮ್ಮಕ್ಕಳು ಎಂದರೆ ಬಣಕಾರರಿಗೆ ಬಹಳಷ್ಟು ಪ್ರೀತಿ, ಅಷ್ಟೆ ಮಕ್ಕಳಿಗೆ ತಮ್ಮ ತಂದೆಯ ಸಾಧನೆಯ ಬಗ್ಗೆ ಅಪಾರವಾದ ಪ್ರೀತಿ ಅಲ್ಲದೆ ಬಣಕಾರರು ಅಪಾರವಾದ ಕೀರ್ತಿಗಳಿಸಿದ ಬಗ್ಗೆ ಮಕ್ಕಳಿಗೆ ಎಲ್ಲಿಲ್ಲದ ಗೌರವ. ತಂದೆಯ ಗೌರವ, ಮನ್ನಣೆಗೆ ಧಕ್ಕೆ ಬರದಹಾಗೆ ಮಕ್ಕಳು ನಡೆದು ಕೊಂಡರು. ತಮ್ಮ ತಂದೆ ತಾಯಿ ನಡೆದು ಕೊಂಡು ಬಂದ ಹಾದಿಯಲ್ಲಿ ಸಾಗಿ ಬಂದು ಎಲ್ಲ ಆದರ್ಶ ಗುಣಗಳನ್ನು ಅಳವಡಿಸಿಕೊಂಡು ತಂದೆ ಬಣಕಾರರು ಹಾಕಿ ಕೊಟ್ಟ ಸನ್ಮಾರ್ಗದಲ್ಲಿ ನಡೆದು ತಂದೆ ತಾಯಿಯ ಕೀರ್ತಿಯನ್ನು ಬೆಳಗಿಸಿದ್ದಾರೆ.

## ಬಣಕಾರರೊಂದು ಗ್ರಂಥಾಲಯ :

ಮಹದೇವ ಬಣಕಾರರ ತಲೆ ಒಂದು ದೊಡ್ಡ ಗ್ರಂಥಾಲಯವಿದ್ದಂತೆ. ಆ ಗ್ರಂಥಾಲಯದಲ್ಲಿನ ಜ್ಞಾನ ಭಂಡಾರ ಅಗಾಧವಾದದ್ದು. ಅದೊಂದು ವಿಚಾರಗಳ ಉಗ್ರಾಣವೆಂದು ಕರೆದರೆ ತಪ್ಪಾಗಲಾರದು. ಅಷ್ಟೊಂದು ಜ್ಞಾಪಕ ಶಕ್ತಿ ಅಡಕವಾಗಿದೆ ಬಣಕಾರರು ಯಾವುದನ್ನು ಟಿಪ್ಪಣಿ ಮಾಡದೇ ಸುಲಲೀತವಾಗಿ ಬರೆಯಲು ಪ್ರಾರಂಭಿಸುವ ಬರವಣಿಗೆ ಅಷ್ಟೇ ಶುದ್ಧವಾದದ್ದು.

ಕೇವಲ ಕವಿಯಾಗದೆ, ವಚನಕಾರರಾಗದೆ, ಸಾಹಿತ್ಯದ ದಿಗ್ಗಜರಷ್ಟೆ ಅನಿಸಿಕೊಳ್ಳದೇ ಬಣಕಾರರು ಪ್ರಸಿದ್ಧ ಭಾಷಣಕಾರರು ಹೌದು. ನಿರ್ಗಳ ಸುಲಲಿತ ಭಾಷಣಕಾರರಾದ ಬಣಕಾರರು ಮಾತನಾಡುತ್ತಿದ್ದಾರೆಂದರೆ, ಅವರ ಭಾಷಣ ಕೇಳಲು ಬರುವ ಜನರಿಗೆ ಕೊರತೆಯೇ ಇರಲಿಲ್ಲ. ಅವರು ಯಾವುದೇ ವಿಷಯದ ಮೇಲೆ ಭಾಷಣಕ್ಕೆ ನಿಂತರೆ ಅಂಕಿ ಅಂಶಗಳ ಸಮೇತ ಸ್ಪಷ್ಟವಾಗಿ ಜನರ ಮನ

ಮುಟ್ಟುವಂತೆ ನೇರವಾಗಿ ಹೇಳುವ ಚಾತುರ್ಯತೆ ಅವರಲ್ಲಿತ್ತು. ಭಾಷಣದ ಮಧ್ಯದಲ್ಲಿ ಹಾಸ್ಯ ಚಟಾಕಿಗಳಿಗೆ ಕೊರತೆಯೇ ಇರುತ್ತಿರಲಿಲ್ಲ. ಅವರ ಅಗಾಧವಾದ ಜ್ಞಾಪನ ಶಕ್ತಿ, ಮಿತಿಮೀರಿದ ಭಾಷಾ ಜ್ಞಾನವೇ ಕಾರಣವಾಗಿತ್ತು.

ಅವರ ಭಾಷಣ ಕಾರ್ಯಕ್ರಮ ಎಲ್ಲಿಯೇ ಇರಲಿ ಜನ ಹುಡುಕಿಕೊಂಡು ಹೋಗಿ ಭಾಷಣ ಕೇಳಿ ಆನಂದ ಪಡುತ್ತಿದ್ದರು. ಅವರ ಗಟ್ಟಿತನದ ಮಾತುಗಳಲ್ಲಿ ಹಾಸ್ಯ ಭರಿತ ಮಾತುಗಳೇ ಹೆಚ್ಚು. ಇದರಿಂದ ಜನ ಬಣಕಾರರ ಮಾತಿಗೆ ಮರುಳಾಗುತಿದ್ದರು. ಎಷ್ಟೇ ದುಃಖ ದುಮ್ಮಾನಗಳನ್ನು ಹೊತ್ತು ಬಂದ ಸಭೀಕರನ್ನು ನಗಿಸದೆ ಬಿಡುತ್ತಿರಲಿಲ್ಲ. ಅವರೊಡನೆ ಸಂಭಾಷಣೆಗಿಳಿದರೆ ಎನೋ ಒಂದು ಹೊಸ ಗ್ರಂಥವನ್ನು ಓದಿದ ಅನುಭವವಾಗುತ್ತಿತ್ತು. ಬಣಕಾರರ ಮಾತಿನ ಹರಟೆಯೇ ಅಂತಹದ್ದು, ಪ್ರತಿ ಮಾತಿನಲ್ಲಿ ಅರ್ಥವಿರುತ್ತಿತ್ತು. ಅವರೊಂದಿಗೆ ಎಷ್ಟೊತ್ತು ಮಾತನಾಡುತ್ತಾ ಕುಳಿತರೆ ಸಮಯ ಹೊದದ್ದೇ ಗೊತ್ತಾಗುತ್ತಿರಲಿಲ್ಲ.

ಸಾಹಿತ್ಯವನ್ನು ನೀರು ಕುಡಿದಂತೆ ಕರಗತಮಾಡಿಕೊಂಡಿದ್ದ ಬಣಕಾರರು ಸ್ವಚ್ಚ ಹೃದಯವಂತರು, ಎಲ್ಲಕ್ಕಿಂತ ಇವರ ಮಾನವೀಯ ಗುಣ ದೊಡ್ಡದು. ಅಂತೆಯೇ ಮಹದೇವ ಬಣಕಾರರು ಎಲ್ಲರಿಗೂ ಸಕ್ಕರೆಯ ಅಕ್ಕರೆಯಂತಿದ್ದರು.ಸ್ವಲ್ಪ ವಿಷಯ ಸಿಕ್ಕರೆ ಸಾಕು ಪೂರ್ವ ಸಿದ್ಧತೆಯಿಲ್ಲದೆಯೇ ನಿರ್ಗಳವಾಗಿ ಮಾತನಾಡ ಬಲ್ಲವರಾಗಿದ್ದರು.

ಅಂತೆಯೇ ಕುಮಾರವ್ಯಾಸನು ಹೇಳಿದ ಹಾಗೆ 'ಪದವಿಟ್ಟಳು ಪದೊಂದಗ್ಗಳಿಗೆ' ಎಂಬ ಮಾತು ಅಕ್ಷರಶ; ಬಣಕಾರರಿಗೆ ಸಲ್ಲುತ್ತದೆ. ಅದಕ್ಕೆಂದೇ ಬಣಕಾರರಲ್ಲಿನ ಅಘಾದವಾದ ಸಾಹಿತ್ಯವನ್ನು ಕಂಡು  ನಾಡೋಜ ಡಾ.ಪಾಟೀಲ ಪುಟ್ಟಪ್ಪ ನವರು ಒಂದು ಕಡೆ ಹೀಗೆ ಹೇಳಿದ್ದು ನೆನಪಿಗೆ ಬರುತ್ತದೆ. ಹೈಸ್ಕೂಲ್ ದಾಟಲಿಕ್ಕಾಗದ ಬಣಕಾರರು ಕಾಲೇಜು ಹಾಗೂ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳು ಓದುವಂತಹ ಪುಸ್ತಕಗಳನ್ನು ಬರೆದಿದ್ದಾರೆ. ಬರೆದವರು ಬರೆಯುವವರು ಎಷ್ಟೋ ಜನ ಇದ್ದಾರೆ. ತಾವು ಬರೆದ ಮಾತು ಅವರ ಬಾಯಲ್ಲಿಯೇ ಇರುವುದಿಲ್ಲ. ಆದರೆ ಬಣಕಾರರು ಇದಕ್ಕೆ ಭಿನ್ನವಾಗಿದ್ದಾರೆ ಎಂದು ಪಾಪು ಹೇಳಿದ್ದಾರೆ.

ಬಣಕಾರರು ತಮ್ಮ ಬುದ್ಧಿ ಚಾತುರ್ಯತೆಯಿಂದ ವಿಶ್ವ ವಿದ್ಯಾಲಯಗಳ ಪದವೀಧರರು ಬೆರಗುಗೊಳ್ಳುವಂತಹ ಸಾಧನೆ ಮಾಡಿದ್ದಾರೆ. ನಮ್ಮ ನಾಡಿನ ಅನೇಕ ಸಾಹಿತಿಗಳು ಕಾಲೇಜು ಕಟ್ಟೆಯನ್ನೇರಿಲ್ಲ ಕೇವಲ ಒಬ್ಬ ವ್ಯಕ್ತಿ ಪಡೆದ ಪದವಿಗಳ ಆಧಾರದಿಂದ ಆತನ ಪ್ರತಿಭೆಯನ್ನು ಅಳೆಯಲು ಕಷ್ಟಸಾಧ್ಯ ಎಂಬುದಕ್ಕೆ ಬಣಕಾರರೇ ನಿದರ್ಶನ. ದನಕರುಗಳ ಹಿಂದೆ ಸುತ್ತಿ ಸುಳಿದು ಜನಪದ ಸತ್ವವನ್ನು

ಮೈಗೂಡಿಸಿಕೊಂಡ ಬಣಕಾರರ ಸಂಗಡವಿದ್ದರೆ, ಒಂದು ಗ್ರಂಥಾಲಯದಲ್ಲಿದ್ದ ಅನುಭವ ಆದಂತೆ ಆಗುತ್ತದೆ ಎಂದು ಬಣಕಾರರ ವಿದ್ವತ್ವವನ್ನು ಸಾಣೇಹಳ್ಳಿ ತರಳುಬಾಳು ಶಾಖಾ ಮಠದ ಪೀಠಾಧ್ಯಕ್ಷರಾದ ಶ್ರೀಪಂಡಿತಾರಾಧ್ಯ ಶಿವಾಚಾರ್ಯ ಶ್ರೀಗಳು ಮನಸಾರೆ ಕೊಂಡಾಡಿದ್ದಾರೆ.

ತರಳುಬಾಳು ಶ್ರೀಗಳಲ್ಲಿ ಬಣಕಾರರು ಅಪಾರವಾದ ಭಕ್ತಿಯ ಭಾವನೆ ಹೊಂದಿದ್ದರು. ಶ್ರೀಗಳ ಭಕ್ತಿಯ ಭಾವಪೂರ್ಣವಾಗಿ 1108 ವಚನಗಳುಳ್ಳ ಬೃಹತ್ ಗ್ರಂಥವನ್ನು ರಚಿಸಿ, 1979 ರಲ್ಲಿ ಜರುಗಿದ ಡಾ:ಶಿವಮೂರ್ತಿಶಿವಾಚಾರ್ಯ ಶ್ರೀಗಳ ಪಟ್ಟಾಭೀಷೇಕದ ಸಂದರ್ಭದಲ್ಲಿ ಈ ಗ್ರಂಥವನ್ನು ಬಿಡುಗಡೆಗೊಳಿಸಲಾಯಿತು.

ಬಣಕಾರರ ಹುಟ್ಟು ಪ್ರತಿಭೆಯೊಂದಿಗೆ ಗುರುಕೃಪೆಯೂ ದೊರಕಿದಂತಾಗಿ ಆಗಾಧ ಸಾಹಿತ್ಯ ರಚನೆಗೆ ಪ್ರೇರಣೆಯಾಯಿತು. ಈ ಮೂಲಕ ಸಮಕಾಲೀನ ಪ್ರಜ್ಞೆಗೆ ವಚನ ಪ್ರಕಾರದ ಮೂಲಕ ಸೊಗಸುಗಾರಿಕೆಯನ್ನು ಬಣಕಾರರು ಸಾಧಿಸಿತೋರಿಸಿದ್ದಾರೆ. ಈ ಸಂದರ್ಭದಲ್ಲಿ ತರಳುಬಾಳು ಜಗದ್ಗುರು ಶಿವಕುಮಾರ ಶಿವಾಚಾರ್ಯಶ್ರೀಗಳು ಬಣಕಾರರನ್ನುದ್ದೇಶಿಸಿ, ನಮ್ಮ ದೇಶದಲ್ಲಿ ರಾಜಕಾರಣಿಗಳಿಗೆ ಕೊರತೆಯಿಲ್ಲ, ಸ್ವಾಮಿಗಳಿಗೆ, ಸಂತರಿಗೆ, ಗುರುಗಳಿಗೆ ಅಭಾವವಿಲ್ಲ. ಅಭಾವವಿರುವುದು ಉತ್ತಮ ಸಾಹಿತಿಗೆ ಎಂದು ಹೇಳಿದ್ದಾರೆ. ವಚನ ಸಾಹಿತ್ಯಕ್ಕೆ ಶಿವಕುಮಾರ ಸ್ವಾಮಿಗಳ ಪ್ರೇರಣೆ ದೊರಕಿದ ಮೇಲೆ ವಚನಗಳನ್ನು ಅರ್ಥಪೂರ್ಣವಾಗಿ ಬರೆದು ಸೈಎನಿಸಿಕೊಂಡರು.

ಇನ್ನೊಂದು ಪ್ರಮುಖ ಅಂಶವೆಂದರೆ, ಬಣಕಾರರು ತಮ್ಮ ಯಾವುದೇ ವಚನಗಳಲ್ಲಿ ಸತ್ವವನ್ನು ಮುಚ್ಚಿಟ್ಟಿಲ್ಲವೆಂಬುದು ಇಲ್ಲಿ ಕಟುಸತ್ಯವಾಗಿದೆ. ಧೈರ್ಯವಾಗಿ, ನಿಷ್ಠುರವಾಗಿ, ಸಮಾಜ ವಿಡಂಬನೆಯನ್ನು ವಚನಗಳಲ್ಲಿ ಎತ್ತಿತೋರಿಸಿದ್ದಾರೆ. ವಚನ ಸಾಹಿತ್ಯದ ಮೂಲಕ ಡಾಂಭಿಕ, ಅಸ್ಪೃಶ್ಯತೆ, ಅಜ್ಞಾನ, ಅಂಧಶ್ರದ್ಧೆಗಳನ್ನು ವಚನ ಸಾಹಿತ್ಯದ ಮೂಲಕ ಖಾರವಾಗಿ ಖಂಡಿಸಿದ್ದಾರೆ.

ಎಂದೂ ಯಾರನ್ನೂ ಜಾತಿಯಿಂದ, ಹಣದಿಂದ ಪೂರ್ವಾಗ್ರಹದಿಂದ ಬಣಕಾರರು ನೊಡಿದವರಲ್ಲ. ಈ ಜಗತ್ತಿನಲ್ಲಿ ಗಂಡು–ಹೆಣ್ಣು ಎಂಬ ಎರಡೇ ಜಾತಿಗಳಿವೆ, ದಲಿತ ಕೀಳಲ್ಲ ಬ್ರಾಹ್ಮಣ ಮೇಲಲ್ಲ ಎಲ್ಲರೂ ಒಂದೇ ಎನ್ನುವ ಅವರು, ನುಡಿದಂತೆ ನಡೆದವರು ತಮ್ಮ ಮಕ್ಕಳ ಮದುವೆ ವಿಚಾರ ಬಂದಾಗ ಜಾತಿಗೆ ಅಂಟಿಕೊಂಡವರಲ್ಲ. ಯಾವ ಜಾತಿಯಾದರೇನು ಗುಣಸನ್ನಡತೆಯಿದ್ದರೆ ಸಾಕುಎನ್ನುವುದು ಅವರ ಸ್ಪಷ್ಟ ನಿಲುವಾಗಿತ್ತು. ಇದರಂತೆ ಬಣಕಾರರು ನುಡಿದಂತೆ ನಡೆದು ಕೊಂಡು ಬಂದರು.

ಸಾಹಿತ್ಯದ ಬಗ್ಗೆ ಯಾರು ಏನೇ ಕೇಳಿದರೂ ಅರ್ಥಗರ್ಭಿತವಾಗಿ ಅವರಿಗೆ ಮನದಟ್ಟು ಆಗುವ ಹಾಗೆ ಹೇಳುತಿದ್ದರು. ಯಾವುದಕ್ಕೂ ಬೇಸರ ಮಾಡಿಕೊಳ್ಳುವ ಜಾಯಮಾನದವರಲ್ಲ. ಯಾರೇ ತಪ್ಪುಮಾಡಿದರೂ ಹಿಂದು ಮುಂದು ನೋಡದೆ ನೇರವಾಗಿ ಬೈಯುವುದು ಅವರ ಸ್ವಭಾವ. ಯಾರಿಗೂ ಕೇಡ ಬಯಸದೇ ಒಳ್ಳೆಯದನ್ನೇ ಮಾಡುವ ಅವರ ಗುಣಕ್ಕೆ ಮಾರುಹೋದವರೆ ಇಲ್ಲ. ಬಡವ ಶ್ರೀಮಂತ ಎನ್ನದೇ ತಪ್ಪುಮಾಡಿದವರಿಗೆ ನೇರ ನಿಷ್ಠುರ ಮಾತುಗಳಿಂದ ಬೈದು ಬುದ್ಧಿ ಹೇಳಿದ ಮೇಲೆ ಬಣಕಾರರು, ಅಷ್ಟೆ ಪ್ರೀತಿಯಿಂದ ಅವರ ಮನಸನ್ನು ಕ್ಷಣ ಹೊತ್ತಿನಲ್ಲಿ ಗೆದ್ದುಬಿಡುತಿದ್ದರು. ವೈರಿಗಳಿಗೂ ಕೆಟ್ಟದನ್ನು ಬಯಸಿದವರಲ್ಲ. ಬಣಕಾರರು ಅವರೊಬ್ಬ ಅಜಾತ ಶತ್ರುವಾಗಿದ್ದರು. ಅಚಲವಾದ ಮನಸ್ಸು, ಸ್ಥಿರವಾದ ನಂಬಿಕೆ, ಶ್ರದ್ಧೆಯಿಂದ ಮಾಡಿದ ಕಾಯಕವೆಲ್ಲ ಬದುಕು ಹಸನವಾದಂತೆ ಎಂಬ ಅಪಾರವಾದ ನಂಬಿಕೆಯನ್ನು ಬಣಕಾರರು ಹೊಂದಿದ್ದರು.

ಅವರು ರಚಿಸಿದ ವಚನಗಳು ಎಷ್ಟೋ ಕ್ಯಾಸೆಟ್‌ಗಳಾಗಿವೆ. ಅವರ ಸಹಸ್ರಾರು ಕ್ಯಾಸೆಟ್‌ಗಳು ಹೆಚ್ಚಿನ ಧರದಲ್ಲಿ ಮಾರಾಟವಾಗಿ ಜನಪ್ರೀಯತೆಗಳಿಸಿವೆ. ಕನ್ನಡದ ಪೂಜಾರಿ ಎಂದೇ ಹೆಸರಾದ ಹೀರೆಮಗಳೂರ ಕಣ್ಣನ್‌ರವರು ಪೂಜೆಮಾಡುವಾಗ ಮಹದೇವ ಬಣಕಾರರ ವಚನಗಳನ್ನು ಸ್ತುತಿಸುತಿದ್ದರಂತೆ. ತರಳುಬಾಳು ಶ್ರೀಗಳಲ್ಲಿ ಅನನ್ಯತಾ ಭಕ್ತಿಯ ಭಾವನೆ ಹೊಂದಿದ್ದ ಬಣಕಾರರು " ಎನ್ನ ವರಗುರು ಶಿವಕುಮಾರ ಪ್ರಭುವೆ" ಅಂಕಿತವನಿಟ್ಟುಕೊಂಡು ವಚನಗಳನ್ನು ರಚಿಸುತಿದ್ದರು. ಹೀಗೆ ರಚಿಸಿದ ವಚನಗಳು ದಾಖಲೆ ಸಂಖ್ಯೆಯಲ್ಲಿ ಮಾರಾಟವಾಗಿವೆ. ಇಂತಹ ಸಾಧನೆಯ ಸಿದ್ಧಿ ಬಣಕಾರರದ್ದಾಗಿದೆ.

## ಬಣಕಾರರ ನಾಡು-ನುಡಿ ಸೇವೆ :

ಮಹದೇವ ಬಣಕಾರರು ಕನ್ನಡ ನಾಡು-ನುಡಿಗೆ ಸಲ್ಲಿಸಿದ ಸೇವೆ ಅನುಪಮವಾದದ್ದು. ಹಾಗೂ ಅಭಿಮಾನ ಅಪೂರ್ವವಾದರೂ ಈ ಅಭಿಮಾನ ದ್ಯೋತಕವಾಗಿ "ಆಂಗ್ಲರ ಆಡಳಿತದಲ್ಲಿ ಕನ್ನಡ" ಎಂಬ ಸಂಶೋದನಾತ್ಮಕ ಶ್ರೇಷ್ಠ ಕೃತಿ ಹೊರಬರಲು ಕಾರಣವಾಯಿತು. ಈ ಅಪೂರ್ವ ಆಕಾರ ಗ್ರಂಥ ರಾಷ್ಟ್ರಮಟ್ಟದ ಕೀರ್ತಿ, ಗೌರವವನ್ನು ಸಂಪಾದಿಸಿದೆ. ಬ್ರಿಟಿಷ್‌ರ ಆಡಳಿತದಲ್ಲಿ ಕನ್ನಡ ಭಾಷಾಬಳಕೆ ಎಷ್ಟು ಚೆನ್ನಾಗಿತ್ತು ಎಂಬುದನ್ನು ಬಹಳಷ್ಟು ಕಷ್ಟಪಟ್ಟು ಸಂಶೋಧಿಸಿ, ಕನ್ನಡಿಗರ ಸ್ವಾಭಿಮಾನದ ಸಂಕೇತವಾಗಿ 1986 ರಲ್ಲಿ ಈ ಗ್ರಂಥವನ್ನು ರಚಿಸಿ ಬಣಕಾರರು ಲೋಕಸಮರ್ಪಣೆ ಮಾಡಿದಾಗ ರಾಷ್ಟ್ರವ್ಯಾಪಿ ಕೀರ್ತಿ ಈ ಗ್ರಂಥಕ್ಕೆ ಸಿಕ್ಕಿತು. ಈ

ಗ್ರಂಥವೇ ಹತ್ತೆಂಟು ಪಿಎಚ್‌ಡಿ ಗಳಿಗಾಗುವಷ್ಟು ವಸ್ತುಹೊಂದಿದೆ ಎಂದು ಮಹಾನ್ ಸಾಹಿತಿಗಳು ಅಭಿಪ್ರಾಯ ಪಟ್ಟಿದ್ದಾರೆ. ಅಷ್ಟೆ ಅಲ್ಲದೆ ಈ ಕೃತಿಗೆ ಅನೇಕ ಬುದ್ಧಿ ಜೀವಿಗಳು ಶುಭಹಾರೈಸಿದ್ದಾರೆ.

ಬಣಕಾರರು ನಾಡು ನುಡಿಗಾಗಿ ತಮ್ಮ ಪ್ರಾಣವನ್ನೇ ಮುಡಿಪಾಗಿಟ್ಟಿದ್ದರು. ಎಂದೂ ಪ್ರಚಾರಕ್ಕಾಗಿ ಹಂಬಲಿಸಲಿಲ್ಲ. ಆರೋಗ್ಯ, ಮನೆ ಮಠ ಎನ್ನದೇ, ದೇಶವನ್ನೇ ಸುತ್ತಿ ದಾಖಲೆಗಳನ್ನು ಸಂಗ್ರಹಿಸಿ, ಕನ್ನಡ ನಾಡಿನ ಹಿತದೃಷ್ಟಿಯಿಂದ ಜೀವ ಸವೆಸಿದ್ದಾರೆ.

ಇತ್ತೀಚಿನ ದಿನಗಳಲ್ಲಿ ಕನ್ನಡದ ಬಗೆಗಿನ ಹೋರಾಟ ನೆಪಮಾತ್ರಕ್ಕೆ ಮತ್ತು ಪ್ರತಿಷ್ಠೆತೆಗೆ ಹೆಸರಾಗಿದೆ. ಸಿಕ್ಕ ಕಡೆಗೆ ಚಂದಾ ವಸೂಲಿಮಾಡಿ ಕನ್ನಡದ ಬಗ್ಗೆ ಪ್ರಚಾರ ತೆಗೆದುಕೊಳ್ಳುವವರು ಇಂದಿನ ದಿನಗಳಲ್ಲಿ ತುಂಬಿತುಳುಕುತ್ತಿದ್ದಾರೆ. ಆದರೆ ಮಹದೇವ ಬಣಕಾರರು ಇದಕ್ಕೆ ಅಪವಾದವಾಗಿದ್ದರು.

ಬಣಕಾರರು ತಮ್ಮ ಪ್ರಾಣಕ್ಕಿಂತ ಹೆಚ್ಚಾಗಿ ನಾಡು–ನುಡಿ, ಗಡಿ, ಜಲಗಳನ್ನು ಹೆಚ್ಚು ಪ್ರೀತಿಸಿ, ಇವುಗಳಿಗೆ ಧಕ್ಕೆ ಬಂದಾಗ ಎದೆಗುಂದದೆ ನಾಡಿನಾದ್ಯಂತ ಅನೇಕ ಹೋರಾಟಗಳನ್ನು ಮಾಡಿದ್ದಾರೆ. ನಾಡಿನ ಹಿತ ದೃಷ್ಟಿಯಿಂದ "ಆಂಗ್ಲರ ಆಡಳಿತದಲ್ಲಿ ಕನ್ನಡ" ಗ್ರಂಥವನ್ನು ಬಣಕಾರರು ರಚಿಸಿದಾಗ, ಈ ಕಾರ್ಯವನ್ನು ಮೆಚ್ಚಿ ಮುಕ್ತಕಂಠದಿಂದ ಪ್ರಶಂಶಿಸಿದವರು ಈ ರಾಷ್ಟ್ರಕಂಡ ಅಪರೂಪದ ಮುತ್ಸದ್ದಿ ರಾಜಕಾರಣಿ ರಾಮಕೃಷ್ಣ ಹೆಗಡೆಯವರು. ಇವರು ಮುಖ್ಯ ಮಂತ್ರಿಗಳಾಗಿದ್ದ ಸಂದರ್ಭದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂದ ಕನ್ನಡ ಆಡಳಿತ ಭಾಷಾ ಅನುಷ್ಠಾನ ವರ್ಷದ ಅಂಗವಾಗಿ ಬಣಕಾರರ "ಆಂಗ್ಲರ ಆಡಳಿತದಲ್ಲಿ ಕನ್ನಡ" ಗ್ರಂಥವನ್ನು ಪ್ರಕಟಿಸಲಾಯಿತು. ಅಷ್ಟೆ ಅಲ್ಲದೆ ವರ್ಷದ ಶ್ರೇಷ್ಠ ಕೃತಿ ಎಂದು ಪರಿಗಣಿಸಿ ರಾಜ್ಯಪ್ರಶಸ್ತಿ ನೀಡಿ ಬಣಕಾರರನ್ನು ಗೌರವಿಸಲಾಯಿತು. ಈ ಗ್ರಂಥ ರಚನೆಯಿಂದ ಕನ್ನಡ ಆಡಳಿತ ಭಾಷೆಯಾಗಿ ಜಾರಿಗೊಳಿಸಲು ಪ್ರತಿಯೊಬ್ಬ ಕನ್ನಡ ಅಧಿಕಾರಿ ನೌಕರರಿಗೆ ಈ ಗ್ರಂಥ ಪ್ರೇರಣೆಯಾಗಬಲ್ಲದು.

ಹೀಗೆ ನೈಜ ಕನ್ನಡ ಹೋರಾಟಗಾರರಾದ ಬಣಕಾರರಿಗೆ ಕನ್ನಡವೇ ಉಸಿರು ಕನ್ನಡವೇ ಜೀವ, ಕನ್ನಡ ನಾಡು–ನುಡಿ ಅವರಿಗೆ ಪ್ರಾಣವಾಗಿತು.

## ಆಂಗ್ಲರ ಆಡಳಿತದಲ್ಲಿ ಕನ್ನಡ :

ಗ್ರಂಥ ರಚನೆಗೆ ಪ್ರೇರಣೆ: ಮಹದೇವ ಬಣಕಾರರು ಕೇವಲ 15 ವರ್ಷದ ಬಾಲಕನಿರುವಾಗಲೇ ಚಳುವಳಿಯಲ್ಲಿ ಭಾಗವಹಿಸಿ ಜೈಲುವಾಸ ಅನುಭವಿಸಿದರು,

ಇದನ್ನು ಗಮನಿಸಿದಾಗ ಬಣಕಾರರಲ್ಲಿದ್ದ ಹೋರಾಟದ ಮನೋಭಾವನೆಯನ್ನು ಎತ್ತಿ ತೋರಿಸುತ್ತದೆ.

1967 ರಲ್ಲಿ ಅಖಂಡ ಧಾರವಾಡ ಜಿಲ್ಲೆಯ ಬ್ಯಾಡಗಿ ಕ್ಷೇತ್ರದಿಂದ ವಿಧಾನ ಸಭೆಗೆ ಆಯ್ಕೆಗೊಂಡಾಗ, ವಿಧಾನ ಸಭೆಯ ಕಾರ್ಯಕಲಾಪಗಳಲ್ಲಿ ಭಾಗವಹಿಸಿದಾಗ ಬಣಕಾರರಿಗೆ ವಿಚಿತ್ರ ಅನುಭವಗಳಾದವು.ಇಂಗ್ಲೀಷನಲ್ಲಿ ನಡೆಯುತ್ತಿದ್ದ ಕಾರ್ಯಕಲಾಪಗಳು ಬಣಕಾರರನ್ನು ಅಚ್ಚರಿ ಮೂಡಿಸಿದವು.

ಬೆಂಗಳೂರಿನಲ್ಲಿಯೇ ತಮಿಳು, ತೆಲಗು, ಮಲಿಯಾಳಂ ಭಾಷೆಗಳು ಹೆಚ್ಚು ಬಳಕೆಯಲ್ಲಿದ್ದವು. ಅಲ್ಲಲ್ಲಿ ಕನ್ನಡ ಭಾಷೆ ಬಳಕೆಯಲ್ಲಿದ್ದರೂ ಸಹ ಆ ಭಾಷೆ ಭಿನ್ನವಾಗಿತ್ತು. ಅಚ್ಚರಿಯಂದರೆ ಕನ್ನಡ ಭಾಷೆಯ ಪದಗಣ ಅರ್ಥವೇ ಆಗುತ್ತಿರಲಿಲ್ಲ. ರಾಜಧಾನಿ ಬೆಂಗಳೂರಿನಲ್ಲಿಯೇ ಕನ್ನಡ ಭಾಷೆಯು ಹೀನಾಯ ಪರಿಸ್ಥಿತಿ ತಲುಪಿದರೆ ಮುಂದೆ ರಾಜ್ಯಾಡಳಿತದ ಗತಿ ಎನು? ಎಂಬ ಚಿಂತೆ ಬಣಕಾರರನ್ನು ಕಾಡತೊಡಗಿತು.

ರಾಜ್ಯ ಮಟ್ಟದಲ್ಲಿ ನಡೆಯುವ ಸರ್ಕಾರದ ವ್ಯವಹಾರಗಳು ಕನ್ನಡ ಭಾಷೆ ಇಲ್ಲದನೇ ಹದಗೆಟ್ಟು ಹೋಗುತ್ತಿರುವುದನ್ನು ಬಣಕಾರರನನ್ನು ಕೆರಳಿಸಿತು. ಸರಕಾರದ ವ್ಯವಹಾರದಲ್ಲಿ ಕನ್ನಡ ಪದದ ಪಕ್ವವಾದ ಅರ್ಥ ಒಬ್ಬ ಶಾಸಕನಾದ ನನಗೆ ತಿಳಿಯದಿರುವಾಗ ಜನಸಾಮಾನ್ಯರ ಗತಿಯೇನು? ಎಂಬ ಚಿಂತೆ ಇಮ್ಮಡಿಯಾಯಿತು. ರಾಜ್ಯದ ಕನ್ನಡಿರಿಗೆ ಮತ್ತು ರಾಜ್ಯಾಡಳಿತಕ್ಕೆ ಭಾಷೆಯ ಮುಖಾಂತರವಾಗಿ ಸಂಬಂಧವೇ ಇಲ್ಲದಿರುವಾಗ ಕನ್ನಡಿಗರಲ್ಲಿನ ಹೀನಾಯ ಪರಿಸ್ಥಿಯನ್ನು ಸುಧಾರಿಸಬೇಕೆಂಬ ಅಚಲವಾದ ನಿರ್ಧಾರವನ್ನು ಬಣಕಾರರು ತಾಳಿದರು.

ಆಡಳಿತದಲ್ಲಿ ಕನ್ನಡವನ್ನು ಹೇರಬೇಕು ಕರ್ನಟಕದಲ್ಲಿ ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಮಾಡಬೇಕೆಂದು ಪಣತೊಟ್ಟರು. ಕನ್ನಡ ಭಾಷೆಯನ್ನು ಆಡಳಿತ ಭಾಷೆಯನ್ನಾಗಿ ಮಾಡಬೇಕೆಂದು ಯಾರಾದರೂ ಪ್ರಯತ್ನಪಟ್ಟಿದ್ದಾರೆ ಎಂಬ ಹುಡುಕಾಟವನ್ನು ಬಣಕಾರರು ಪ್ರಾರಂಭಿಸಿದರು. ಆಹುಡುಕಾಟದಲ್ಲಿ ಟಿಪ್ಪೂಸುಲ್ತಾನ್, ಲಾರ್ಡ್ ಕಾರನ್‌ವಾಲಿಸ್, ಕಿತ್ತೂರ ಚನ್ನಮ್ಮ, ಥ್ಯಾಕರೆ ಸಾಹೇಬ್ ನಂತವರು ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಮಾಡುವಲ್ಲಿ ಪ್ರಯತ್ನಿಸಿದ್ದಾರೆಂಬ ಅನೇಕ ಸಾಕ್ಷಾಧಾರಗಳು ಬಣಕಾರರಿಗೆ ಲಭಿಸಿದವು. ಈ ನಿಟ್ಟಿನಲ್ಲಿ ಬಣಕಾರರು ನಾಡಿನೆಲ್ಲಡೆ ಸಂಚರಿಸಿ ಜನರನ್ನು ಸಂಪರ್ಕಿಸಿ ಹಿಂದಿನ ಆಡಳಿತದ ಬಗ್ಗೆ ಅವರನ್ನು ಕೇಳತೊಡಗಿದರು. ಹಿಂದಿನ ಆಡಳಿತದ ಬಗ್ಗೆ ಸಾಕಷ್ಟು ಮಹತ್ತರವಾದ ಅಭಿಪ್ರಾಯಗಳು ಮೂಡಿಬಂದವು. ಆ ಅಭಿಪ್ರಾಯಗಳು ಬಣಕಾರರ ಅಧ್ಯಯನಕ್ಕೆ ಅಡಿಪಾಯವಾದವು ಎಂದರೆ ಅತಿಶಯೋಕ್ತಿಯೇನಲ್ಲ.

ಬ್ರೀಟಿಷರ ಆಡಳಿತದಲ್ಲಿ ಕನ್ನಡದ ವ್ಯವಹಾರಗಳು ಕನ್ನಡದಲ್ಲಿಯೇ ನಡೆಯುತ್ತಿದ್ದವು.ಶಿಕ್ಷಣಕ್ಕೆ ಸಂಬಧಪಟ್ಟಂತೆ ಶಾಲಾ ಇನಸ್ಪೆಕ್ಟರ್‌ಗಳು ಎಲ್ಲರೂ ಇಂಗ್ಲೀಷ್‌ನವರೇ ಆಗಿದ್ದರೂ, ವ್ಯವಹಾರಗಳು ಕನ್ನಡದಲ್ಲಿ ನಡೆಯುತ್ತಿದ್ದವು. ಆದರೆ ಇಂಗ್ಲೀಷ್‌ನವರು ಹೋದ ಮೇಲೆ ಆಡಳಿತಕ್ಕೆ ಕನ್ನಡದವರು ಬಂದ ಮೇಲೆ ಆತಂಕವೆಂಬಂತೆ ಆಡಳಿತದಲ್ಲಿ ಕನ್ನಡವನ್ನೇ ಮರೆತು, ಕನ್ನಡ ಅಧಿಕಾರಿಗಳು ಇಂಗ್ಲೀಷ್‌ನಲ್ಲಿಯೇ ಆಡಳಿತವನ್ನು ಪ್ರಾರಂಭಿಸಿದರು ಎಂದು ಎಷ್ಟೋ ನಿವೃತ್ತ ಶಿಕ್ಷಕರು, ಹಳ್ಳಿಯ ಶಾನುಭೋಗರು, ಅಪ್ಪಟ ಗಾಂಧೀವಾದಿಗಳು ಬಣಕಾರರಿಗೆ ಮನಮುಟ್ಟುವಂತೆ ಹೇಳಿದರು. ಇದರಿಂದ ಬಣಕಾರರ ಮನಸ್ಸಿಗೆ ಬಹಳಷ್ಟು ಅಘಾತವಾಯಿತು. ಮತ್ತಷ್ಟು ಅಭಿಪ್ರಾಯಗಳನ್ನು ಸಂಗ್ರಹಿಸಲು ಸಿಕ್ಕ, ಸಿಕ್ಕ ಹಳೆಯ ತಲೆಮಾರಿನ ಜನರನ್ನು ಭೇಟಿಮಾಡಿದರು. ಕೆಲವು ಹಿರಿಯರು ನಮ್ಮ ಕಾಲದಲ್ಲಿ ಮೋಡಿ ಅಕ್ಷರಗಳಿದ್ದವು ಎಂದರು. ಇನ್ನೂ ಕೆಲವರು ಕಲೆಕ್ಟರ್ ಕಛೇರಿಯಿಂದ ನಮಗೆ ಕನ್ನಡದಲ್ಲಿ ಪತ್ರ ವ್ಯವಹಾರಗಳು ವಹಿವಾಟುವಾಗುತ್ತಿದ್ದವು ಎಂದರಲ್ಲದೆ ಆಗಿನ ಇಂಗ್ಲೀಷ್ ಅಧಿಕಾರಿಗಳು ಸಾರ್ವಜನಿಕರೊಂದಿಗೆ ಅಲ್ಪ ಸ್ವಲ್ಪ ಕನ್ನಡವನ್ನು ಮಾತನಾಡುತ್ತಿದ್ದರು, ಎಂದು ತಿಳಿದ ಬಣಕಾರರಿಗೆ ಆಕಾಶವೇ ಮೂರು ಗೇಣು ಎಂಬಂತೆ ಖುಷಿಯಾಯಿತು. ಕನ್ನಡ ಭಾಷೆಯ ಬಗ್ಗೆ ಎನೂ ಅರಿವಿಲ್ಲದವರು ಕನ್ನಡ ಭಾಷೆಯನ್ನು ಕಲಿತುಕೊಂಡು ಕನ್ನಡ ಮಾತನಾಡುತ್ತಾರೆಂದರೆ ಕನ್ನಡ ನೆಲದಲ್ಲಿ ಹುಟ್ಟಿ ಕನ್ನಡದ ಬಗ್ಗೆ ಎಳ್ಳಷ್ಟು ಅಭಿಮಾನವಿಲ್ಲದೆ ಅನ್ಯ ಭಾಷೆಯಲ್ಲಿ ಆಡಳಿತವನ್ನು ನಡೆಸಲು ಇವರಿಗೆ ಅಧಿಕಾರವನ್ನು ಕೊಟ್ಟವರು ಯಾರು? ಕನ್ನಡದಲ್ಲಿ ಆಡಳಿತ ನಡೆಸಲು ಇವರಿಗೆ ಏನು ರೋಗ? ಎಂಬಂತೆ ಸಿಡಿಮಿಡಿಗೊಂಡ ಬಣಕಾರರು ಆಂಗ್ಲರ ಆಡಳಿತದಲ್ಲಿ ಕನ್ನಡದ ಬಳಕೆ ಎಷ್ಟರ ಮಟ್ಟಿಗೆ ಇತ್ತು ಎಂಬುದರ ಕುರಿತು, ಬಣಕಾರರು ಆಳವಾದ ಅಧ್ಯಯನದಲ್ಲಿ ತೊಡಗಿದರು.

ನಂತರದಲ್ಲಿ ವಿಧಾನ ಸೌಧದ ರಾಜ್ಯ ಪತ್ರಾಗಾರ ವಿಭಾಗದಲ್ಲಿ ಆಂಗ್ಲರ ಆಡಳಿತಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಸಂಗ್ರಹಿಸಿಕೊಂಡರು. ಈ ಒಂದು ಸಂಗ್ರಹದಿಂದ ಅನೂಕುಲವೆಂಬಂತೆ ಮುಂಬೈ, ಮದ್ರಾಸ್, ಪುಣೆ, ಕಲ್ಕತ್ತಾ, ದೆಹಲಿ ಮುಂತಾದ ಕಡೆಗಳಲ್ಲಿ ಮಹತ್ತರ ಮಾಹಿತಿಗಳು ಲಭ್ಯವಾದವು.

ಬಣಕಾರರು ಕನ್ನಡದ ದಾಖಲೆಗಳನ್ನು ಹುಡುಕುತ್ತಾ ಭಾರತದ ಉದ್ದ ಅಗಲಕ್ಕೂ ಸಂಚರಿಸಿದರು. ಎರಡು ವರ್ಷಗಳ ನಿರಂತರವಾಗಿ ನಡೆದ ಕಾರ್ಯ ಸಾಧನೆಯ ಫಲವಾಗಿ ಸಾವಿರಾರು ಹಳೆಯ ದಾಖಲೆಗಳು ಲಭ್ಯವಾದವು. ಆಂಗ್ಲರು ತಮ್ಮ ಆಡಳಿತದಲ್ಲಿ ಕನ್ನಡವನ್ನು ಬಳಸಿದ್ದು ದಾಖಲೆ ಸಮೇತ ಅವೆಲ್ಲ ಸಿಕ್ಕಿದ್ದು ಬಣಕಾರರ ಸಂತೋಷವನ್ನು ಇಮ್ಮುಡಿಗೊಳಿಸಿತ್ತು.

ತಮ್ಮ ಆರೋಗ್ಯದ ಕಡೆ ಲಕ್ಷ್ಯವಹಿಸದ ಬಣಕಾರರು ಆಂಗ್ಲರ ಆಡಳಿತದಲ್ಲಿ ಕನ್ನಡ ಗ್ರಂಥವನ್ನು ರಚಿಸುವುದಕ್ಕೆ ಪ್ರಾರಂಭಿಸಿದರು. ಈ ಒಂದು ಗ್ರಂಥವನ್ನು ರಚಿಸಲಿಕ್ಕೆ ಪಟ್ಟ ಕಷ್ಟ ಅಷ್ಟಿಷ್ಟಲ್ಲ, ಹಿಡಿದ ಕೆಲಸವನ್ನು ಪೂರ್ಣ ಮುಗಿಸಬೇಕೆಂಬ ಬಣಕಾರರ ಅಚಲವಾದ ಮನಸ್ಸು ಮತ್ತು ಧೃಡವಾದ ನಂಬಿಕೆಯಿಂದ ಮತ್ತು ಅದ್ಭುತವಾದ ಪರಿಶ್ರಮದ ಫಲವಾಗಿ 1986 ರಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಮೂಲಕ 'ಆಂಗ್ಲರ ಆಡಳಿತದಲ್ಲಿ ಕನ್ನಡ' ಗ್ರಂಥ ಪ್ರಕಟಗೊಂಡಿತು. ಇದನ್ನು ಓದಿದ ಬುದ್ಧಿ ಜೀವಿಗಳು, ಸಾಹಿತಿಗಳು, ಶುದ್ಧ ರಾಜಕಾರಣಿಗಳು ಅತ್ಯುತ್ತಮ ಗ್ರಂಥವೆಂದು ಬಣ್ಣಿಸಿದರು. ಎಲ್ಲೆಂದರಲ್ಲಿ ಬಣಕಾರರಿಗೆ ಈ ಗ್ರಂಥಕ್ಕೆ ಅಭಿನಂದನೆಗಳ ಮಹಾಪೂರವೇ ಹರಿದು ಬಂತು.

ಕ್ರಿಶ 1800 ರಿಂದ 1900 ರವರೆಗೆ ಆಂಗ್ಲ ಅಧಿಕಾರಿಗಳು ನಡೆಸಿದ ಅಧಿಕಾರದ ಅವಧಿಯಲ್ಲಿ ಕನ್ನಡದ ಬಳಕೆ ಎಷ್ಟಿತ್ತೆಂಬುದನ್ನು ಈ ಗ್ರಂಥಲ್ಲಿ ನಾವು ಕಾಣಬಹುದಾಗಿದೆ. ಆಡಳಿತದ ಹಿತದೃಷ್ಟಿಯಿಂದ ಭಾಷೆಗೆ ಎಷ್ಟು ಪ್ರಾಮುಖ್ಯತೆ ಇದೆ ಎಂಬುದನ್ನು ತೋರಿಸಿಕೊಟ್ಟವರಲ್ಲಿ ಇಂಗ್ಲೀಷರು ಮೊದಲಿಗರು ಎಂಬುದನ್ನು ಬಣಕಾರರು ತಮ್ಮ ಈ ಗ್ರಂಥದಲ್ಲಿ ಸೆರೆಹಿಡಿದಿದ್ದಾರೆ. ತಾವು ಕಾರ್ಯ ನಿರ್ವಹಿಸುವ ಪ್ರದೇಶದ ಭಾಷೆಯ ಪರಿಜ್ಞಾನ ಇಲ್ಲದವನು ಸರ್ಕಾರಿ ಸೇವೆಯಲ್ಲಿರಲು ಆತ ಅನರ್ಹ ಎಂಬುದು ಇಂಗ್ಲೀಷರ ವಾದವಾಗಿತ್ತು. ಆಡುವ ಭಾಷೆ ಆಡಳಿತ ಭಾಷೆಯಾಗಬೇಕು, ಆಡಳಿತ ಭಾಷೆ ಅನುಸರಿಸದಿದ್ದರೆ ರಾಜ್ಯದ ಆಡಳಿತಕ್ಕೆ ಕುಂದು ಬಂದಂತೆ ಎಂಬುದನ್ನು ಬಣಕಾರ 'ಆಂಗ್ಲರ ಆಡಳಿತದಲ್ಲಿ ಕನ್ನಡ' ಎಂಬ ಗ್ರಂಥವನ್ನು ಓದಿದಾಗಲೇ  ತಿಳಿದು ಬರುತ್ತದೆ.

ದೇಶದ ಎಲ್ಲಾ ರಾಜ್ಯಗಳೂ ಈ ನೀತಿಯನ್ನು ಅನುಸರಿಸಿವೆ. ಆದರೆ ಕರ್ನಾಟಕ ಇಲ್ಲದ ಕುಂಟು ನೆಪ,ಆತಂಕಗಳು ನಿರಾಸಕ್ತಿ ಧೋರಣೆ, ಡಾಂಬಿಕ ಹೋರಾಟಗಳನ್ನು ಆಡಳಿತದಲ್ಲಿ ಕನ್ನಡಕ್ಕೆ ಚ್ಯುತಿ ಬಂದೊದಗಿರುವುದು ದುರ್ದೈವದ ಸಂಗತಿಯಾಗಿದೆ. ಕೇವಲ ನೆಪ ಮಾತ್ರಕ್ಕೆ ಹೋರಾಟಗಳು ನಡೆಯುತ್ತಿರುವುದು ವಿಷಾದನೀಯ ಸಂಗತಿಯಾಗಿದೆ.ಆಡಳಿತದಲ್ಲಿ ಕನ್ನಡ ಭಾಷೆಯನ್ನು ಜೀವಂತವಾಗಿರಿಸಬೇಕೆಂಬ ಮಹಾದಾಸೆಯೊಂದಿಗೆ ಬಣಕಾರರು ರಚಿಸಿದ 656 ಪುಟಗಳ ಈ ಬೃಹತ್ ಗ್ರಂಥ ಭಾಷೆ, ಅದರ ಸಾಮಾನ್ಯ ವಿಚಾರಗಳು, ಕನ್ನಡ ಭಾಷೆ ಎಂದಿನಿಂದ?, ಪ್ರಾದೇಶಿಕ ಭಾಷೆ, ಸಾಮಾನ್ಯ ಆಡಳಿತದಲ್ಲಿ ಕನ್ನಡ, ಆಡಳಿತದಲ್ಲಿ ಸೇವಾ ನಿಯಮ, ನಿಯಮ ನಿಭಂದನೆ, ನೋಂದಣಿ, ಭೂ ವಿರಾಮ, ಭೂ ಮಾಪನ, ನ್ಯಾಯಾಲಯಗಳಲ್ಲಿ ಕನ್ನಡ ಮತ್ತು ಶಿಕ್ಷಣದಲ್ಲಿ ಕನ್ನಡ ಹೀಗೆ ಒಂಭತ್ತು ಅಧ್ಯಾಯಗಳಲ್ಲಿ

ಈ ಬೃಹತ್ ಗ್ರಂಥ ವಿಭಾಗಿಸಲ್ಪಟ್ಟಿದೆ. ಒಟ್ಟಿನಲ್ಲಿ ಬಣಕಾರರು ಕನ್ನಡ ಭಾಷೆಯ ಬಗ್ಗೆ ದೊಡ್ಡದಾದ ಅಭಿಮಾನ ಹೊತ್ತು ಗಡಿ,ನಾಡು,ಭಾಷೆ ಆಂತಾ ತಮ್ಮ ಜೀವನವನ್ನೇ ತೇಯ್ದಿದ್ದಾರೆ.

**ಗಡಿವಿವಾದ:** ನಾಡಿನ ಅನೇಕ ಜ್ವಲಂತ ಸಮಸ್ಯೆಗಳು ಬಗೆಹರಿಯದಿದ್ದಾಗ ಬಣಕಾರರು ಪಟ್ಟ ಕಷ್ಟ ಅಷ್ಟಿಷ್ಟಲ್ಲ. ಹಲವಾರು ವರ್ಷಗಳಿಂದ ನೆನೆಗದಿಗೆ ಬಿದ್ದ ಇನ್ನೂ ಬಗೆ ಹರೆಯದ ಕರ್ನಾಟಕ ಮಾಹಾರಾಷ್ಟ್ರ ಗಡಿವಿವಾದದ ಕುರಿತು ಬಣಕಾರರು ಬಹಳಷ್ಟು ಶ್ರಮಿಸಿದರು. ಕರ್ನಾಟಕ ಮತ್ತು ಮಹಾರಾಷ್ಟ್ರ ಈ ಎರಡು ರಾಜ್ಯಗಳ ಗಡಿ ಇತಿಹಾಸವನ್ನು ನಾಡಿನಾದ್ಯಂತ ಸಂಚರಿಸಿ ಸ್ಪಷ್ಟವಾದ ಮಾಹಿತಿಯನ್ನು ಪಡೆದುಕೊಂಡರು. ಈ ಎರಡು ರಾಜ್ಯಗಳ ಇತಿಹಾಸವನ್ನು ನಕ್ಷೆಯ ಮೂಲಕ ಅಂಕಿ ಅಂಶಗಳ ಸಮೇತವಾಗಿ 150 ಪುಟಗಳಲ್ಲಿ 5000 ಪ್ರತಿಗಳನ್ನು ಮುದ್ರಿಸಿ, ಕನ್ನಡ ನಾಡಿನೆಲ್ಲಡೆ ಹಂಚಿ ಗಡಿ ವಿವಾದದ ಬಗ್ಗೆ ಕನ್ನಡಿಗರಿಗಾದ ಹಾನಿಯ ಬಗ್ಗೆ ಜಾಗೃತಿ ಮೂಡಿಸಿದರು.

ಮುಂದೆ ಕಾಸರಗೋಡು ಕೇರಳದಲ್ಲಿ ಉಳಿಯದು, ಬೆಳಗಾವಿ ಮಾಹಾರಾಷ್ಟ್ರಕ್ಕೆ ಸೇರದು ಎಂಬ 70 ಪುಟಗಳ ಕೃತಿಯೊಂದನ್ನು ರಚಿಸಿ 10 ಸಾವಿರ ಪ್ರತಿಗಳನ್ನು ಮುದ್ರಿಸಿ ನಾಡಿನೆಲ್ಲಡೆ ಹಂಚಿ, ಕನ್ನಡಿಗರಿಗೆ ಅಚ್ಚರಿಯುನ್ನುಂಟು ಮಾಡುವುದರೊಂದಿಗೆ ಪ್ರತಿಯೊಬ್ಬ ಕನ್ನಡಿಗನಲ್ಲಿ ಜಾಗೃತಿಯನ್ನುಂಟು ಮಾಡಿದರು.

ಅಂಕಿ ಅಂಶಗಳ ಸಮೇತವಾಗಿ ರಚಿಸಿದ ಬಣಕಾರರ ಎಲ್ಲ ಕೃತಿಗಳು ಪ್ರಾಮುಖ್ಯ ತೆಯನ್ನು ಪಡೆಯುವುದರೊಂದಿಗೆ ನಾಡಿನಲ್ಲಿ ಹೆಸರು ವಾಸಿಯಾದವು. ಜೊತೆಗೆ ಬಣಕಾರರ ಗೌರವ ಈ ಕೃತಿಗಳಿಂದ ಇಮ್ಮಡಿಯಾಯಿತು.

ಸರಕಾರದ ನಿಟ್ಟಿನಲ್ಲಿ ಬಗೆಹರಿಯದ ನಾಡಿನ ಜ್ವಲಂತ ಗಡಿ, ನಾಡು, ಭಾಷೆ, ಜಲಗಳ ಸಮಸ್ಯೆಗಳು ಮೇಲಿಂದ ಮೇಲೆ ಎದುರಾಗುವ ಸಂದರ್ಭದಲ್ಲಿ, ಸಮಯಕ್ಕೆ ಅನುಗುಣವಾಗಿ ಬಣಕಾರರು ರಚಿಸಿದ ಈ ಕೃತಿಗಳು, ಲೇಖನಗಳು ಸ್ಫೂರ್ತಿನೀಡಿದವು. ಎನ್ನುವುದರಲ್ಲಿ ಎರಡು ಮಾತಿಲ್ಲ.

ಮುಂದೆ 'ಕರ್ನಾಟಕದ ಸಮಗ್ರತೆ', 'ಭಾಷಾ ಅಲ್ಪಸಂಖ್ಯಾತರ ಹಿತರಕ್ಷಣೆ', ಮಹಾಜನ ವರದಿ ವಿಶ್ಲೇಷಣೆ, ಮುಂತಾದ ಕೃತಿಗಳನ್ನು ಬಣಕಾರರು ರಚಿಸಿ ಪ್ರಕಟಿಸಿದರು. ಇದರಿಂದ ಕನ್ನಡಿಗರಲ್ಲಿ ಅಭಿಮಾನ ಹೆಚ್ಚಾಯಿತು ಅನ್ನುವುದಕ್ಕಿಂತ, ಕರ್ನಾಟಕ ಸರಕಾರಕ್ಕೆ ಮಾಹಾದುಪಕಾರವೇ ಆಯಿತು. ಇವೆಲ್ಲ ಕೃತಿಗಳ ರಚನೆಯ ಪೂರ್ವದಲ್ಲಿ ಗಡಿವಿವಾದದ ಬಗೆಗೆ, ಹಾಗೂ ಕರ್ನಾಟಕ ಸಮಗ್ರತೆಯ ಬಗ್ಗೆ

ಆಗಲಿ ಸ್ಪಷ್ಟವಮಾಹಿತಿ ಇಲ್ಲದಿರುವ ಸಂದರ್ಭದಲ್ಲಿ, ಸರಕಾರ ಸಂಕಟ ಎದುರಿಸುತ್ತಿರುವಾಗ ಬಣಕಾರರ ಸಾಕಷ್ಟು ಕೃತಿಗಳು ಸಹಕಾರಿಯಾದವು ಎಂಬುದನ್ನು ಒಪ್ಪಿಕೊಳ್ಳಲೆಬೇಕು.

ಈಗಲೂ ಸರಕಾರಕ್ಕೆ ಗಡಿ ಸಮಸ್ಯೆ ಎದುರಾದಾಗ ಬಣಕಾರರು ಬರೆದ ಕೃತಿಗಳು, ಅವರ ಹೇಳಿಕೆಗಳು ಪ್ರಸ್ತುತವಾಗಿವೆ ಎನ್ನುವದರಲ್ಲಿ ಎರಡು ಮಾತಿಲ್ಲ. ಗಡಿ ಸಮಸ್ಯೆ ಸರಕಾರಕ್ಕೆ ತಲೆನೋವಾಗಿ ಪರಿಣಮಿಸಿದ ಸಮದರ್ಭದಲ್ಲಿ ಬಣಕಾರರ ಸಲಹೆಯನ್ನು ಪಡೆದುಕೊಳ್ಳುತ್ತಿತ್ತು.

ಇಂಥಹ ಕಾರ್ಯನಿಷ್ಠೆಯಲ್ಲಿ ನಾಡೋಜ ಡಾ:ಪಾಟೀಲ್ ಪುಟ್ಟಪ್ಪನವರು ಒಂದು ಹೆಜ್ಜೆ ಮುಂದೆ ಎನ್ನುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಅಂತೆಯೇ ಕರ್ನಾಟಕ ಘನ ಸರಕಾರ ಡಾ: ಪಾಟೀಲ್ ಪುಟ್ಟಪ್ಪನವರನ್ನು ಕನ್ನಡ ಕಾವಲು ಸಮಿತಿಯ ಅಧ್ಯಕ್ಷರನ್ನಾಗಿ ನೇಮಿಸಿದ ಸಂದರ್ಭದಲ್ಲಿ, ಇವರ ನೆರವಿಗೆ ಸರಕಾರ ಬಣಕಾರರನ್ನು ನೇಮಿಸಿತು.

ಮುಂದೆ ಬಣಕಾರರು ರಾಜ್ಯ ಪತ್ರಗಾರ ಪ್ರಾದೇಶಿಕ ಸಮೀಕ್ಷಾ ಸಮಿತಿ, ಕನ್ನಡ ಭಾಷಾಂತರ ಸರಳೀಕರಣ ಸಮಿತಿ, ವಿಧಾನ ಮಂಡಲದ ಕನ್ನಡ ಸಂಸ್ಕೃತಿ ಹಾಗೂ ವಾರ್ತಾ ಮತ್ತು ಪ್ರಚಾರ ಇಲಾಖೆಯ ವಿಷಯ ಸಮಿತಿ ಸೇರಿದಂತೆ ಸದಸ್ಯರಾಗಿ ಸೇವೆ ಸಲ್ಲಿಸಿ, ಸರಕಾರಕ್ಕೆ, ಸಾಹಿತಿಗಳಿಗೆ, ನಾಡಿನ ಸಮಸ್ತ ಜನತೆಯ ಪ್ರೀತಿಗೆ ಪಾತ್ರರಾಗಿ ಮನ್ನಣೆ ಪಡೆದರು.

ರಾಜ್ಯದ ಬೆಳಗಾವಿ, ಕಾಸರಗೋಡು, ತಾಳವಾಡಿ, ಘಾರ್ಕಾ, ಪಾವಗಡ, ನಿಪ್ಪಾಣಿ ಮುಂತಾದ ಗಡಿಭಾಗಗಳಲ್ಲಿ ಬಣಕಾರರು ಸಂಚರಿಸಿ, ನಾಡಿನ ಗಡಿ ಸಮಸ್ಯೆಗಳನ್ನು ಆಳವಾಗಿ ಅಭ್ಯಾಸ ಮಾಡಿ, ಅಂಕಿ ಅಂಶಗಳ ಸಮೇತ ಸ್ಪಷ್ಟ ಮಾಹಿತಿಗಳನ್ನು ಸರಕಾರಕ್ಕೆ ಸಲ್ಲಿಸಿದರು. ಇದರಿಂದ ಸರಕಾರಕ್ಕೆ ಬಣಕಾರರ ಗಡಿನಾಡಿನ ಸೇವೆ ಅಮೂಲ್ಯವಾಯಿತು.

## ಭಾಷಾ ಅಲ್ಪಸಂಖ್ಯಾತರ ಹಿತರಕ್ಷಣೆ :

ಅಪ್ಪಟ ಕನ್ನಡ ಅಭಿಮಾನಿಯಾದ ಮಹದೇವ ಬಣಕಾರರಿಗೆ ಕನ್ನಡದ ಸಂಸ್ಕೃತಿ, ಗಡಿ ಸಮಸ್ಯೆ, ಮಹಾಜನ್ ವರದಿ, ಆಡಳಿತದಲ್ಲಿ ಕನ್ನಡ ಭಾಷೆ ಹೀಗೆ ಅನೇಕ ಗೊಂದಲಗಳು, ವಿಚಾರ ವಿನಿಮಯಗಳು ಎದುರಾದಾಗ ಇವರ ಬರವಣಿಗೆಗೆ ಸ್ಫೂರ್ತಿಸಿಗುತ್ತದೆ ಮತ್ತು ಭಾಷೆಗೆ ಬಣ್ಣ ಬರುತ್ತದೆ. ಪ್ರತಿಯೊಂದನ್ನು ಅಂಕಿ ಅಂಶಗಳ

ಸಮೇತ ಮಾಹಿತಿ ನೀಡುವ ಬಣಕಾರರ ಸಾಮರ್ಥ್ಯ ಬೆರಗು ಗೊಳಿಸುವಂತಾಗಿದೆ. ಅನೇಕ ಮಹತ್ವದ ದಾಖಲೆಗಳನ್ನು ಪಡೆದು ಅವುಗಳನ್ನು ಆಧಾರವಾಗಿಟ್ಟುಕೊಂಡು ಬಣಕಾರರು ರಚಿಸಿದ 'ಭಾರತದಲ್ಲಿ ಭಾಷಾ ಅಲ್ಪಸಂಖ್ಯಾತರ ಹಿತರಕ್ಷಣೆ' ಕೃತಿ ಬಹಳಷ್ಟು ಮೆಚ್ಚುಗೆಯನ್ನು ಪಡೆದಿದೆ.

ದೇಶವನ್ನು ಭಾಷೆಯ ತಳಹದಿಯ  ಮೇಲೆ ವಿಂಗಡಿಸುವಾಗ, ಗಡಿ ಪ್ರದೇಶದಲ್ಲಿ ಆ ರಾಜ್ಯದ ಭಾಷೆಯಲ್ಲದ ಮತ್ತೊಂದು ಭಾಷೆಯನ್ನು ಆಡುವ ಜನರು ಉಳಿದೇ ಉಳಿಯುತ್ತಾರೆ. ಗಡಿ ಪ್ರದೇಶದಲ್ಲಿ ಇರುವಂತೆ ರಾಜ್ಯದ ಒಳಗೂ ಕೂಡ ಬಾಷಾ ಅಲ್ಪ ಸಂಖ್ಯಾತರು ಹಲವೆಡೆ ಇದ್ದೆ ಇರುತ್ತಾರೆ. ಈ ಕಾರಣದಿಂದ ಭಾಷಾ ಅಲ್ಪ ಸಂಖ್ಯಾತರ ಪ್ರಶ್ನೆ ಪ್ರತಿ ರಾಜ್ಯದಲ್ಲಿ ಕಂಡು ಬರುವ ಅಂಶವಾಗಿದೆ. ದೇಶದ ಸಂವಿಧಾನವು ಇಂಥಹ ಭಾಷಾ ಅಲ್ಪ ಸಂಖ್ಯಾತರಿಗೆ ಹಲವು ಭರವಸೆಗಳನ್ನು ನೀಡಿದೆ. ಭಾಷಾ ಅಲ್ಪ ಸಂಖ್ಯಾತರ ಮಕ್ಕಳಿಗೆ ಮಾಧ್ಯಮಿಕ, ಪ್ರೌಢ ಕಾಲೇಜು ಶಿಕ್ಷಣವನ್ನು ಮಾತೃ ಭಾಷೆಯಲ್ಲಿಯೇ ಕಲಿಸಬೇಕೆನ್ನುವುದು ಸಂವಿಧಾನದ ಪ್ರಮುಖ ಭರವಸೆಯಲ್ಲಿ ಒಂದಾಗಿದೆ.

ಅನೇಕ ಭರವಸೆಗಳನ್ನು  ಭಾಷಾ ಅಲ್ಪಸಂಖ್ಯಾತರ ಮನೆ ಬಾಗಿಲಿಗೆ ಮುಟ್ಟಿಸುವಂಥಹ ಕಾರ್ಯವನ್ನು ಕರ್ನಾಟಕ ರಾಜ್ಯ ಮಾಡಿರುವುದು ಶ್ಲ್ಯಾಘನೀಯವಾದದ್ದು. ಬಣಕಾರರು ರಚಿಸಿದ ಭಾಷಾ ಅಲ್ಪ ಸಂಖ್ಯಾತರ ಹಿತರಕ್ಷಣೆ ಪುಸ್ತಕದಲ್ಲಿ ಈ ಕುರಿತು ಸಮಗ್ರವಾಗಿ ರೂಪಿಸಿದ್ದಾರೆ. ಭಾಷಾ ಅಲ್ಪ ಸಂಖ್ಯಾತರ ಸ್ಥಿತಿ ಗತಿಗಳ ಬಗ್ಗೆ ದೇಶದಲ್ಲಿನ ಬೇರೆಬೇರೆ ರಾಜ್ಯಗಳಲ್ಲಿ ಇವರ ಸ್ಥಾನ ಮಾನ, ಅವರ ಹಿತರಕ್ಷಣೆ ಎಷ್ಟರಮಟ್ಟಿಗೆ ಸಾಗಿದೆ, ಅದರಲ್ಲಿಯೂ ಕರ್ನಾಟಕ ರಾಜ್ಯವು ಭಾಷಾ ಅಲ್ಪ ಸಂಖ್ಯಾತರಿಗೆ ನೀಡಿರುವ ಸೌಲಭ್ಯ, ಉದಾರತೆ ಎಷ್ಟೆಂಬುದನ್ನು ಬಣಕಾರರು ಭಾಷಾ ಅಲ್ಪ ಸಂಖ್ಯಾತರ ಆಯುಕ್ತರ ಮೂರು ದಶಕಗಳ ವರದಿಯನ್ನು ಅದ್ಯಯನ ಮಾಡಿ ಪುಸ್ತಕವನ್ನು ರಚಿಸಿ, ಎಲ್ಲರ ಕಣ್ಣುತೆರೆಸುವಂತಹ ಸಾಹಸದ ಕಾರ್ಯವನ್ನು ಶ್ರೀ ಬಣಕಾರರು ಮಾಡಿ ತೋರಿಸಿದ್ದಾರೆ.

ಇತರ ಬೇರೆಬೇರ ರಾಜ್ಯಗಳಲ್ಲಿ ಕನ್ನಡಿಗರಿಗೆ ಸಾಕಷ್ಟು ಸೌಲಭ್ಯ ಸಿಕ್ಕಿರುವುದಿಲ್ಲ. ಆದರೆ ಕರ್ನಾಟಕ ರಾಜ್ಯವು ಭಾಷಾ ಅಲ್ಪ ಸಂಖ್ಯಾತರನ್ನು ತುಂಬಾ ವಿಶ್ವಾಸಕ್ಕೆ ತೆಗೆದುಕೊಂಡು ಅವರಿಗೆ ಸಾಧ್ಯವಾದಷ್ಟು ಮೂಲ ಸೌಲಭ್ಯಗಳನ್ನು ಕಲ್ಪಿಸಿಕೊಡುವಲ್ಲಿ ಮುಖ್ಯಪಾತ್ರ ವಹಿಸಿದೆ ಎಂಬುದನ್ನು ಬಣಕಾರರು ಅರ್ಥಪೂರ್ಣವಾಗಿ ಈ ಕೃತಿಯಲ್ಲಿ ತಿಳಿಸಿದ್ದಾರೆ.

ಭಾರತ ದೇಶದಲ್ಲಿ ಯಾವ ರಾಜ್ಯದಲ್ಲಿ ಸಿಗದಷ್ಟು ಅನೇಕ ಸೌಲಭ್ಯಗಳು ಈ ಕರ್ನಾಟಕ ರಾಜ್ಯದಲ್ಲಿ ಭಾಷಾ ಅಲ್ಪ ಸಂಖ್ಯಾತರಿಗೆ ಸಿಕ್ಕಿವೆ ಎಂಬುದನ್ನು ಸಮರ್ಥಿಸಿಕೊಳ್ಳುವ ಬಣಕಾರರು, ಮಹಾರಾಷ್ಟ್ರ ರಾಜ್ಯವು ಭಾಷಾ ಅಲ್ಪ ಸಂಖ್ಯಾತರನ್ನು ಕಡೆಗೆಣಿಸುತ್ತ ಬಂದಿದೆ ಎಂಬುದನ್ನು ತಮ್ಮ ಕೃತಿಯಲ್ಲಿ ಬಹಳಷ್ಟು ಸ್ಪಷ್ಟವಾಗಿದೆ ಎಂಬುದನ್ನು ಬಣಕಾರರು ತಮ್ಮ ಕೃತಿ ಮೂಲಕ ಸಾದರ ಪಡಿಸಿದ್ದಾರೆ. ಇದನ್ನು ಒಪ್ಪಿಕೊಳ್ಳಬಹುದಾದ ಅನೇಕ ವಿಷಯಗಳನ್ನು ಈ ಕೃತಿಯೊಂದಿಗೆ ಅನೇಕ ಸಾಕ್ಷ್ಯಾಧಾರಗಳನ್ನು ಒದಗಿಸಿದ್ದಾರೆ.

ದೇಶದ ಯಾವುದೇ ರಾಜ್ಯದಲ್ಲಿ ವಾಸಿಸುವ ಅನ್ಯ ಭಾಷಿಕರು, ಆ ರಾಜ್ಯದ ಭಾಷೆಯನ್ನು ಮಾತೃ ಭಾಷೆ ಎಂದೇ ಪರಿಗಣಿಸಬೇಕೆಂದು ಬಣಕಾರರು ಹೇಳಿದ್ದಾರೆ. ಇದು ಕರ್ನಾಟಕದಲ್ಲಿ ವಾಸಸಿಸುವ ತಮಿಳು, ತೆಲಗು, ಮಲಿಯಾಳಂ, ಉರ್ದು, ಗುಜರಾತಿ, ಮರಾಠಿ, ಮುಂತಾದ ಭಾಷಾ ಅಲ್ಪ ಸಂಖ್ಯಾತರಿಗಷ್ಟೇ ಸೀಮಿತವಲ್ಲ, ಮಹಾರಾಷ್ಟ್ರದಲ್ಲಿರುವ ಕನ್ನಡಿಗರು ಅಲ್ಲಿನ ರಾಜ್ಯ ಭಾಷೆ ಮಾರಾಠಿಯನ್ನು ತಮಿಳುನಾಡಿನಲ್ಲಿರುವ ಕನ್ನಡಿಗರು ಅಲ್ಲಿನ ತಮಿಳು ಭಾಷೆಯನ್ನು, ಕೇರಳದಲ್ಲಿರುವ ಕನ್ನಡಿಗರು ಮಲಯಾಳಿಯನ್ನು ಮಾತೃಭಾಷೆಯಿಂದ ತಿಳಿದುಕೊಂಡು ಅರ್ಥಪೂರ್ಣವಾಗಿ ಕಲಿತುಕೊಳ್ಳಬೇಕಾಗಿದೆ ಎಂಬುವುದು ಬಣಕಾರರ ಅಭಿಪ್ರಾಯವಾಗಿದೆ. ಆಯಾ ರಾಜ್ಯದ ಭಾಷೆಗಳನ್ನು ಅಭಿಮಾನ ಪೂರ್ವಕವಾಗಿ ಚನ್ನಾಗಿ ಕಲಿತು ಕೊಂಡು, ಭಾಷೆಗೆ ಅಷ್ಠೇ ಗೌರವವನ್ನು ನೀಡಬೇಕಾಗಿರುವುದು ಆ ರಾಜ್ಯದ ಪ್ರತಿಯೊಬ್ಬ ಪ್ರಜೆಯ ಆದ್ಯ ಕರ್ತವ್ಯವೆಂದು ಬಣಕಾರರು ಸ್ಪಷ್ಟವಾಗಿ ತಿಳಿಸಿದ್ದಾರೆ.

ಅಂದ ಹಾಗೆ ಕರ್ನಾಟಕ ರಾಜ್ಯದಲ್ಲಿ ಆಡಳಿತ ಭಾಷೆ ಕನ್ನಡವೇ ಆಗಿರುವುದರಿಂದ ಈ ನೆಲದಲ್ಲಿ ಜೀವಿಸುವವರು ಯಾವುದೇ ರಾಜ್ಯದವರಿರಲಿ, ಕನ್ನಡವನ್ನು ಕಡ್ಡಾಯವಾಗಿ ಕಲಿಯಲೇಬೇಕು. ಈ ರಾಜ್ಯದ ಭಾಷೆ ಬೇಡವಾದರೆ ಈ ರಾಜ್ಯದ ಆಶ್ರಯವೇಕೆ?ಎಂಬುದು ಬಣಕಾರರ ವಾದವಾಗಿತ್ತು. ವಾಸಿಸುವದಕ್ಕೆ ಕನ್ನಡದ ನೆಲಬೇಕು, ಕುಡಿಯುಲು ಕನ್ನಡದ ನೀರು ಬೇಕು, ಬದುಕಲು ಇಲ್ಲಿ ಕೆಲಸಬೇಕು, ಹೀಗೆ ಎಲ್ಲವು ಕನ್ನಡದ್ದಾಗಿರಬೇಕು, ಆದರೆ ಭಾಷೆ ಮಾತ್ರ ಬೇಡ ಎಂದರೆ ಯಾವುದು ನ್ಯಾಯ? ಎನ್ನುವುದು ಬಣಕಾರರ ದೊಡ್ಡ ಪ್ರಶ್ನೆ, ಅದಕ್ಕೆಂದೇ ಈ ರಾಜ್ಯದಲ್ಲಿ ವಾಸಿಸುವವರು ಕನ್ನಡವನ್ನು ಕಡ್ಡಾಯವಾಗಿ ಕಲಿತುಕೊಳ್ಳಬೇಕು, ಭಾಷೆ ಕಲಿತುಕೊಂಡಾಗ ಭಾಷಾ ಅಲ್ಪ ಸಂಖ್ಯಾತರು ಬಹುಸಂಖ್ಯಾತರೊಂದಿಗೆ ಸೌಹಾರ್ದಯುತವಾಗಿ ಜೀವನ ಸಾಗಿಸಲಿಕ್ಕೆ ಇದೊಂದು ಸುಗಮದ ಹಾದಿ ಎಂಬುದು

ಬಣಕಾರರ ಮನದಾಳದ ಮಾತಾಗಿತ್ತು. ಅಷ್ಟೆ ಅಲ್ಲದೆ ಭಾಷಾ ಅಲ್ಪ ಸಂಖ್ಯಾತರು ಯಾರೆ ಇರಲಿ, ಕನ್ನಡವನ್ನು ಕಡ್ಡಾಯವಾಗಿ ಕಲಿಯಲೇಬೇಕೆಂದು ಅನೇಕ ಹೋರಾಟಗಳನ್ನು ಕೈಗೊಂಡು ಆ ಹೋರಾಟಕ್ಕೆ ಒಂದು ಹೊಸ ರೂಪ ತರುವಲ್ಲಿ ಬಣಕಾರರು ಬಹುತೇಕವಾಗಿ  ಯಶಸ್ವಿಯಾದರು.

ಭಾರತ ದೇಶದ ಸಮಕಾಲಿನ ಪ್ರಮುಖ ಸಮಸ್ಯೆಯೊಂದರ ವಿಶ್ಲೇಷಣಾತ್ಮಕ 'ಇಂಗ್ಲೀಷ್' ಆವೃತ್ತಿಯನ್ನು ಬಣಕಾರರು ಬರೆದು ಪ್ರಕಟಿಸಿದ್ದಾರೆ. ಅದುವೆ "Safeguards for Linguistic Minorities India ". ಕನ್ನಡ ಭಾಷೆಯ ಮೇಲೆ ಸಾಧಿಸಿರುವಷ್ಟು ಪ್ರಭುತ್ವ ಇಂಗ್ಲೀಷ್ ಭಾಷೆಯ ಮೇಲೂ ಸಾಧಿಸಿದ್ದರು ಎಂಬುದಕ್ಕೆ ಈ ಇಂಗ್ಲೀಷ ಭಾಷೆಯಲ್ಲಿ ಬರೆದಿರುವ ಈ ಕೃತಿಯೊಂದೇ ಸಾಕ್ಷಿಯಂತಿದೆ.

ಬಣಕಾರರು ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳಲ್ಲಿ ಬರೆದಿರುವ ಕೃತಿಗಳು ಅತ್ಯಂತ ಸಮಯೋಚಿತ ಕೃತಿಗಳಾಗಿವೆ. ಇವೆಲ್ಲ ಕೃತಿಗಳು ಆಧಾರ ಸಮೇತವಾಗಿರುವುದಲ್ಲದೇ ಉತ್ಕೃಷ್ಟವಾಗಿವೆ ಹಾಗೂ ಪುಸ್ತಕ ಸನ್ನಿವೇಶದಲ್ಲಿ ಔಚಿತ್ಯಪೂರ್ಣವಾಗಿವೆ. ಗಡಿ–ನಾಡು–ಭಾಷೆಗಳನ್ನು ಗುರಿಯಾಗಿಟ್ಟುಕೊಂಡು ರಚಿಸಿದಂತ ಬಣಕಾರರ ಹಲವಾರು ಕೃತಿಗಳು ವೈಶಿಷ್ಟ್ಯಮಯವಾಗಿರುವುದಲ್ಲದೆ, ಆಂಗ್ಲ ಭಾಷೆಯ ಪತ್ರಿಕೆಗಳಾದ 'ದಿ ಹಿಂದೂ' ಹಾಗೂ 'ಇಂಡಿಯನ್ ಎಕ್ಸ್‌ಪ್ರೆಸ್' ಪತ್ರಿಕೆಗಳು ಬಣಕಾರರ ಈ ಕೃತಿಗಳಿಗೆ ಉತ್ತಮ ಅಭಿಪ್ರಾಯಗಳನ್ನು ನೀಡಿ ಪ್ರೋತ್ಸಾಹಿಸಿವೆ. ಹೀಗೆ ನಾಡು–ನುಡಿಗಳನ್ನು ಗುರಿಯಾಗಿಟ್ಟುಕೊಂಡು ಬರೆದಿರುವ ಬಣಕಾರರ ಅನೇಕ ಕೃತಿಗಳು ಪ್ರಸ್ತುತ ರಾಜ್ಯಾಡಳಿತಕ್ಕೆ ಪೂರಕವಾಗುವುದರಲ್ಲಿ ಸಂದೇಹವಿಲ್ಲ ಎಂಬುದನ್ನು ಸಾಧಿಸಿ ತೋರಿಸಿದ್ದಾರೆ.

## ಆಡಳಿತದಲ್ಲಿ ಕನ್ನಡವೇ ಏಕೆ? :

ಮಾತು ಇಲ್ಲದಿದ್ದರೆ ಮಾನವ ಜೀವಿ ಮನುಷ್ಯ ಏನಿಸಿಕೊಳ್ಳುತ್ತಿರಲಿಲ್ಲ, ಎನ್ನುವುದು ಎಲ್ಲರು ತಿಳಿದಿರುವ ವಿಚಾರವಾಗಿದೆ. ಅಂತೆಯೇ ಜೀವನದಲ್ಲಿ ಬೆಳಕನ್ನು, ಬಾಳಿನಲ್ಲಿ, ನೆಮ್ಮದಿಯನ್ನು, ಆತ್ಮ ಪರಮಾತ್ಮನ ಸಂಬಂಧವನ್ನು, ಧೈವದ ನಿಗೂಢತೆಯನ್ನು ಅರಿಯಲು ಸಾಧ್ಯವಾಗುತ್ತಿರಲಿಲ್ಲ. ಅಷ್ಟೆ ಅಲ್ಲ ಪಶುಗಳಿಗಿಂತ ಯಾವುದರಲ್ಲಿಯೂ ಭಿನ್ನವೆನಿಸಿಕೊಳ್ಳುತ್ತಿರಲಿಲ್ಲ. ಭಾಷೆ ಸಮೂಹ ಮಾಧ್ಯಮಗಳಲ್ಲಿ ಆಳವಾದ ಭಾವನೆಗಳಿವೆ ಹಾಗೂ ಪರಸ್ಪರ ಸಂಬಂಧ ಹೊಂದಿವೆ. ಆ ಕಾರಣಕ್ಕಾಗಿ ಭಾಷೆಯನ್ನು ಸಂಗ್ರಹಿಸಿಟ್ಟುಕೊಂಡ ಮಾನವಜೀವಿ ಆಕಾಶದೆತ್ತರಕ್ಕೆ, ಸಮುದ್ರದಾಳಕ್ಕೆ ನುಗ್ಗಿ ಹೊಸ ಹೊಸ ಆವಿಸ್ಕಾರಗಳನ್ನು ಕಂಡು ಕೊಂಡು ಮಹಾನುಭವಿಯಾಗಿದ್ದಾನೆ. ಭಾಷೆಯೇ

ಇವೆಲ್ಲವುಗಳಿಗೆ ಕಾರಣವಾಗಿದೆ ಎಂಬುದನ್ನು ಬಣಕಾರರು ರಚಿಸಿದ 'ಆಡಳಿತದಲ್ಲಿ ಕನ್ನಡವೇ ಏಕೆಬೇಕು?' ಎಂಬ ಗ್ರಂಥ ಸಾಕ್ಷಿಯಾಗಿದೆ

ಭಾಷೆ ಎನ್ನುವ ಸಂಪರ್ಕ ಸಾಧನ ಇಲ್ಲದೆ ಹೋಗಿದ್ದರೆ ಕತ್ತಲೆಯಲ್ಲಿ ಕಣ್ಣಿದ್ದವನು ಕುರುಡನಾಗುವಂತೆ, ಮಾನವ ಆಕೃತಿಯು ಪಶುವಾಗಿ ಬದುಕುತ್ತಿತ್ತೇ ಹೊರತು ಮತ್ಯಾವ ಆಕೃತಿಯಾಗಿ ಬದುಕುವುದಿರಲಿ ಯಾವ ಪ್ರಗತಿಯನ್ನು ಕಾಣಲಿಕ್ಕೆ ಸಾಧ್ಯವಾಗುತ್ತಿರಲಿಲ್ಲ ಎಂಬುದನ್ನು ಬಣಕಾರರ ಈ ಗ್ರಂಥದಿಂದಲೇ ಎಲ್ಲ ಕನ್ನಡಿಗರು ಅರಿಯಬಹುದಾಗಿದೆ.

ಭಾಷೆಯನ್ನು ರೂಪಿಸಿಕೊಂಡಿದ್ದು ಇತಿಹಾಸದಲ್ಲೇ ಮಾನವನ ಒಂದು ಅದ್ಭುತ ಸಾಧನೆ ಎಂಬುದನ್ನು ಇಂದು ಭಾಷೆಯ ಮೇಲೆ ಪ್ರಭುತ್ವ ಸಾಧಿಸಿದವರಾರೂ ಅಲ್ಲಗಳೆಯುವಂತಿಲ್ಲ. ಬದುಕಿನ ಸಾರ್ಥಕವನ್ನು ಭಾಷೆಯ ಮೂಲಕವೇ ಮಾನವನು ಕಂಡುಕೊಂಡಿದ್ದಾನೆ. ವಿಚಿತ್ರವೆಂದರೆ ಒಂದೊಂದು ಪರಿಸರದಲ್ಲಿ ಬೆಳೆದವರೆಲ್ಲ ಒಂದೊಂದು ರೀತಿಯ ಸಂಜ್ಞೆಗಳಿಗೆ ಶಬ್ದಗಳನ್ನು ಸಂಯೋಜನೆ ಗೊಳಿಸಿಕೊಂಡಿದ್ದಾನೆ.

ಜಗತ್ತಿನಲ್ಲಿ ಒಟ್ಟು 600 ಭಾಷೆಗಳಿವೆ ಎಂಬುದು ಹಲವು ವರ್ಷಗಳ ಕೆಳಗೆ ಅಂದಾಜಿಸಲಾಗಿದೆ. ಭಾರತ ದೇಶದಲ್ಲಿಯೇ ಮಾನ್ಯತೆ ಪಡೆದ 15 ಭಾಷೆಗಳು, ಮಾನ್ಯತೆ ಪಡೆಯದ 179 ಭಾಷೆಗಳು, 544 ಉಪ ಭಾಷೆಗಳು ಹಾಗೂ 3000 ಆಡು ಭಾಷೆಗಳಿರುವುದು 1971ರ ಜನಗಣಿತಿ ಪ್ರಕಾರ ತಿಳಿದುಬಂದಿದೆ. ಜಗತ್ತಿನ ಅರ್ಧಕ್ಕಿಂತ ಹೆಚ್ಚು ಭಾಷೆಗಳನ್ನು ಪಡೆದಿರುವ ಭಾರತವು ವಿಶ್ವದ ಒಂದು ಅಪೂರ್ವ ವಸ್ತು ಸಂಗ್ರಹಾಲಯ ವೆನಿಸಿದೆ ಎಂಬುದನ್ನು ಬಣಕಾರರು ತಮ್ಮ ಗ್ರಂಥದಲ್ಲಿ ತಿಳಿಸಿದ್ದಾರೆ. ಆದರೆ ಇಷ್ಟೊಂದು ಭಾಷೆಗಳನ್ನು ಸೃಷ್ಟಿಸಿದವರು ಯಾರು? ದೇವರು ಜಗತ್ತನ್ನು ಸೃಷ್ಟಿಸಿದ್ದು ಒಂದು ಅದ್ಭುತವೆನಿಸಿದರೆ, ಮಾನವನು ಭಾಷೆಯನ್ನು ಸೃಷ್ಟಿಸಿದ್ದು ಒಂದು ಅತ್ಯದ್ಭುತ ವಲ್ಲವೆ? ಎಂಬುವುದು ಬಣಕಾರರ ಆಲೋಚನೆ ಇದನ್ನು ನೊಡಿಕೊಂಡಾಗ ಬಣಕಾರರ ಆಲೋಚನೆಯ ದೂರದೃಷ್ಠಿಗೆ ಪಾರವೇ ಇಲ್ಲದಂತಿರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ. ಇದನ್ನೇ ಮೂಲ ವಸ್ತುವನ್ನಾಗಿರಿಸಿಕೊಂಡ ಬಣಕಾರರಿಗೆ 'ಆಡಳಿತದಲ್ಲಿ ಕನ್ನಡವೇ ಏಕೆಬೇಕು?' ಎಂಬಗ್ರಂಥ ರಚಿಸುವಲ್ಲಿ ಸಹಕಾರಿಯಾಗಿವೆ.

ಇಂಥಹ ಮೂಲಮಾಧ್ಯಮವಾದ ಭಾಷೆಯನ್ನು ಮಾನವನು ಕಂಡು ಕೊಂಡ ಮೇಲೆ ತಾನಿರುವ ಜಗತ್ತು, ದೇಶ ಎಲ್ಲವನ್ನು ಸುತ್ತಿ ಸಂಪೂರ್ಣಪರಿಚಯಿಸಿ ಕೊಳ್ಳುತ್ತಾನೆ. ಹೀಗೆ ಭಾಷೆಯ ಮೂಲಕ ತನ್ನೆಲ್ಲ ಅಭಿವ್ಯಕ್ತಿಗಳನ್ನು ವಿನಿಯೋಗಿಸಿಕೊಂಡು ಪರಿಪೂರ್ಣನಾಗುತ್ತಾನೆ. ಪ್ರತಿಯೊಬ್ಬ ಮಾನವನ

ಸರ್ವಾಂಗೀಣ ಅಭಿವೃದ್ಧಿಗೆ ಭಾಷೆಯೊಂದೇ ಪ್ರಬಲ ಸಾಧನವಾಗಿರುತ್ತದೆ ಎಂಬುದನ್ನು ಬಣಕಾರರು ತಮ್ಮ ಈ ಒಂದು ಗ್ರಂಥದಲ್ಲಿ ಅರ್ಥಪೂರ್ಣವಾಗಿ ವ್ಯಕ್ತಪಡಿಸಿದ್ದಾರೆ.

ಇನ್ನೊಂದು ಪ್ರಮುಖ ಅಂಶವೆಂದರೆ ಜನತೆ ಮತ್ತು ಆಡಳಿತಕ್ಕೆ ಮಧುರ ಬಾಂಧವ್ಯ ಏರ್ಪಾಡಾಗಬೇಕಾದರೆ ಭಾಷೆಯ ಮೂಲಕವೇ ಹೊರತು ಕಾನೂನಿನಿಂದ ಸಾಧ್ಯವಿಲ್ಲ. ಎಂಬುದನ್ನು ಬಣಕಾರರು ಬರವಣಿಗೆಯ ಮೂಲಕ ಭಾಷೆಯ ಪ್ರಾಮುಖ್ಯತೆಯ ಕುರಿತು ಆಡಳಿತಕ್ಕೆ, ಜನತೆಗೆ ಮನವರಿಕೆ ಮಾಡಿಕೊಟ್ಟಿದ್ದು ಶ್ಲಾಘನೀಯವಾದದ್ದು.

ಪ್ರತಿಯೊಬ್ಬ ವ್ಯಕ್ತಿಯು ಪ್ರಗತಿ ಕಾಣಬೇಕೆಂದರೆ ತಾನು ಯಾವ ಪರಿಸರದಲ್ಲಿ ಬೆಳೆದು ನೈಸರ್ಗಿಕವಾಗಿ ಕಲಿತುಕೊಂಡಿರುವನೋ ಅಂತಹ ಭಾಷೆಯನ್ನು ಮೂಲವಾಗಿಟ್ಟುಕೊಂಡು ಬದುಕಿ ಬಾಳಬೇಕಾಗುತ್ತದೆ. ಎಂಬುದು ಇಲ್ಲಿ ಗಮನಿಸಬೇಕಾದ ಪ್ರಮುಖ ಅಂಶವಾಗಿರುತ್ತದೆ ಅಂತೆಯೇ ಜನ್ಮವನ್ನು ಕೊಟ್ಟು ರಕ್ಷಿಸಿದ ತಾಯಿಗೆ ಮಾತ್ರ ಎನ್ನುವಂತೆ ಬದುಕಿನ ಜೀವಾಳವಾಗಿ ಪರಿಣಮಿಸಿದ ಭಾಷೆಗೆ 'ಮಾತೃಭಾಷೆ' ಎನ್ನಬೇಕಾಗುತ್ತದೆ ಎಂಬುದನ್ನು ಗ್ರಂಥದಲ್ಲಿ ಶ್ರೀ ಬಣಕಾರರು ಸ್ವಾರಸ್ಯಕರವಾಗಿ ವಿವರಿಸಿದ್ದಾರೆ.

ಪದೇಪದೇ ಅನಾರೋಗ್ಯಕ್ಕೆ ತುತ್ತಾಗುತ್ತಿದ್ದ ಬಣಕಾರರು ತಮ್ಮ ಆರೋಗ್ಯದ ಕಡೆ ಲಕ್ಷ್ಯವಹಿಸದೇ ಕನ್ನಡಿಗರಲ್ಲಿ ಭಾಷಾಭಿಮಾನದ ಬಗ್ಗೆ ಜಾಗೃತಿಯನ್ನುಂಟು ಮಾಡಿದರು. ಇಡೀ ದೇಶವನ್ನು ಸುತ್ತಿ ಗಡಿ–ನಾಡು–ಭಾಷೆಗೆ ಸಲ್ಲಿಸಿದ ಸೇವೆ ಅನುಪಮವಾದದ್ದು.

ಪ್ರಜೆ ಪ್ರಜೆಗಳಿಂದ ಪ್ರಜೆಗಳಿಗಾಗಿ ಆಡಳಿತ ನಡೆಸುವ ಸರಕಾರಗಳು, ಜನತೆಯ ಭಾಷೆಯಲ್ಲಿಯೇ ಆಡಳಿತವನ್ನು ನಡೆಸಬೇಕಾಗುತ್ತದೆ. ಹೀಗೆ ನಡೆಸದೇ ಹೋದರೆ ರಾಜ್ಯ ಸರ್ಕಾರದ ಬಗ್ಗೆ ಜನತೆಯ ಅಭಿಮಾನ ಮೂಡಲಿಕ್ಕೆ ಸಾಧ್ಯವೇ ಇಲ್ಲ ಎಂಬುದು ಬಣಕಾರರ ಚಿಂತನೆಯಾಗಿದೆ. ಪ್ರಾದೇಶಿಕ ಭಾಷೆಯಲ್ಲದೆ ಬೇರೊಂದು ಭಾಷೆಯಲ್ಲಿ ಸರಕಾರ ಆಡಳಿತ ನಡೆಸುವುದಾದರೆ, ಭಾಷೆ ಬಾರದ ಮುಗ್ಧ ಜನತೆಗೆ ತಾವು ಯಾರದೋ ಪರಕೀಯರ ಪರದಾಸ್ಯದಲ್ಲಿ ಸಿಕ್ಕಿ ಬಿದ್ದಿದ್ದೇವೆ ಎಂಬುದು ಅರ್ಥವಾಗದೇ ಇರದು. ಆಕಾರಣಕ್ಕಾಗಿ ಆಡಳಿತದ ಬಗ್ಗೆ ಶ್ರೀ ಸಾಮಾನ್ಯರ ನಂಬಿಕೆಯು ಹುಟ್ಟಬೇಕಾದರೆ ಅವರಾಡುವ ಭಾಷೆಯ ಮೂಲಕವೇ ರಾಜ್ಯದ ಆಡಳಿತ ನಡೆಯಬೇಕು ಇದು ನಿಜವಾದ ಪ್ರಭುತ್ವ ಎಂಬುದು ಬಣಕಾರರ ಈ ಗ್ರಂಥದ ಮೂಲಕ ತಿಳಿದು ಬರುತ್ತದೆ.

ಅನೇಕ ಮುಂದುವರೆದ ದೇಶಗಳು ಈ ಕ್ರಮವನ್ನು ಅನುಸರಿಸಿ ಪ್ರಗತಿ ಕಂಡಿವೆ, 200ಕ್ಕೂ ಚಿಕ್ಕ ರಾಷ್ಟ್ರಗಳನ್ನು ಹೊಂದಿರುವ ರಷ್ಯಾದೇಶವು ಇದಕ್ಕೆ ಹೆಸರುವಾಸಿಯಾಗಿ ಪ್ರಗತಿ ಕಂಡುಕೊಂಡಿದೆ.

ಬಹುತೇಕವಾಗಿ ಭಾರತ ದೇಶದ ಎಲ್ಲ ರಾಜ್ಯಗಳಲ್ಲಿಯೂ ಪ್ರಾದೇಶಿಕ ಭಾಷೆಯನ್ನು ಆಡಳಿತ ಭಾಷೆಯನ್ನಾಗಿ ಕಾರ್ಯರೂಪಕ್ಕೆ ತಂದು ಕೊಂಡಿದ್ದು ಗಮನಾರ್ಹವಾಗಿದೆ. ಆದರೆ ಕರ್ನಾಟಕ ಮಾತ್ರ ತಡವಾಗಿ ಈ ತೀರ್ಮಾನಕ್ಕೆ ಬಂದರೂ ಸಂಪೂರ್ಣ ಕಾರ್ಯಗತವಾಗದಿರುವುದು ಬಣಕಾರರನ್ನು ಘಾಸಿಗೊಳಿಸಿತ್ತು. ಕನ್ನಡ ಭಾಷೆಯನ್ನು ಆಡಳಿತ ಭಾಷೆಯನ್ನಾಗಿರಸಬೇಕೆಂದು ಬಣಕಾರರು ಸಾಕಷ್ಟು ಹೋರಾಟಗಳನ್ನು ಮಾಡಿದರು.

1963ರಲ್ಲಿಯೇ ಕರ್ನಾಟಕ ರಾಜ್ಯವು ಕನ್ನಡ ಭಾಷೆಯನ್ನು ಆಡಳಿತ ಭಾಷೆ ಎಂಬುದನ್ನು ಒಪ್ಪಿಕೊಂಡಿದ್ದರೂ ಸಹಿತ 1986ರ ವರೆಗೆ ಮಂದಗತಿಯಲ್ಲಿ ಮುಂದುವರೆದಿತ್ತು. ಆಡಳಿತ ನಡೆಸುವ ರಾಜ್ಯ ಸರಕಾರದಿಂದ ನೂರಾರು ಆದೇಶಗಳು ಹೊರಬಿದ್ದರೂ ಅವೆಲ್ಲವೂ ಕಾಗದದ ಮೇಲೆ ಉಳಿದುಕೊಂಡಿದ್ದವು ಎಂಬುದರಲ್ಲಿ ಎರಡು ಮಾತಿಲ್ಲ.

ಹೀಗಿರುವಾಗ ಕನ್ನಡ ಭಾಷೆಯನ್ನು ರಾಜ್ಯದಲ್ಲಿ ಆಡಳಿತ ಭಾಷೆಯನ್ನಾಗಿರಿಸಲು ಅಧಿಕಾರಿಗಳು ಮುಂದೆ ಬರಬೇಕೆಂದು, ಅಲಕ್ಷ್ಯ ತೋರಿದ ಅಧಿಕಾರಿಗಳು ಯಾರೇ ಇರಲಿ ಉಗ್ರಕ್ರಮ ಕೈಗೊಳ್ಳಲಾಗುವುದು ಎಂಬ ಎಚ್ಚರಿಕೆಯ ಕಟ್ಟುನಿಟ್ಟಿನ ಆದೇಶವನ್ನು ಸರಕಾರ ಅಧಿಕಾರಿಗಳಿಗೆ ನೀಡಿತು.

ಮುಂದೆ ಆಡಳಿತದ ಎಲ್ಲ ಹಂತಗಳಲ್ಲಿ ಕನ್ನಡವನ್ನು ಅನುಷ್ಠಾನಗೊಳಿಸಲು ಹಂತ ಹಂತವಾಗಿ ಆದೇಶಗಳನ್ನು ನೀಡಿ ಅಧಿಕಾರಿಗಳನ್ನು ಎಚ್ಚರಿಸುತ್ತಾ ಬಂದಿದ್ದು, ಆಗಬೇಕಾದಷ್ಟು ಪ್ರಗತಿಕಾಣದೇ ಇರುವುದಕ್ಕೆ ಬಣಕಾರರು 15 ಪ್ರಮುಖ ಕಾರಣಗಳನ್ನು ಉಲ್ಲೇಖಿಸಿದ್ದಾರೆ.

ಆಡಳಿತದಲ್ಲಿ ಕನ್ನಡಕ್ಕೆ ಆಗಿರುವ ಅಡ್ಡಿಆತಂಕಗಳನ್ನು ಬಣಕಾರರು ಎಳೆ ಎಳೆಯಾಗಿ ಈ ಗ್ರಂಥದಲ್ಲಿ ಬಿಚ್ಚಿಟ್ಟಿದ್ದಾರೆ. ಹದಿನೈದು ಪ್ರಮುಖ ಕಾರಣಗಳನ್ನು ಇಲ್ಲಿ ವಿಮರ್ಶಿಸುತ್ತಾ ಹೋದರೆ ಮತ್ತೊಂದು ಕೃತಿ ರಚಿಸಿದಂತೆ ಆಗಿಬಿಡುತ್ತದೆ. ಆ ಕಾರಣಕ್ಕಾಗಿ ಕೆಲವೇ ಕೆಲವು ಕಾರಣಗಳನ್ನು ವಿಮರ್ಶಿಸಲಾಗಿದ

ಭಾಷೆಗಳ ಹಿತ ರಕ್ಷಣೆಯಲ್ಲಿ ರಾಜಕಾರಣಿಗಳ ಮತ್ತು ಅಧಿಕಾರಿಗಳ ಪಾತ್ರ ಹಿರಿದಾಗಿರುವುದರಿಂದ, ರಾಜಕೀಯ ವ್ಯಕ್ತಿಗಳು ತಮ್ಮ ಸ್ವಾರ್ಥಕ್ಕಾಗಿ ದೇಶ, ಭಾಷೆಗಳ

ಹಿತರಕ್ಷಣೆಗಳನ್ನು ಮಣ್ಣುಗೂಡಿಸಿದ್ದಾರೆ. ಅಲ್ಲದೇ ರಾಜ್ಯದಲ್ಲಿರುವ ಭಾಷಾ ಅಲ್ಪ ಸಂಖ್ಯಾತರನ್ನು ಎತ್ತಿಕಟ್ಟುವ ಮೂಲಕ ಮತಬ್ಯಾಂಕ್‌ನ್ನಾಗಿರಿಸಿ ಕೊಳ್ಳುವ ಹೀನಕೃತ್ಯವನ್ನು ಮುಂದುವರಿಸುತ್ತಲೇ ಬಂದಿದ್ದಾರೆ. ಇದೊಂದು ಆತಂಕಕಾರಿ ಬೆಳವಣಿಗೆ ಎಂದು ಕರೆಯದೇ ಇನ್ನೊಂದು ಮಾತಿಲ್ಲ. ಪ್ರಸ್ತುತ ರಾಜಕೀಯ ವಿದ್ಯಮಾನಗಳ ಹಾಗೂ ಅಧಿಕಾರಿಗಳ ದೂರಾಲೋಚನೆಯ ಮಧ್ಯದಲ್ಲಿ ಇದು ನಿಲ್ಲುವ ಲಕ್ಷಣಗಳು ಕಂಡು ಬರುತ್ತಿಲ್ಲ. ಈ ಕಾರಣವು ಮುಖ್ಯವೆನಿಸಿದರೆ ಅಧಿಕಾರಿಗಳು ಈ ಸಂಧರ್ಬದಲ್ಲಿ ಒಂದು ವಿಚಿತ್ರ ವರ್ಗಕ್ಕೆ ಸೇರಿದವರಾಗಿದ್ದಾರೆ. ಕನ್ನಡದಲ್ಲಿ ವ್ಯವಹರಿಸುವುದಾದರೆ ಅದೊಂದು ಅವಮಾನ ಎನ್ನುವಂತಿರುವ ಅಧಿಕಾರಿಗಳು ಕನ್ನಡ ವೆಂದರೆ ಮೂಗುಮುರಿಯುತ್ತಿದ್ದಾರೆ. ಬಟ್ಲರ್ ಇಂಗ್ಲೀಷ್‌ನಲ್ಲಿ ವ್ಯವಹರಿಸುವುದು ಅವರಿಗೆ ಅಭ್ಯಾಸವಾಗಿದೆ ಹೊರತು ಕನ್ನಡದಲ್ಲಿ ವ್ಯವಹರಿಸುವ ಪ್ರಯತ್ನಕ್ಕೆ ಕೈಹಾಕಿದವರಲ್ಲ ಇಂಥಹ ಅಧಿಕಾರಿಗಳಿಗೆ ಇಂಗ್ಲೀಷ್ ಪಾಂಡಿತ್ಯ ಎಷ್ಟರ ಮಟ್ಟಿಗೆ ಇತ್ತು ಎಂಬುದನ್ನು ಬಣಕಾರರ ಬರವಣಿಗೆಯಿಂದಲೇ ತಿಳಿದುಕೊಳ್ಳಲೇಬೇಕಾಗಿದೆ.

ಈ ಫೈಲು ಎಲ್ಲಿದೆ? ಎಂದು ಮೇಲಾಧಿಕಾರಿಗಳು ಕೇಳಿದ್ದಕ್ಕೆ It is in motion ಎಂದು ಉತ್ತರಿಸಿದ ಅಧಿನ ಕಾರ್ಯದರ್ಶಿಗಳು ಇದ್ದಾರೆ. ಇನ್ನೊಂದು ಗಮನಿಸಬೇಕಾಗಿದ್ದು ಎನೆಂದರೆ ಗುಮಾಸ್ತನೂಬ್ಬ ತನ್ನ ಹೆಂಡತಿಯ ಆರೋಗ್ಯ ಸರಿ ಇಲ್ಲದಿರುವ ಪ್ರಯುಕ್ತ ರಜೆಯನ್ನು ಬೇಡಿ ಮೇಲಾಧಿಕಾರಿಗಳಿಗೆ I am the only husaband at my home ಎಂದು ಬರೆದ ಅನೇಕ ದೃಷ್ಟಾಂತಗಳು ಇರುವುದನ್ನು ಬಣಕಾರರು ಎತ್ತಿತೋರಿಸಿ, ಈ ರೀತಿಯ ಭಾಷಾಂತರಕ್ಕೆ ನಗಬೇಕೊ ಅಳಬೇಕೊ ಅರ್ಥವಾಗದಿರುವ ನಿಟ್ಟಿನಲ್ಲಿ ಬಣಕಾರರು ವ್ಯಥೆ ಪಟ್ಟು ಮಾನಸಿಕವಾಗಿ ನೊಂದುಹೋಗಿದ್ದಾರೆ.

ಈ ರೀತಿಯ ಇಂಗ್ಲೀಷ್ ಪಾಂಡಿತ್ಯದ ಜನ ಒಂದುರೀತಿಯಾದರೆ ಇನ್ನೂ ಪರ್ಸನಲ್ ಸೆಕ್ರೆಟರಿಗಳು ಇನ್ನೊಂದು ರೀತಿ, ಹೊರ ರಾಜ್ಯಗಳಿಂದ ಬಂದವರು ಸ್ವಾಭಾವಿಕವಾಗಿಯೇ ಕನ್ನಡ ತಿಳಿಯದಿರಬಹುದು. ಆದರೆ ಸ್ವಇಚ್ಛೆಯಿಂದ ಆಯ್ದುಕೊಂಡ ರಾಜ್ಯಗಳಲ್ಲಿಯಾದರೂ ಆಭಾಷೆಯನ್ನು ಕಲಿತುಕೊಳ್ಳಲು ಬಹುದಿತ್ತು. ಆದರೆ ಕನ್ನಡ ಕಲಿಕೆಯಲ್ಲಿ ಆಸಕ್ತಿವಹಿಸದೆ ಮನಸುಮಾಡಲಿಲ್ಲ. ಇತ್ತೀಚಿಗೆ ಹೋರ ರಾಜ್ಯದ ಬಹುತೇಕ ಜನ ವ್ಯವಹಾರಕ್ಕೆಂದು ಅಲ್ಪ ಸ್ವಲ್ಪ ಕನ್ನಡ ಕಲಿಯುತ್ತಿದ್ದಾರೆ ಆದರೆ ದುರ್ದೈವವೆಂಬಂತೆ ಐ.ಎ.ಎಸ್ ಮತ್ತು ಕೆ.ಎ.ಎಸ್ ಅಧಿಕಾರಿಗಳು ಕನ್ನಡವನ್ನು ಹೀನಾಯವಾಗಿ ಕಂಡತೆ ನಟಿಸುತ್ತಿದ್ದಾರಲ್ಲದೆ ಕನ್ನಡದಲ್ಲಿ ಮಾತನಾಡಿದರೆ ಕನ್ನಡಕ್ಕೆ ಮೈಲಿಗೆ ಆದಿತೆಂಬ ಚಿಂತೆ ಅವರಲ್ಲಿದೆ. ಕಛೇರಿ ಟಿಪ್ಪಣಿಗಳನ್ನು

ಇಂಗ್ಲೀಷ್‌ನಲ್ಲಿಟ್ಟುಕೊಂಡು ಆದೇಶಗಳನ್ನು ಮಾತ್ರ ಕನ್ನಡದಲ್ಲಿ ಹೊರಡಿಸಿ ಪ್ರಯಾಸದಿಂದ ಕೆಳಗೆ ಕನ್ನಡದಲ್ಲಿ ಸಹಿಮಾಡುವುದು ಸ್ವಾಭಾವಿಕವಾಗಿರುತ್ತದೆ.

ಈ ರೀತಿಯ ಅಧಿಕಾರಿಗಳ ಕುತಂತ್ರಕ್ಕೆ ಕಡಿವಾಣಹಾಕಲೆಂದೇ ಬಣಕಾರರು ಇನ್ನು ಮುಂದೆ ಅಧಿಕಾರಿಗಳು, ಕನ್ನಡಕಲಿಯದಿದ್ದರೆ, ಆಡಳಿತದಲ್ಲಿ ಕನ್ನಡವನ್ನು ಕಡ್ಡಾಯವಾಗಿ ಬಳಸದಿದ್ದರೆ ಗತ್ಯಂತರವಿಲ್ಲ ಎಂಬ ಸಂದೇಶವನ್ನು ಅಧಿಕಾರಿಗಳಿಗೆ ಮುಟ್ಟಿಸಿದ್ದಾರೆ.

ಅಲ್ಲದೆ ಅಧಿಕಾರಿಗಳು ಕನ್ನಡದಲ್ಲಿ ಕಾವ್ಯವನ್ನು ಬರೆಯಬೇಕಾಗಿಲ್ಲ. ಆಡಳಿತಾತ್ಮಕ ವ್ಯವಹಾರಕ್ಕೆ ಅಗತ್ಯವಿರುವ ಕನ್ನಡಭಾಷಾ ಜ್ಞಾನವಿರಲೇಬೇಕೆಂದು ಅಧಿಕಾರಿಗಳನ್ನು ಅವರು ಎಚ್ಚರಿಸಿದ್ದಾರೆ. ಭಾಷಾಭಿಮಾನದ ಬಗ್ಗೆ ಅಪಾರ ಕಾಳಜಿಯನ್ನು ಹೊಂದಿದ ಬಣಕಾರರು ಭಾಷೆಗೂ ಮತ್ತು ಆಡಳಿತಕ್ಕೆ ಇರುವ ಸಂಬಂಧವನ್ನು ಪ್ರತ್ಯೇಕವಾಗಿ ಈ ಗ್ರಂಥದಲ್ಲಿ ವಿವರಿಸಿದ್ದಾರೆ.

ಕನ್ನಡ ಕಲಿಯಬೇಕಾದರೆ ಅಧಿಕಾರಿಗಳಲ್ಲಿ ಮನಸ್ಸು ಮುಖ್ಯ, ಇದಕ್ಕೆ ನಿದರ್ಶನವೆಂಬಂತೆ ರೆ.ರಿಡ್ ಎಂಬ ಪಾದ್ರಿಯು ಐದೇ ಐದು ವಾರದಲ್ಲಿ ಕನ್ನಡವನ್ನು ಕಲಿತು ಪಟ್ಯ ಪುಸ್ತಕವನ್ನು ಬರೆದು ಇತರರನ್ನು ಚಕಿತಗೊಳಿಸಿದ್ದು ಒಂದು ಇತಿಹಾಸವೇ ಸರಿ. ಅಷ್ಟೆ ಅಲ್ಲದೆ ಪಾದ್ರಿಯು  ತನ್ನ ದಿನಚರಿಯಲ್ಲಿ ಐದುಸಾವಿರ ಪುಸ್ತಕಗಳನ್ನು ಬರೆದು ಸಾದರಪಡಿಸಿದ್ದಾರೆ ಅಲ್ಲದೆ ಮೈಸೂರ ಇತಿಹಾಸವನ್ನು ಬಿ.ಎಲ್.ರೈಸ್ ಎಂಬುವರು ಏಳು ತಿಂಗಳುಗಳಲ್ಲಿ ಕನ್ನಡವನ್ನು ಕಲಿತು ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಇವೆಲ್ಲವುಗಳನ್ನು ಅಧಿಕಾರಿಗಳು ಮುಖ್ಯವಾಗಿ ಗಮನಿಸಬೇಕಾಗಿದೆ. ಆಡಳಿತದಲ್ಲಿ ಇಂಗ್ಲೀಷ್ ಭಾಷೆಯ ಅವಶ್ಯಕತೆಯನ್ನು ಬ್ರಿಟಿಷ್ ಅಧಿಕಾರಿಗಳು ಸಂಪರ್ಕ ಭಾಷೆಯನ್ನಾಗಿಟ್ಟುಕೊಂಡಿದ್ದರು. ಪ್ರಾದೇಶಿಕ ಮಟ್ಟದಲ್ಲಿ ಪ್ರಾದೇಶಿಕ ಭಾಷೆಯೇ ಎಲ್ಲ ಕ್ಷೇತ್ರಗಳಲ್ಲಿ ಇರಬೇಕೆಂಬುದು ಬ್ರಿಟಿಷರ ಅಭಿಪ್ರಾಯವಾಗಿತ್ತು.

ಕನ್ನಡವನ್ನು ಅರಿಯದ ಆಂಗ್ಲರು ನಮ್ಮ ರಾಜ್ಯದ ಆಡಳಿತದ ಚುಕ್ಕಾಣಿ ಹಿಡಿದುಕೊಂಡ ಮೇಲೆ ಭಾಷೆಯ ವಿಷಯದಲ್ಲಿ ತಮಗಾದ ತೊಂದರೆಯನ್ನು ಪರಿಗಣಿಸಿ ಆಡಳಿತಭಾಷೆಯಾಗಿ ಕನ್ನಡವನ್ನೇ ಬಳಸಿದರು ಅವರಿಗೆ ಸಾದ್ಯವಾದ ಈ ಕಾರ್ಯ ಕನ್ನಡ ನಾಡಿನಲ್ಲಿ ಹುಟ್ಟಿ ಬೆಳೆದವರಿಗೆ ಇನ್ನೂವರೆಗೂ ಏಕೆ ಸಾದ್ಯವಾಗಲಿಲ್ಲ ಎಂಬುದು ಇನ್ನೂ ಯಕ್ಷಪ್ರಶ್ನೆಯಾಗಿ ಉಳಿದಿದೆ. ಅಧಿಕಾರಿಗಳು, ರಾಜಕೀಯ ಮುಖಂಡರು, ನಾಡಿನ ಚಿಂತಕರು ಕನ್ನಡಭಾಷೆಯ ಸಮಗ್ರ ಬೇಳವಣಿಗೆಗೆ

ಆಲೋಚಿಸಬೇಕಾದ ಅನಿವಾರ್ಯತೆ ಇದೆ ಎಂಬುದನ್ನು ಈ ಕೃತಿ ಮೂಲಕ ಬಣಕಾರರು ವ್ಯಕ್ತಪಡಿಸಿದ್ದಾರೆ. ಒಟ್ಟಾರೆಯಾಗಿ ಕನ್ನಡವೇ ಸತ್ಯ, ಕನ್ನಡವೇ ನಿತ್ಯ, ಕನ್ನಡವೇ ಸರ್ವಸ್ವ ಕನ್ನಡವೇ ಅವರ ಉಸಿರು ಎಂಬುದು ಧ್ಯೇಯವಾಗಿತ್ತು ಬದುಕೇ ಕನ್ನಡವಾಗಿ ಕನ್ನಡವನ್ನೇ ಬದುಕಾಗಿರಿಸಿದ ಬಣಕಾರರಿಗೆ ಬಣಕಾರರೆ ಸಾಟಿಯಂತಿದ್ದರು ಎಂದರೆ ತಪ್ಪಾದಿತೇ?.

## ವಚನ ಶ್ರೇಷ್ಠ ಶ್ರೀ ಬಣಕಾರ :

ಹನ್ನೆರಡನೇ ಶತಮಾನದಲ್ಲಿ ಮೂಡಿಬಂದ ವಚನ ಸಾಹಿತ್ಯವು ಕನ್ನಡ ಸಾಹಿತ್ಯದಲ್ಲಿ ತನ್ನದೇ ಆದ ಮೌಲ್ಯವನ್ನು ಕಂಡುಕೊಂಡಿದೆ. ಒಂದು ಸಾಮಾಜಿಕ ಹಾಗೂ ಧಾರ್ಮಿಕ ಆಂದೋಲನ ಪ್ರಕ್ರಿಯೆಯಾಗಿ ಈ ವಚನ ಸಾಹಿತ್ಯ ಸುಗಮವಾಗಿ ಉಗಮವಾಯಿತೆಂದು ಹೇಳಬಹುದಾಗಿದೆ.

ಕೀರ್ತಿ, ಪ್ರತಿಷ್ಠೆಯನ್ನು ದೂರವಿಟ್ಟುಕೊಂಡು ತಾವು ಕೈಗೊಂಡ ಧಾರ್ಮಿಕ, ಸಾಮಾಜಿಕ, ಸಾಹಿತ್ಯ ಕ್ರಾಂತಿಗಳನ್ನು ಮೈಗೂಡಿಸಿಕೊಂಡು ರಾಜಾಶ್ರಯವನ್ನೇ ಮರೆತು ಆಡು ನುಡಿಯಲ್ಲಿ ಅಚ್ಚ ಕನ್ನಡದೊಂದಿಗೆ ಬಣಕಾರರು ವಚನಗಳನ್ನು ರಚಿಸಿದವರು. ಇವರ ಕಾಯಕ ನಿಷ್ಠೆಯಿಂದಲೇ ಬಸವಾದಿ ಶರಣರ ವಚನಸಾಹಿತ್ಯ ಸುಲಲಿತವಾಗಿ ಹೊರಹೊಮ್ಮಿತು.

ಹನ್ನೆರಡನೇ ಶತಮಾನದಲ್ಲಿ ವಚನ ಸಾಹಿತ್ಯ ರೂಪಗೊಳ್ಳದಿದ್ದರೆ ಸಾಮಾಜಿಕ ಸ್ಥಿತಿಗತಿಗಳು ಎಂದೂ ಸುಧಾರಿಸುತ್ತಿರಲಿಲ್ಲ ಇದೂ ಒಂದು ಕಾರಣವಾದರೆ ಹನ್ನೊಂದನೇ ಶತಮಾನದಲ್ಲಿ ಕನ್ನಡನಾಡಿನ ವಾತಾವರಣ ರಾಜಕೀಯವಾಗಿ, ಸಾಮಾಜಿಕವಾಗಿ ಹಾಗೂ ಧಾರ್ಮಿಕವಾದ ವಿಚಾರಗಳಿಂದ ಕಲುಷಿತಗೊಂಡಿತ್ತು. ಅಂದಿನ ರಾಜ ಮಹಾರಾಜರು ಸಮಾಜದ ಅತಿಕೆಳವರ್ಗದ ಜನರ ಏಳ್ಗೇಯ ಕಡೆಗೆ ಗಮನಹರಿಸಲಿಲ್ಲ. ಅಲ್ಲದೆ ಅಸಮಾನತೆ ವೈಷಮ್ಯಗಳು ಬೇರೂರಿಕೊಂಡಿದ್ದವು. ಧರ್ಮದ ಹೆಸರಿನಲ್ಲಿ ನೂರಾರು ಅಂಧ ಶ್ರದ್ಧೆಗಳು ಮನೆಮಾಡಿ ಕೊಂಡಿದ್ದವು. ಈ ಎಲ್ಲ ಸಾಮಾಜಿಕ ಅಸಮಾನತೆ ಹುಟ್ಟುಕ್ರಾಂತಿ ಬಸವಣ್ಣನವರ ಮೇಲೆ ಪ್ರಭಾವ ಬೀರಿದವು.

ಅಜ್ಞಾನ ಅಂಧಕಾರದಲ್ಲಿರುವ ಸಮಾಜವನ್ನು ಮೇಲ್ಪಂತಿಗೆ ತರಬೇಕೆಂಬ ಬಸವಾದಿ ಶರಣರ ಹೋರಾಟ ಮೆಚ್ಚುವಂತಹದ್ದು. ಅನೇಕ ಕ್ರಾಂತಿಗಳನ್ನು ಹುಟ್ಟು ಹಾಕುವುದರ ಮುಖಾಂತರ ಜನರಲ್ಲಿ ಜಾಗೃತಿಯನ್ನುಂಟುಮಾಡಿದರು.

ಬಸವಣ್ಣನವರ ವೈಚಾರಿಕ ಕ್ರಾಂತಿಗೆ ಮನಸೋತು ನಾಡಿನ ಸಹಸ್ರಾರು ಜನರು ಆಧ್ಯಾತ್ಮಮಾರ್ಗದಲ್ಲಿ ಮುಂದೆ ಸಾಗಿದರು. ವಚನ ಸಾಹಿತ್ಯದಲ್ಲಿ ವಚನಕಾರರು ಅಧ್ಯಾತ್ಮದ ಗಹನ ವಿಚಾರಗಳನ್ನು, ತತ್ವ ಸಿದ್ಧಾಂತಗಳನ್ನು ಸಾಮಾನ್ಯ ಜನರಿಗೆ ತಿಳಿಯುವಂತೆ ನಿರೂಪಿಸಿದ್ದಾರೆ. ಅಂದಿನ ಸಮಾಜದಲ್ಲಿ ಡಾಂಭಿಕತೆ, ಮೂಢನಂಭಿಕೆಗಳನ್ನು ವಿಡಂಬಿಸುತ್ತಾ ವಚನಗಳ ಮೂಲಕ ಸಮಾಜವನ್ನು ತಿದ್ದಲು ಪ್ರಯತ್ನಿಸಿದ್ದಾರೆ. ಈ ಹಿನ್ನೆಲೆಯಲ್ಲಿ ವಚನ ಸಾಹಿತ್ಯ ರಚನೆಯ ಕೇಂದ್ರಬಿಂದು ಧಾರ್ಮಿಕ ನೆಲಗಟ್ಟಿನೊಳಗೆ ಸಾಮಾಜಿಕ ಕಳಕಳಿಯದ್ದಾಗಿದೆ.

'ವಚನ' ಎಂಬ ಮೂರಕ್ಷರ ಪದ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಕಾಲಮಾನಕ್ಕೆ ಅನುಗುಣವಾಗಿ ವಿಭಿನ್ನ ರೀತಿಯಲ್ಲಿ ಪ್ರಯೋಗ ಗೊಳ್ಳುತ್ತಾಬಂದಿದೆ. 'ವಚನ' ಪದವು ಬಸವಾದಿಶರಣರಲ್ಲಿ ಅರ್ಥಪೂರ್ಣವಾಗಿ ಬಳಕೆಗೊಂಡಿದೆ. ಶರಣರ ಅಭಿಪ್ರಾಯದಂತೆ 'ವಚನ' ಎಂದರೆ 'ಭಾಷೆಕೊಡು', 'ವಚನಕೊಡು', 'ವಾಗ್ದಾನಮಾಡು' ಎಂಬಂತೆ ಬಳಕೆ ಮಾಡಿದ್ದಾರೆ. ತಾವು ಹೇಳಿದ ಮಾತಿಗೆ ಬದ್ಧರಾಗಿದ್ದೇವೆ ಎಂದು ತಮ್ಮ ಆರಾಧ್ಯ ದೈವಕ್ಕೆ ತಮ್ಮ ಆತ್ಮಸಾಕ್ಷಿಗೆ ವಚನ ಕೊಟ್ಟಂತೆ ಎಂಬುದೇ ಇದರರ್ಥ. ಅಂತೆಯೇ ಶಿವ ಶರಣರು ನುಡಿದಂತೆ ನಡೆಯುತ್ತಿದ್ದರು ಹಾಗೇನಾದರೂ ನಡೆ–ನುಡಿಯಲ್ಲಿ ವ್ಯತ್ಯಾಸವಾದಲ್ಲಿ ತಮ್ಮ ತಲೆಯನ್ನೇ ದಂಡವನ್ನಾಗಿ ನೀಡುವುದಕ್ಕೆ ಸಿದ್ದರಾಗುತ್ತಿದ್ದರು ಎಂಬುದರಲ್ಲಿ ಎರಡು ಮಾತಿಲ್ಲ.

ಇಂಥಹ ವಚನ ಪ್ರಕಾರಕ್ಕೆ ರೂಪಕೊಟ್ಟವರು ಜೇಡರದಾಸಿಮಯ್ಯನವರಾದರೆ, ಇದನ್ನು ಬೆಳೆಸಿದವರು ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ, ಸಿದ್ಧರಾಮ ಹಾಗೂ ಚೆನ್ನಬಸವಣ್ಣನವರು.

12ನೇ ಶತಮಾನದಲ್ಲಿ ರಭಸವಾಗಿ ಹರಿದುಬಂದ ವಚನಸಾಹಿತ್ಯ ಕಲ್ಯಾಣ ಕ್ರಾಂತಿಯ ನಂತರದಲ್ಲಿ ವಚನಸಾಹಿತ್ಯ ಕ್ಷೀಣಿಸುತ್ತಾ ಸಾಗಿತ್ತು. ಮುಂದೆ ಇದರ ಪುನರುಜ್ಜೀವನ ಕಾರ್ಯ 15ನೇ ಶತಮಾನದಲ್ಲಿ ಪ್ರಾರಂಭವಾಯಿತು. ಇದೇ ಶತಮಾನದಲ್ಲಿ ಅಳಿದುಳಿದ ವಚನ ರಾಶಿಯನ್ನು ಹುಡುಕಿತೆಗೆದು, ಎಲ್ಲ ವಚನಗಳನ್ನು ಸಂಗ್ರಹಿಸಿ ಸಂಕಲನಗೊಳಿಸುವ ಕಾರ್ಯ ಮುಂದುವರೆಯಿತು. ಕಲ್ಯಾಣದ ವಾತಾವರಣ ಪುನರಾವರ್ತನೆಗೊಂಡು ನೂರಾರು ಶರಣರ ಶ್ರಮದ ಪರವಾಗಿ ಕನ್ನಡ ನಾಡಿನಲ್ಲಿ ಮತ್ತೊಮ್ಮೆ ಜಾಗೃತಿಯುಂಟಾಯಿತು.

ಮುಂದೆ ಮಠಾಧೀಶರ ಮತ್ತು ವಚನಕಾರರ ಅವಿರತ ಪರಿಶ್ರಮದಿಂದ ವಚನ ಸಾಹಿತ್ಯ ಬೆಳಕು ಕಂಡಿತು.

## ಆಧುನಿಕ ವಚನ ಸಾಹಿತ್ಯ :

ಆಧುನಿಕ ಯುಗದಲ್ಲಿಯು ಸಹ 12ನೇ ಶತಮಾನದ ವಚನಗಳ ಸುವ್ಯವಸ್ಥಿತ ಸಂಗ್ರಹ, ವಿಮರ್ಶೆ, ವಿಶ್ಲೇಷಣಾ ಕಾರ್ಯಗಳು ಭರದಿಂದ ನಡೆದಿದ್ದವು. ಅನೇಕ ಸಂಘ ಸಂಸ್ಥೆಗಳು ಹಾಗೂ ಮಠಮಾನ್ಯಗಳು ಅಲ್ಲದೆ ವಿಶ್ವವಿದ್ಯಾಲಯಗಳು ಸಹ ಈ ನಿಟ್ಟಿನಲ್ಲಿ ಮಾಡಿದ ಕಾರ್ಯ ಶ್ರೇಷ್ಠವಾದದ್ದು. ಇನ್ನೊಂದು ಹೆಮ್ಮೆಪಡಬೇಕಾದ ಅಂಶವೆನೆಂದರೆ ವಚನ ಸಾಹಿತ್ಯ ಇಂಗ್ಲೀಷ್ ಮತ್ತು ಫ್ರೆಂಚ್ ಭಾಷೆಗಳಲ್ಲಿ ಅನುವಾದಗೊಂಡು ಅಂತರಾಷ್ಟ್ರೀಯ ಮಟ್ಟದಲ್ಲಿ ಪರಿಚಯಿಸಲ್ಪಟ್ಟಿದೆ. ಜೊತೆಗೆ ವಚನ ಸೃಷ್ಠಿ ಸಮೃದ್ಧವಾಗಿ ನಡೆದದ್ದು ಇದರಿಂದ 12ನೇ ಶತಮಾನದ ನಂತರ ಮತ್ತೊಮ್ಮೆ ಸುವರ್ಣಯುಗವಾಗಿ ಹೊರಹೊಮ್ಮಿತು ಎನ್ನುವುದು ಕಟುಸತ್ಯ. ಆಧುನಿಕ ವಚನ ಸಾಹಿತ್ಯಕ್ಕೂ ಮತ್ತು ಅಂದಿನ ವಚನ ಸಾಹಿತ್ಯಕ್ಕೆ ಇರುವ ವ್ಯತ್ಯಾಸವನ್ನು ವಚನ ಸಾಹಿತ್ಯದಲ್ಲಿ ಆಸಕ್ತಿಹೊಂದಿದ, ಸಾಹಿತ್ಯದ ಪಾಂಡಿತ್ಯವನ್ನು ಮೈಗೂಡಿಸಿ ಕೊಂಡಿರುವ ಡಾ.ನೀಲಮ್ಮ ಕತ್ನಳ್ಳಿ ಯವರು ತಾವೇ ರಚಿಸಿದ "ಡಾ. ಮಹದೇವ ಬಣಕಾರರ ಕೃತಿಗಳು" ಎಂಬ ಪುಸ್ತಕದಲ್ಲಿ ಸ್ಪುಟವಾಗಿ ಗುರುತಿಸಿದ್ದಾರೆ ಅಂದಿನ ವಚನಗಳು ಸಮಷ್ಠಿಗತವಾದ ಸಮಾಜವನ್ನು ನಿರ್ಮಾಣಮಾಡುವ ಉದ್ದೇಶ ಹೊಂದಿದ್ದರೆ. ಇಂದಿನ ವಚನಗಳು ವ್ಯಕ್ತಿಗತವಾದ ಅಭಿವ್ಯಕ್ತಿ ಮಾಧ್ಯಮವಾಗಿದೆ ಎಂದು ಹೇಳಿದ್ದಾರಲ್ಲದೆ ಆಧುನಿಕ ವಚನಗಳಲ್ಲಿ ಪ್ರಾಚೀನ ಸಾಂಪ್ರದಾಯವು ಬೇರೂರಿಕೊಂಡಿದೆ ಎಂಬುದನ್ನು ಒಪ್ಪಬಹುದಾಗಿದೆ. ವಿಭಿನ್ನವೆಂಬಂತೆ ಆಧುನಿಕ ವಚನಗಳಲ್ಲಿ ಆಧುನಿಕತೆಯ ವಿಚಾರಧಾರೆಯಿದೆ, ಆತ್ಮಶೋಧನೆಯಿದೆ ಮತ್ತು ಮುಖ್ಯವಾಗಿ ವಾಸ್ತವಿಕತೆಯ ನೆಲೆಗಟ್ಟಿನಲ್ಲಿ ವೈಚಾರಿಕತೆಯಿಂದ ಕೂಡಿದೆ ಎಂಬುದು ಸ್ಪಷ್ಟವಾಗಿ ಕಾಣಿಸುತ್ತದೆ. ಪರಂಪರೆಗನುಗುಣವಾಗಿ 12ನೇ ಶತಮಾನದ ವಚನಗಳು ಹೇಗೆ ಅಂದಿನ ಸಾಮಾಜಿಕ, ಧಾರ್ಮಿಕ, ರಾಜಕೀಯ ಸ್ಥಿತಿಗತಿಗಳನ್ನು ಗುರುತಿಸಿದ್ದವು ಹಾಗೆಯೆ 20ನೇ ಶತಮಾನದ ವಚನಗಳಲ್ಲಿ ಸಾಮಾಜಿಕ, ಧಾರ್ಮಿಕ ಸ್ಥಿತಿಗತಿಗಳನ್ನು ದೃಷ್ಠಿಯಲ್ಲಿಟ್ಟುಕೊಂಡು ವಚನಗಳನ್ನು ರಚಿಸಿದವರು ಅನೇಕರು. ಅದರಲ್ಲಿ ಡಾ. ಜಚನಿ, ಸಿದ್ಧಯ್ಯ ಪುರಾಣಿಕ್, ಎಸ್.ವಿ.ರಂಗಣ್ಣ, ಎಸ್.ವಿ.ಪರಮೇಶ್ವರಭಟ್, ಮಹದೇವ ಬಣಕಾರ, ಸಂಗಮೇಶ ಹೊಸಮನಿಯಂತವರು ಪ್ರಮುಖರಾಗಿದ್ದಾರೆ. ಅಲ್ಲದೆ ಇವರನ್ನು ಆಧುನಿಕ ವಚನ ಸಾಹಿತ್ಯದ ದಿಗ್ಗಜರೆಂದು ಡಾ. ಸಂಗಮೇಶ ಹಂಡಗಿಯವರು ಬಣ್ಣಿಸಿದ್ದಾರೆ.

## ವಚನಕಾರರಾಗಿ ಶ್ರೀ ಬಣಕಾರ :

ಹುಟ್ಟಿದಾಗಲೇ ಕಾವ್ಯಬರೆಯುವ
ಗುಟ್ಟಿಯ ನಿಟ್ಟಿಯಹಳು ಸರಸತಿ
ಇಟ್ಟು ಕಳುಹಿದಳೆನ್ನ ಉಡಿಯಲಿ ತನ್ನ ಪ್ರತಿಭೆಯನು
ಪುಟ್ಟ ಬಾಲಕನಾಗಿ ದನಗಳ
ನಟ್ಟಿಕೊಂಡಡವಿಯಲಿ ಕಾಯುವ
ಕಟ್ಟದೇನು ತರತರದ ಪಾದಗಳನಕ್ಕರಿಲ್ಲದಲೆ.

ಎಂದು ಅವರೇ ಹೇಳಿರುವಂತೆ ಬಣಕಾರರು ಹುಟ್ಟು ಪ್ರತಿಭಾವಂತರು ತರಳುಬಾಳು ಜಗದ್ಗುರು ಶ್ರೀ ಶಿವಕುಮಾರ ಸ್ವಾಮಿಗಳ ದರ್ಶನವಾಗುವ ಮೊದಲು ಸಾಹಿತಿ ಕವಿಗಳಾಗಿದ್ದು ಶ್ರೀ ಬಣಕಾರರು ಶ್ರೀಗಳ ದರ್ಶನದ ನಂತರ ಶರಣ ಸಾಹಿತ್ಯದ ಸೇವಕರಾದರು. ಶ್ರೀಗಳ ಒಡನಾಟದಲ್ಲಿ ಬೆಳೆದ ಅವರ ನಡೆ–ನುಡಿ, ಜಾತ್ಯಾತೀತವಾದ ಮನೋಭಾವನೆ, ಸಾಹಿತ್ಯಾಸಕ್ತಿ, ಶರಣ ಧರ್ಮದ ಅನುಷ್ಠಾನ, ರಾಷ್ಟ್ರೀಯತೆ ಅಲ್ಲದೆ ಸಮಾಜ ಕಟ್ಟುವ ರೀತಿಯನ್ನು ಗುರುತಿಸಿದ ಬಣಕಾರರು ಕಾವ್ಯದ ಮೇಲಿನ ಆಸಕ್ತಿಯನ್ನು ಕಡಿಮೆಗೊಳಿಸಿ ವಚನ ಸಾಹಿತ್ಯಕ್ಕೆ ವಾರುಹೋದರು. 12ನೇ ಶತಮಾನದ ಶಿವ ಶರಣರ ವಚನಗಳನ್ನು ಈ ಹಿಂದೆಯೇ ಕಣ್ಣಾಡಿಸಿದ್ದ ಬಣಕಾರರು ಕೆಲವೊಂದು ವಚನಗಳನ್ನು ಬರೆದು ಶಿವಕುಮಾರ ಶ್ರೀಗಳಿಗೆ ತೋರಿಸಿದರು. ಅದಕ್ಕೆ ಶ್ರೀಗಳು ನೀವು ಯಾರಿಗೂ ತೋರಿಸಿ ಶಿಫಾರಸ್ಸನ್ನು ಪಡೆಯುವ ಅಗತ್ಯವಿಲ್ಲ ನಿಮಗೆ ಶರಣರ ಅನುಗ್ರಹವಿದೆ ನಿಮ್ಮ ಪ್ರಯತ್ನ ವಚನ ಸಾಹಿತ್ಯಕ್ಕೆ ನಾಂದಿಯಾಗಲೆಂದು ಹರಸಿದರು.

ಅಂತೆಯೇ ಶಿವಕುಮಾರ ಶ್ರೀಗಳ ಅಂಕಿತವನ್ನಿಟ್ಟುಕೊಂಡು ಬರೆಯುತಿದ್ದ ಅವರ ವಚನಗಳು ಕ್ರಾಂತಿಕಾರಿ ಬಸವಣ್ಣನವರ ವಚನಗಳನ್ನು ಹೋಲುತ್ತವೆ ಎಂದು ಗದುಗಿನ ತೋಂಟದ ಸಿದ್ಧಲಿಂಗ ಸ್ವಾಮಿಗಳು ಸ್ವಾರಸ್ಯಕರವಾಗಿ ಹೊಗಳಿದ್ದನ್ನು ಸ್ಮರಿಸಬಹುದಾಗಿದೆ. ಅಲ್ಲದೆ ವಚನಕಾರರಾದ ಸಿದ್ಧಯ್ಯ ಪುರಾಣಿಕರು ಇವರನ್ನು 'ಆಧುನಿಕ ವಚನಕಾರರು' ಎಂದು ಕರೆದರೆ, ಡಾ.ಎಚ್.ತಿಪ್ಪೇರುದ್ರಸ್ವಾಮಿಗಳು ಶರಣರ ಸಾಹಿತ್ಯವನ್ನು ಎಲ್ಲ ಸ್ಥರಗಳಲ್ಲಿಯೂ ನೇರವಾಗಿ ಮುನ್ನಡೆಸಿದ ಕೀರ್ತಿ ಬಣಕಾರರ ವಚನಗಳಿಗೆ ಸಲ್ಲುತ್ತದೆ ಎಂದು ಹೇಳಿದ್ದಾರೆ.

ಒಂದು ಕಾಲದಲ್ಲಿ ವಚನಕಾರರು ತಮ್ಮ ಆರಾಧ್ಯ ದೇವರ ಹೆಸರನ್ನು ಅಂಕಿತವನ್ನಾಗಿ ಬಳಸಿಕೊಂಡತೆ ಬಣಕಾರರು ತಮ್ಮ ವಚನಗಳಿಗೆ 'ಎನ್ನ ವರಗುರು ಶಿವಕುಮಾರ ಪ್ರಭುವೆ' ಎಂದು ತಮ್ಮ ಅಂತರಂಗದ ಗುರುಗಳ ಹೆಸರನ್ನು

ಅಂಕಿತವನ್ನಿಟ್ಟುಕೊಂಡಿದ್ದಾರೆ. ನನ್ನ ಜೀವಿತದ ಪೂರ್ವ ಇತಿಹಾಸದಲ್ಲಿ ಕಲ್ಲಾಗಿದ್ದ ನನ್ನನ್ನು ಮೂರ್ತಿಸ್ವರೂಪ ಮಾಡಿದ ಕೃಪೆ ಶ್ರೀಗಳವರದ್ದು ಎಂದು ಹೇಳುವ ಬಣಕಾರರು ನಾನೊಂದು ಸುಟ್ಟಬಟ್ಟೆ, ನನ್ನ ಬದುಕು ಇಡಲುಬರುವಂತೆ, ಉಡಲು ಬರುವಂತೆ ಮಾಡಿದವರು ಸಿರಿಗೆರೆ ಶ್ರೀಗಳವರು ನನ್ನನ್ನು ಗುರುತಿಸಿ ಆಶೀರ್ವದಿಸಿ ಶಿಷ್ಠಾಚಾರವನ್ನು ಕರುಣಿಸಿ ನನ್ನನ್ನು ವಚನ ರಚನೆಗೆ ಅಣಿಗೊಳಿಸಿದರು. ಅದಕ್ಕಾಗಿ ಸಿರಿಗೆರಿ ಶ್ರೀಗಳು ನನ್ನ ಆರಾಧ್ಯ ದೇವರೆಂದು ನನ್ನ ವಚನಗಳ 'ವರಗುರು' ಎಂದು ಬಣಕಾರರು ಕರೆದಿದ್ದಾರೆ.

12ನೇ ಶತಮಾನದ ಶಿವ ಶರಣರ ಜೀವನ ಮೌಲ್ಯಗಳನ್ನು 20ನೇ ಶತಮಾನದ ಬದುಕಿನೊಳಗೆ ತರಲು ಬಣಕಾರರು ಶತಗತ ಪ್ರಯತ್ನಿಸಿದ್ದರು. ಅದಕ್ಕೆಂದೆ ಬಣಕಾರರನ್ನು 'ಆಧುನಿಕ ವಚನಕಾರರು' ಎಂದು ಕರೆಯಲಾಗಿದೆ.

## ವಚನಗಳಲ್ಲಿ ನಾಮಾಮೃತ :

ಬಣಕಾರರ ವಚನಗಳು ಸರಳವಾಗಿದ್ದವು ಎನ್ನುವುದಕ್ಕಿಂತ ಬಸವಣ್ಣನವರ ವಚನಗಳನ್ನೇ ಹೋಲುತಿದ್ದವು ಎಂಬಲ್ಲಿ ಎರಡುಮಾತಿಲ್ಲ. ಹೀಗಾಗಿ ಅವರ ವಚನಗಳು ಎಲ್ಲರನ್ನೂ ಬೆರಗು ಗೊಳಿಸುವಂತೆ ಮಾಡಿದ್ದವು. ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ ಎಂದು ಬಣಕಾರರನ್ನುದ್ದೇಶಿಸಿ ಹೇಳಿದಂತೆ ಅನಿಸುತ್ತದೆ. ಸಿರಿಗೆರಿ ಶ್ರೀಗಳ ಪದತಲದಲ್ಲಿ ಬಿದ್ದನಂತರ ಬಣಕಾರರ ವ್ಯಕ್ತಿತ್ವವೇ ಬದಲಾಯಿತು. ಶ್ರೀಗಳ ಅಂಕಿತವನ್ನಿಟ್ಟುಕೊಂಡು ಬಣಕಾರರು ವಚನವನ್ನು ಬರೆಯತೊಡಗಿದಾಗ ನಮ್ಮ ಅಂಕಿತವನ್ನಿಟ್ಟುಕೊಂಡು ವಚನಗಳನ್ನು ಬರೆದರೆ ಕೆಲವರಿಗೆ ಹಿಡಿಸದೇ ಇರಬಹುದು ಅಂಕಿತವನ್ನು ಬದಲಾಯಿಸಿಕೊಂಡು ವಚನಗಳನ್ನು ತಾವು ರಚಿಸಿರೆಂದು ಶ್ರೀಗಳು ಸಲಹೆಯನ್ನಿಟ್ಟಾಗ ನೊಂದುಕೊಂಡ ಬಣಕಾರರು " ಸೊತ್ತಿನಾಶೆಗೆ ಹೆತ್ತ ತಾಯಿತಂದೆಗಳನ್ನು ಬದಲಾಯಿಸಿಕೊಂಡು ಸೊತ್ತುಳ್ಳವರಿಗೆ ಹೆತ್ತನೆನ್ನುವ ದತ್ತುಮಗನಂತೆ" ನಾನು ಮೂರ್ಖನಲ್ಲ ತಂದೆಗೆ ತಂದೆ, ತಾಯಿಗೆ ತಾಯಿ ಎನ್ನುವುದು ಅಪರಾಧವೆಂದು ಹೇಳುವವರು ಯಾರಾದರೂ ಇದ್ದರೆ ಅವರು ತಂದೆ ಇಲ್ಲದ ಮಕ್ಕಳೆಂದು ಹೇಳಬೇಕಷ್ಟೆ ! ಎಂದು ಬಣಕಾರರು ಕಟುವಾಗಿ ನುಡಿದರು. ಬಣಕಾರರ ಈ ಕಟುಮಾತಿಗೆ ಶ್ರೀಗಳು ಬೆನ್ನುಚಪ್ಪರಿಸಿ ಭೇಷ್ ಎಂದು ಶಹಬಾಷ್‌ಗಿರಿ ಇಟ್ಟರು ಇಂಥಹ ಸಂದರ್ಭದಲ್ಲಿ ಬಣಕಾರರು ವಚನಕಾರರಾಗಿ ಮುಂದೆ ಬಂದರು.

ಬಣಕಾರರು 1961ರಲ್ಲಿ ಅಕ್ಕಮಾಹಾದೇವಿಯ ಐಕ್ಯಸ್ಥಳವಾದ ಕದಳಿವನದ ಪ್ರವಾಸವನ್ನು ಶ್ರೀಗಳೊಂದಿಗೆ ಕೈಗೊಂಡಿದ್ದರು. ಅಲ್ಲಿಯೇ ಬಸವ ಜಯಂತಿಯ

ಆಚರಣೆಯಾಗಿತ್ತು. ಅಂತಹ ಸಂದರ್ಭದಲ್ಲಿ ಬಣಕಾರರು ಒಂದುನೂರಾ ಒಂದು ವಚನಗಳ "ನೂತನ ವಚನಗಳು" ಎಂಬ ಮೊದಲ ವಚನ ಸಂಗ್ರಹ ಬಿಡುಗಡೆಯಾಯಿತು. ಮುಂದೆ 1962ರಲ್ಲಿ ನೂರೊಂದು ವಚನಗಳುಳ್ಳ "ಶಿವಕುಮಾರ ಸ್ತೋತ್ರ" ವಚನಗಳು ಪ್ರಕಟವಾಗಿವೆ. ಮುಂದೆ 1108 ವಚನಗಳನ್ನು ಬರೆದು 1979ರಲ್ಲಿ ನಡೆದ ತರಳುಬಾಳು ಜಗದ್ಗುರು ಡಾ. ಶಿವಮೂರ್ತಿ ಶಿವಾಚಾರ್ಯರ ಪಟ್ಟಾಭಿಷೇಕದ ಸಂದರ್ಭದಲ್ಲಿ 1108 ವಚನಗಳ ಬೃಹತ್ ಗ್ರಂಥ ಬಿಡುಗಡೆಯಾಯಿತು.

ಬಣಕಾರರು ರಚಿಸಿದ ವಚನಗಳನ್ನು ಅಧ್ಯಯನ ಮಾಡುತ್ತಾ ಹೊದರೆ ವಚನಗಳಲ್ಲಿ ಭಕ್ತಿ ಅಂತರಂಗ ಹೋರಾಟ, ಗುರುಕೃಪೆ, ಸಾಧನೆಯ ಸಿದ್ಧಿ ಮುಂತಾದ ಅಂತರಂಗ ಕೃಷಿಗೆ ಸಂಬಂಧಿಸಿದ ವಚನಗಳನ್ನು ಕಂಡರೆ, ಇನ್ನುಳಿದ ಅನೇಕ ವಚನಗಳು ಸಮಾಜದ ಬಗೆಗಿರಿಸಿಕೊಂಡ ಕಾಳಜಿ, ಆಚಾರಗಳ ಮಂಡನೆಯೊಂದಿಗೆ ಅನಾಚಾರಗಳ ಖಂಡನೆ ಮುಂತಾದ ಸಮಾಜ ಸಮ್ಮುಖ ವಚನಗಳನ್ನು ಕಾಣಬಹುದಾಗಿದೆ.

12ನೇ ಶತಮಾನದಲ್ಲಿನ ಬಸವಾದಿ ಶರಣರ ವಚನಗಳು ಹೇಗೆ ತಮ್ಮ ಸಮಕಾಲಿನ ಸಮಾಜದಲ್ಲಿನ ಜನತೆಯ ಅಜ್ಞಾನ, ಮೂಡನಂಬಿಕೆ, ಜಾತಿಯ ಭಾವನೆ ಅರ್ಥಹೀನ ಸಂಪ್ರದಾಯಗಳನ್ನು ಸ್ತ್ರೀಪುರುಷ ಎಂಬ ಬೇಧ ಭಾವಗಳನ್ನು ಅಳಿಸಿ ಹಾಕಲು ಯತ್ನಿಸಿದವೋ ಅಂತೆಯೇ ಬಣಕಾರರ ವಚನಗಳಲ್ಲಿಯು ಸಹಿತ ಅಂತಹದ್ದೇ ಕಾಣಸಿಗುತ್ತದೆ. ಪ್ರಸ್ತುತ ಬಣಕಾರರ ವಚನಗಳು ಬಹಳಷ್ಟು ಪ್ರಾಮುಖ್ಯತೆ ಪಡೆದಿರುತ್ತವೆ ಎನ್ನುವುದರಲ್ಲಿ ಎರಡುಮಾತಿಲ್ಲ.

ಜಾತೀಯತೆ ನಮ್ಮ ನಾಡಿನ ಒಂದು ಕಳಂಕ ಎಂದೆ ಭಾವಿಸಬಹುದು 12ನೇ ಶತಮಾನದಲ್ಲಿ ಇದನ್ನು ಹೋಗಲಾಡಿಸಲು ಬಸವಾದಿ ಶರಣರು ಪಟ್ಟಶ್ರಮ ಅಷ್ಟಿಷ್ಟಲ್ಲ, ಅವರ ವಚನಗಳನ್ನು ನೆನಪಿಸಿದಾಗ ಇದು ಸಲೀಸಾಗಿ ಅರ್ಥವಾಗುತ್ತದೆ. ಇದಕ್ಕೆ ಬಣಕಾರರು ಹೊರತಲ್ಲ ಎಂಬುದನ್ನು ತಮ್ಮ ವಚನದ ಮೂಲಕ ಹೀಗೆ ಹೇಳಿದ್ದಾರೆ.

ಕುಲವಾವುದೆಂಬುದ ಹೇಳಿರೇ, ಕುಲಮದಕ್ಕೆ ಹೋರುವ ಕುನ್ನಿಗಳಿರಾ
ಹೊಲೆಯ ಹೆಜ್ಜೆಯನಿಟ್ಟೊಡೆ ನೆಲ ಕುಸಿದು ಬಿದ್ದತ್ತೇ ?
ಡೋಹಾರ ಇಟ್ಟ ಹೆಜ್ಜೆಯ ಕೆಳಗೆ, ನೆಲ ಕಪ್ಪಿಟ್ಟಿತ್ತೇ ?
ಮಾದಾರನಿಟ್ಟ ಹೆಜ್ಜೆಯ ಕೆಳಗೆ, ನೆಲ ಕಪ್ಪಿಟ್ಟಿತ್ತೇ ?
ಕ್ಷತ್ರಿಯ ಅಡಿಯಿಟ್ಟೊಡೆ ನೆಲ ನಡುಗಿ ಬಿರಿದಿತ್ತೇ ?
ಹಾರುವ ನಡೆಯೊಡೆ, ದಾರಿಯುದ್ದಕ್ಕೂ ಚೆನ್ನವೆದ್ದಿತ್ತೇ ?

ಎಂದು ಜಾತಿಯತೆಯನ್ನೇ ನಂಬಿಕೊಂಡು ಜೀವನ ಮಾಡುವವರನ್ನು ಕುರಿತು ಬಣಕಾರರು ಈ ವಚನದ ಮೂಲಕ ಪ್ರಶ್ನಿಸಿದ್ದಾರೆ. ಕುಲಕುಲವೆಂದು ಬಡಿದಾಡುವ, ಪಾಪದ ಕೆಲಸಗಳೆನ್ನೆಸಗುವ ಅವಿಚಾರಿಗಳನ್ನು ತಮ್ಮ ಅನೇಕ ವಚನಗಳಲ್ಲಿ ತರಾಟೆಗೆ ತೆಗೆದುಕೊಂಡಿದ್ದಾರೆ. ಅಲ್ಲದೆ ಬಸವಾದಿ ಶರಣರ ವಚನಗಳ ಕುರಿತು ಯಾರಲ್ಲಿ ತಾತ್ಸಾರ ಮನೋಭಾವನೆ ಇರುತ್ತಿತ್ತೋ ಅಂಥವರಿಗೆ ತಮ್ಮ ವಚನದ ಮೂಲಕ ಬರೆ ಎಳೆದಿದ್ದಾರೆ.

ಬಡವರ ದೀನದಲಿತರ ಹೆಸರಿನಲ್ಲಿ ಉದ್ಧಾರದ ಹೋಣೆಹೊತ್ತು ಮುಂದೆ ಬರುವ ರಾಜಕೀಯ ಮುಂದಾಳುಗಳು ಕೇವಲ ಭಾಷಣದ ಭರವಸೆಗಳ ಮೂಲಕ ಅವರ ಶೋಷಣೆಗೆ ನೀರೆರೆಯಲು ಪ್ರಯತ್ನಿಸುತ್ತಾರೆಯೇ ವಿನಃ, ಸಮಾಜದ ಕಳಕಳಿಯಿಂದ ದೀನದಲಿತರಿಗಾಗಿ, ಬಡವರಿಗಾಗಿ ಶ್ರಮಿಸುತ್ತಿಲ್ಲಾ ಎಂಬುದನ್ನು ತಮ್ಮ ವಚನದ ಮೂಲಕ ತಮ್ಮ ವಚನ ಕಾವ್ಯದ ಮೂಲಕ ರಾಜಕಾರಣಿಗಳಿಗೆ ಬಿಸಿಮುಟ್ಟಿಸಿದ್ದಾರೆ.

ಮುಳ್ಳುಮಾತಿನ ಮೂಲಕ ಸಿಳ್ಳೆ ಹಾಕುತ
ಕೊಳ್ಳೆ ಹೊಡೆವಿರಿ ನಾಡನು!
ನಿಮ್ಮ ಸ್ವಾರ್ಥದ ಅಗ್ನಿಕುಂಡಕೆ
ನಾಡ ಬಲಿಯನು ಕೊಂಡಿರಿ
ಬಡವ ಬಲ್ಲಿದಗೆಂದು ತೋರಿಸಿ
ನೀವೆ ಎಲ್ಲವ ತಿಂದಿರಿ!
ಬಳಲಿ ಬಸವಳಿದೆಮ್ಮ ಬೆನ್ನಿಗೆ
ಹತ್ತಿ ನಿಂತಿದೆ ಹೊಟ್ಟೆಯು
ಬರಿ ಆಶ್ವಾಸನೆ ಅನ್ನುವ
ನಂಟು ಬರುತಿದೆ ಜನತೆಯು.

ಇಂದಿನ ರಾಜಕಾರಣಿಗಳ ಕುರಿತ ವಿಡಂಬನೆ ಇಲ್ಲಿದೆ. ಇವರ ನಂಬುಗೆ ಆಶ್ವಾಸನೆಗಳೆಲ್ಲ ಜನತೆಗೆ ಭ್ರಮೆಯನ್ನುಂಟು ಮಾಡುತ್ತವೆ ಇಂಥಹ ವಚನಗಳ ಮೂಲಕ ಇಂದಿನ ರಾಜಕೀಯ ಸ್ಥಿತಿಗತಿಗಳಿಗೆ ಬಣಕಾರರ ವಚನಗಳು ನಿದರ್ಶನವಾಗಿವೆ ಎಂಬುದನ್ನು ಒಪ್ಪಿಕೊಳ್ಳಲೇಬೇಕಾಗಿದೆ.

ಅಂತೆಯೇ ಬಣಕಾರರು ಸಾಂಪ್ರದಾಯಿಕ ಜೀವನ ಪದ್ಧತಿಯಂತೆ ವಚನಗಳನ್ನು ಕ್ರಮ ಬದ್ಧವಾಗಿ ವಿಭಾಗಿಸಿಕೊಂಡು ರಚಿಸಿದ್ದಾರೆ. ಅಜ್ಞಾನ ನಿರಸನ ಸ್ಥಲ ಜ್ಞಾನ

ಪ್ರತಿ ಸಾದನಾ ಸ್ಥಲ, ಆಚಾರ ನಿರ್ದೇಶನ ಸ್ಥಲ, ಅನುಭಾವ ನಿಷ್ಪತ್ತಿ ಸ್ಥಲ ಹಾಗೂ ನಿರವಯ ಸ್ಥಲ ಎಂಬ ಐದು ಸ್ಥಲಗಳಲ್ಲಿ ಇವರ ವಚನದ ಹರವು ಇದೆ.

ಇಂಥಹ ಸ್ಥೂಲಕಟ್ಟಿನ ವಿಷಯದಲ್ಲಿ ಬಣಕಾರರದೇ ಒಂದು ವೈಶಿಷ್ಟ್ಯವಿದೆ, ಹೊಸಕಲ್ಪನೆ ಇದೆ ಇವರ ವಚನಗಳು ಸಾಧಕನು ಅನುಭವದ ಮಾರ್ಗದಲ್ಲಿ ಮುನ್ನಡೆದು, ತಮ್ಮ ಭೌತಿಕ ಮನಃ ಕ್ರಿಯಾ ಭಾಗಗಳನ್ನು ಆಧ್ಯಾತ್ಮ ಮಟ್ಟದಲ್ಲಿ ಹೇಗೆ ಉದಾತ್ತ ಗೊಳಿಸಬಲ್ಲನೆಂಬುದಕ್ಕೆ ನಿದರ್ಶನಗಳಾಗಿವೆ.

12ನೇ ಶತಮಾನದ ಶರಣರು ಶೋಷಿತಳಾದ, ತನ್ನ ಹಕ್ಕುಗಳಿಂದ ವಂಚಿತಳಾದ ಸ್ತ್ರೀಗೆ, ಪುರುಷ ಸಮಾನ ಸ್ಥಾನಮಾನ ಕಲ್ಪಿಸಿಕೊಡಲು ಹೆಣಗಿದರು. ಬಣಕಾರರು ಸ್ತ್ರೀಯರನ್ನು ಕಡೆಗಣಿಸುವ, ದೂಷಿಸುವ ಅಜ್ಞಾನಿಗಳ ಕುರಿತು ಹೀಗೆನ್ನುತ್ತಾರೆ.

ಹೆಣ್ಣು ರಕ್ಕಸಿ , ಹೆಣ್ಣು ಸೂತಕಿ
ಹೆಣ್ಣು ವೇದಕ್ಕೆ ದೂರ, ಹೆಣ್ಣು ಶಾಸ್ತ್ರಕ್ಕೆ ನಿಷಿದ್ಧ
ನಿಮ್ಮ ಹೆತ್ತಾಕಿ ಹೆಣ್ಣಲ್ಲವೇನು ಹೇಳಿರೋ ?

ಎಂದು ಕೇಳುವವರು ಅವರ ಅವಿವೇಕಿತನವನ್ನು ರೂಪಿಸಿದ್ದಾರೆ.

ಪುರುಷ ಪ್ರಧಾನವಾದ ನಮ್ಮ ಸಮಾಜದಲ್ಲಿ ಗಂಡಿಗೊಂದು ನೀತಿಯಾದರೆ ಹೆಣ್ಣಿಗೊಂದು ನೀತಿ ಎಲ್ಲ ನಿಯಮ–ನಿರ್ಬಂಧ, ಕಟ್ಟುಪಾಡುಗಳೆಲ್ಲ, ಹೆಣ್ಣು ಮಕ್ಕಳಿಗಾಗಿಯೇ ಮೀಸಲಾಗಿವೆ. ಇದನ್ನು ಬಣಕಾರರು ತಮ್ಮ ವಚನವೊಂದರ ಮೂಲಕ ವಿರೋಧಿಸಿದ್ದಾರೆ.

ಮುತ್ತಿನ ಬಲೆಯಲ್ಲಿ ಸಿಕ್ಕಿರುವ
ಮುತ್ತೈದೆಯರಾ ನೀವು ಕೇಳಿರಿ!
ಮದುವೆಯಾದವಳೆಂಬುದಕೆ
ಮಾಂಗಲ್ಯವುಂಟು, ಕುಂಕುಮದ ಬೊಟ್ಟುಂಟು
ಕಾಲುಂಗರ ಕಡಗಗಳ ಸಾಕ್ಷಿಯುಂಟು
ನಿಮ್ಮ ಗಂಡಂದಿರಿಗೇನುಂಟು ಹೇಳಿರೇ ?

ಗಂಡಸತ್ತರೆ ಹೆಣ್ಣಿಗೆ ಮಾಂಗಲ್ಯ, ಕುಂಕುಮ, ಬಳೆ ಏನೆಲ್ಲ ತೆಗೆದು ಕತ್ತಲೆ ಕೋಣೆಯಲ್ಲಿ ಕೂಡಿಡುವರು ಅದೇ ಹೆಂಡತಿ ಸತ್ತ ಗಂಡನಿಗೆ ಕೂಡಲೇ ಮರುಮದುವೆ ಮಾಡುವರು. ಅವನು ಮತ್ತೆ ಹೊಸ ಹೆಂಡತಿಯೊಂದಿಗೆ ಹೊಸ ಸಂಸಾರ ಹೂಡುವನು. ತನ್ನ ಚಪಲಕ್ಕಾಗಿ ಎಷ್ಟು ಹೆಣ್ಣುಗಳ ಸಂಗ ಮಾಡಿದರೂ ಸಮಾಜದ

ದೃಷ್ಠಿಯಲ್ಲಿ ತಪ್ಪಲ್ಲ ಇದನ್ನು ನಮ್ಮ ಸಮಾಜದ ಹಿರಿಯರೇ ಒಪ್ಪುತ್ತಾರೆ. ಇಂಥಹ ವಿಪರ್ಯಾಸದ ಸಂಗತಿಯನ್ನು ಕಂಡು ವಿಚಾರವಾದಿ, ಮಾಹಾಮಾನವತಾವಾದಿ ಬಣಕಾರರು ಇದು ನ್ಯಾಯವೇ? ಎಂದು ಪುಂಡ ಪುರುಷನನ್ನು ಪ್ರಶ್ನಿಸುತ್ತಾರೆ.

ಗಂಡ ಸತ್ತಿಹನು, ಅತ್ತೆ ಅರೆ ಹುಚ್ಚಿ
ಮಾವಂಗೆ ಇಳಿವಯವು, ನಾದಿನಿ ಅಳಿಮನದವಳು
ಮೈದುನ ಅವಳ ಕೈಗೊಂಬೆ
ಮನೆಯ ಮಗಳು ಗಂಡು ಬಿಟ್ಟವಳು
ಮನೆಯಾಳು ಕೊಳ್ಳೆ ಹೊಡೆಯುವ ಕಳ್ಳ
ಇಂತಪ್ಪ ಮನೆಯ ಸೊಸೆಯಂತಿರ್ಪೆನಯ್ಯ

ಹೀಗೆ ಸಾತ್ವಿಕ ಬಾಳನ್ನು ಬಾಳುವುದು ಎಷ್ಟು ಕಷ್ಟ ಎಂಬುದನ್ನು ಓರ್ವ ವಿಧವೆಯ ಬವಣೆಯ ಮೂಲಕ ನಿರೂಪಿಸಿರುವ ಈ ಮೇಲಿನ ವಚನದ ಪ್ರತಿಮೆಯ ಸೊಗಸು ಎಂಥವರನ್ನು ಮನ ಕುಲುಕುವಂತಾಗಿದೆ.

ಸರ್ವ ಶೊಷಣೆಗಳಿಂದ ಮುಕ್ತವಾದ ಆದರ್ಶ ಸಮಾಜವನ್ನು ನಿರ್ಮಿಸುವಲ್ಲಿ ಬಸವಾದಿ ಪ್ರಮುತರು ಶ್ರಮಿಸಿದ್ದಾರೆ. ಅವರು ಕಲ್ಪಿಸಿಕೊಂಡು ನಿರ್ಮಿಸಿದ ಸಮಾಜ ಇನ್ನೂ ಅಸ್ತಿತ್ವಕ್ಕೆ ಬಂದಿಲ್ಲ. ನಿರ್ಮಾಣವಾದ, ಸಮಾಜವಾದ, ಪ್ರಜಾಪ್ರಭುತ್ವದಂತಹ ಇಂದಿನ ಮೌಲ್ಯಗಳು ಸಾಕ್ಷಾತ್ಕಾರಕ್ಕಾಗಿ ಬಸವಣ್ಣನವರು 12ನೇ ಶತಮಾನದಲ್ಲಿ ಶ್ರಮಿಸಿದರು.

ಬಸವಾದಿ ಪ್ರಮುತರ ತತ್ವಾದರ್ಶಗಳು ಹಾಗೂ ವಚನಗಳಿಂದ ಪ್ರಭಾವಿತರಾದ ಮಹದೇವ ಬಣಕಾರರು ವಚನಗಳಲ್ಲಿ ಸಾಮಾಜಿಕ ವಿವೇಚನೆ ಹಾಗೂ ಲೋಕವಿಚಾರಗಳು ಎದ್ದುಕಾಣುತ್ತವೆ.

ಬದುಕಿನಲ್ಲಿ ಅನುಭವಿಸಿದ ವಸ್ತುನಿಷ್ಟ ಅನುಭವಗಳೇ ಲೋಕನಿದರ್ಶನಗಳಾಗಿವೆ. ಲೋಕಾನುಭವಿಲ್ಲದೆ. ಸಾಹಿತ್ಯ ಸೃಷ್ಠಿಸುವುದಿಲ್ಲ ಈ ಜಗತ್ತಿನಲ್ಲಿ ಬದುಕಬೇಕಾದರೆ, ಯಶಸ್ಸನ್ನು ಕಾಣಬೇಕಾದರೆ, ಹಣಬೇಕು ಹಣವಿದ್ದರೆ ಸಾಲದು ಲೌಕಿಕ ವ್ಯವಹಾರ ಜ್ಞಾನವುಬೇಕು, ಅದಿಲ್ಲದಿದ್ದರೆ ಬದುಕು ಅನರ್ಥ ಎಂಬುದನ್ನು ಬಣಕಾರರ ಈ ವಚನವೊಂದರಿಂದ ಅರ್ಥೈಯಿಸಿ ಕೊಳ್ಳಬೇಕಾಗಿದೆ.

"ಬಿತ್ತುವ ಬೀಜಕ್ಕೆಂದು ಮನೆಯೊಳಗಣ
ಎತ್ತ ಮಾರಿದೊಡೆಂತಯ್ಯ, ಉತ್ತಿ ಬಿತ್ತುವುದು?

ಹಬ್ಬಕ್ಕೆ ತರುವ ಹರಕೆಯ ಕುರಿಗೆಂದು ಮನೆಯೊಳಗಣ
ಪಾತ್ರೆಯ ಮಾರಿದೊಡೆಂತಯ್ಯಾ, ಅಡಿಗೆಯ ಮಾಡುವುದು?
ಮಕ್ಕಳ ಮದುವೆಗೆಂದು, ಇದ್ದ ಮನೆಯ ಮಾರಿದೊಡೆಂತಯ್ಯ,
ದಿಬ್ಬಣಕ್ಕೆ ಬಂದವರನೋಲೈಸುವುದು?
ಮನದ ಮಮಕಾರದೊಳಿರಿಸಿ, ಮನೆಯ ಶೃಂಗರಿಸಿ ಪೂಜಿಸಿದೊಡೆಂತಯ್ಯಾ,
ಲಿಂಗವೇದ್ಯನೆನಿಸಿ, ಅಂಗಸಂಗವನಳಿವುದು?"

ಮನುಷ್ಯನ ದೈನಂದಿನ ಜೀವನದಲ್ಲಿ ಸಾಮಾನ್ಯರು ಬಳಸುವ ವಸ್ತುಗಳ ಮೂಲಕ ಅರ್ಥೈಸುತ್ತಾ, ಸಾಧಕನಿಗೆ ಮನಶುದ್ಧಿ ಮುಖ್ಯ. ಆಡಂಬರದ ಭಕ್ತಿ ಸಲ್ಲದು ಎಂಬ ಮಾತನ್ನು ಬಣಕಾರರು ಒತ್ತಿ ಹೇಳಿದ್ದಾರೆ.

ಲೌಕಿಕವಾದ ಬದುಕಿನಲ್ಲಿ ಮನುಷ್ಯ ಆಸ್ತಿ, ಅಧಿಕಾರ ಅಂತಸ್ತು ಪದವಿ ಪಡೆಯಲು ಕ್ಷಣಿಕ ಸುಖಕ್ಕಾಗಿ ಕೀಳು ಮಟ್ಟಕ್ಕೂ ಇಳಿಯುತ್ತಾರೆ. ಹೀನ ಕೃತ್ಯಕ್ಕೂ ಕೈ ಹಾಕುತ್ತಾರೆ. ಆದರೆ ಶಾಶ್ವತವಾದ ಸುಖ ನೆಮ್ಮದಿ ಕೊಡುವ ಆಧ್ಯಾತ್ಮ ವಿದ್ಯೆಗಾಗಿ, ಅದಕ್ಕಾಗಿ ತ್ಯಾಗ ಮಾಡುವ ಬುದ್ಧಿ ಜೀವಿಗಳು ಅತೀ ವಿರಳ. ಜೀವನ ಆಡಂಬರದ ಜೀವನಕ್ಕೆ ಬಡಿದಾಡುವವರೇ ಹೆಚ್ಚು. ಎಂಬುದನ್ನು ಬಣಕಾರರು ತಮ್ಮ ವಚನದ ಮೂಲಕ ಹೀಗೆ ಹೇಳಿದ್ದಾರೆ.

ಸೊತ್ತಿನಾಶೆಗೆ ಕತ್ತೆಯ ಕಾಲು ಹಿಡಿದವರುಂಟು,
ಅಧಿಕಾರದಾಶೆಗೆ ಆತ್ಮ ವಂಚಕರಾದವರುಂಟು
ಪದವಿ ಗಳಿಸಲು ಪರಮ ಪಾಪಿತನ ತಿಳಿದವರುಂಟು,
ಆತ್ಮ ಚಿಂತನೆಗೆ ತ್ಯಾಗ ಮಾಡಿದವರ ಕಾಣೆನಯ್ಯಾ,

ಬಣಕಾರರ ಈ ವಚನವನ್ನು ಅರ್ಥೈಸಿಕೊಳ್ಳುತ್ತಿರುವಾಗಲೇ ಅನುಭವಿ ಆಧುನಿಕ ವಚನಗಾರ್ತಿ ಡಾ.ಕಮಲಾ ಹಂಪನಾರವರ ವಚನವೊಂದು ನೆನಪಿಗೆ ಬರುತ್ತದೆ. ಅಧಿಕಾರದಾಶೆಗೆ ಆಶೆ ಪಟ್ಟವರ ಕಂಡೆ, ಅಂತಸ್ತಿಗೆ ಮಾರು ಹೋದವರ ಕಂಡೆ, ಅಹಂಕಾರಕೆ ಬೀಗಿದವರ ಕಂಡೆ, ಪ್ರಶಂಸೆಗೆ ಬಡಿದಾಡಿದವರ ಕಂಡೆ, ಪ್ರಸಿದ್ಧಿಗೆ ಹೊಡೆದಾಡಿದವರ ಕಂಡೆ, ಪ್ರಚಾರಕೆ ಹೋರಾಡಿದವರ ಕಂಡೆ, ನಿನಗಾಗಿ ಬದುಕಿದವರಾರನೂ ಕಾಣೆ ಕಮಲಾ ಪ್ರಿಯ.

ಎಂಬ ಡಾ. ಕಮಲಾ ಹಂಪನಾರವರ ಈ ವಚನವೂ ಸಹ ಬಣಕಾರರ ಮೇಲಿನ ವಚನದಂತೆ ಅರ್ಥವನ್ನು ಕಲ್ಪಿಸಿಕೊಡುತ್ತದೆ.

ಜಗತ್ತಿನ ಆಗು ಹೋಗುಗಳನ್ನೆಲ್ಲ ನಾನೇ ಮಾಡಿದೆ, ನನ್ನಿಂದಲೇ ಆಯಿತು ನಾನೇ ಸರ್ವಸ್ವ ಎಂದು ಜಂಭ ಕೊಚ್ಚಿಕೊಳ್ಳುವ ನರಮಾನವರನ್ನು ಕಂಡು ಬಣಕಾರರು ಹೀಗೊಂದು ವಚನವನ್ನು ರಚಿಸಿದ್ದಾರೆ.

ಬೆಟ್ಟದ ತಿಳಿದೊಳಗೊಂದು ಮೂಷಕವು ಮನೆಯ ಮಾಡಿ
ಬೆಟ್ಟದ ಭಾರವನೆ ಹೊತ್ತಿಹನೆಂದು ಭಾವಿಸಿತ್ತು:
ವಾಹನದ ಮೇಲಿದ್ದ ನೊಣವು, ಹಿಂದೆ ಏಳುವ ಧೂಳು
ತನ್ನ ಭಾರದಿಂದಲೇ ಎಂದು ಭಾವಿಸಿತ್ತು.

ಈ ರೀತಿಯಾಗಿ ವಚನ ರಚಿಸುವುದರ ಮುಖಾಂತರವಾಗಿ ಎಲ್ಲ ಕ್ಷೇತ್ರಗಳಲ್ಲಿ ಮೂಗು ತೋರಿಸುವ ಮೂರ್ಖ ಸಿಖಾಮಣಿಗಳನ್ನು ಛೇಡಿಸಿದ್ದಾರೆ. ಜಗತ್ತಿನಲ್ಲಿ ನಾನಾ ರೀತಿಯ ಜನರಿದ್ದಾರೆ. ಅವರೊಂದಿಗೆ ಹೇಗೆ ವರ್ತಿಸಬೇಕೆಂಬುದೇ ಕೆಲವು ವೇಳೆ ತಿಳಿಯದಾಗಿರುತ್ತದೆ. ಅವರೆದುರಿಗಿದ್ದಾಗ ಬಣ್ಣದ ಮಾತನಾಡಿ ಪ್ರೀತಿಯ ಹೊಳೆಯನ್ನೇ ಹರಿಸಿ, ಎದುರಿಗಿಲ್ಲವಾದಾಗ ದ್ವೇಷವನ್ನೇ ಕಾರುವ ಜನರೇ ಹೆಚ್ಚಾಗಿದ್ದಾರೆ. ಇಂಥವರಿಂದ ದೂರ ಸರಿಯುವುದೇ ಒಳ್ಳೆಯದು ಎಂದಿದ್ದಾರೆ. ಹೊರಗೊಂದು ಒಳಗೊಂದು ಕಪಟವಿಲ್ಲದ ನಿಷ್ಕಲ್ಮಶವವಾದ ಮನಸ್ಸಿನ ವ್ಯಕ್ತಿಗಳಿದ್ದ ಮನೆಗೆ ಹೋಗಿ ಅವರ ಪಾದಕ್ಕೆರಗಿ ಬರುವುದು ಲೇಸು ಎಂದಿದ್ದಾರೆ. ಅದೇ ರೀತಿಯಾಗಿ ಮೋಸ ವಂಚನೆಯಿಂದ ಹಣ ಗಳಿಸಿ ದಾನ ಮಾಡಿ ಮಹಾದಾನಿ ಎನಿಸಿಕೊಂಡರೂ, ಅವನ ಮನೆಯಲ್ಲಿ ಅಪ್ಪಿ ತಪ್ಪಿ ತುತ್ತು ಅನ್ನ ತಿನ್ನಬಾರದು. ಅದೇ ಪ್ರಾಮಾಣಿಕನಾದ ಶಿವ ಭಕ್ತನ ಬಾಯಿಯ ತಾಂಬೂಲ ಸೇವಿಸುವುದು ಲೇಸೆಂದು ಬಣಕಾರರು ಹೇಳಿದ್ದಾರೆ.

ಜಗತ್ತಿನಲ್ಲಿ ಬದುಕಬೇಕಾದರೆ ಎಂಥಹ ಸಜ್ಜನರ ಸಂಗ ಮಾಡಬೇಕು. ಎಂಥವರ ಜೊತೆ ಹೇಗೆ ಬದುಕಬೇಕೆಂದು ಲೋಕ ನೀತಿಯ ಮಾತನ್ನು ಶ್ರೀ ಬಣಕಾರರು ಒತ್ತಿ ಹೇಳಿದ್ದಾರೆ. ವಚನ ಸಾಹಿತ್ಯದ ಮುಖಾಂತರವಾಗಿ ಬಣಕಾರರು ಇಂದಿನ ಜನಜೀವನಕ್ಕೆ ಹಾಗೂ ಮನೋಧರ್ಮಕ್ಕೆ ಅನುಸರಿಸಿ ಸಮಷ್ಠಿ ಜೀವನದ ಅರ್ಥವನ್ನು ತಮ್ಮ ವಚನಗಳಲ್ಲಿ ಸೆರೆ ಹಿಡಿದಿದ್ದಾರೆ. ಸಮಾಜದಲ್ಲಿನ ಕೊಳೆಯನ್ನು ಕಳೆಯುವುದರಲ್ಲಿ ಶ್ರಮಿಸಿದ್ದಾರೆ.

ಬಣಕಾರರ ವಚನಗಳ ಮೇಲೆ ಶಿವಶರಣರ ವಚನಗಳ ಪ್ರಭಾವ: ಸಾಹಿತ್ಯ ಆನ್ನುವುದು ನಿಂತ ನೀರಲ್ಲ, ಸಾಹಿತ್ಯ ರಚನೆಯಲ್ಲಿ ಸಾಮಾನ್ಯವಾಗಿ ಪ್ರತಿಯೊಬ್ಬ ಕವಿಯ ಮೇಲೆ ಒಂದಲ್ಲ ಒಂದು ರೀತಿಯಲ್ಲಿ ಹಿಂದಿನ ಕಾಲದ ಕವಿಗಳ ಪ್ರಭಾವ ಆಗಿರುವುದು ಸಹಜವಾಗಿದೆ. ಕವಿ ಪಂಪರಿಂದ ಹಿಡಿದು ಕುವೆಂಪುರವರ ಸಮಕಾಲಿನ

ಕನ್ನಡ ಸಾಹಿತ್ಯದುದ್ದಕ್ಕೂ ಒಬ್ಬರ ಮೇಲೆ ಇನ್ನೊಬ್ಬರ ಪ್ರಭಾವ ಆಗಿದ್ದನ್ನು ಕಾಣಬಹುದಾಗಿದೆ

ಪ್ರತಿಯೊಬ್ಬ ಸಾಹಿತಿಯೂ ತನ್ನ ಕೃತಿ ರಚನೆಯ ಕಾಲದಲ್ಲಿ ಹಿಂದಿನ ಪ್ರಭಾವಿ ಸಾಹಿತಿಗಳಿಂದ ಪ್ರಭಾವಿತರಾಗದಿರಲು ಸಾಧ್ಯವಿಲ್ಲವೆಂದರೆ ಅತಿಶೋಕ್ತಿಯನಲ್ಲ. ಅಂತೆಯೇ ಬಣಕಾರರು ಬಸವಾದಿ ಶರಣರ ವಚನಗಳ ಓದಿನಿಂದಾಗಿ ಶರಣರ ತತ್ವಾದರ್ಶಗಳಿಂದ ಪ್ರಭಾವಿತರಾಗಿದ್ದಾರೆ. ಆಧುನಿಕ ವಚನಕಾರರಲ್ಲಿ ಸಾಂಪ್ರದಾಯಕ ವಚನಕಾರರೆಂದು ಪ್ರಭಾವಿತರಾಗಿದ್ದಾರೆ. ಶರಣ ಪರಂಪರೆಯನ್ನು ತಮ್ಮ ಜೀವಿತಾವದಿಯರೆಗೆ ಮುಂದುವರಿಸಿಕೊಂಡು ಬಂದಿದ್ದಾರೆ ಶರಣರ ವಚನಗಳ ಪ್ರಭಾವ ಬಣಕಾರರ ವಚನಗಳಲ್ಲಿ ಯಾವ ಯಾವ ನೆಲೆಯಲ್ಲಿ ಪ್ರಕಟಗೊಂಡಿವೆ ಎಂದು ವಿವೇಚಿಸುವದು ಸೂಕ್ತ, ವಸ್ತುವಿನ ನೆಲೆಯಲ್ಲಿ ಮಾತ್ರವಲ್ಲದ ರೂಪರಚನೆಯಲ್ಲಯೂ ಬಣಕಾರರ ರಚನೆಗಳು ಬಸವಾದಿ ಶರಣರ ವಚನಗಳಿಂದ ಪ್ರೇರಣೆ ಪಡೆದಿವೆ.

ಬಣಕಾರರ ವಚನಗಳನ್ನು ಹೆಕ್ಕಿ ತೆಗೆದಾಗ  ಬಸವ,ಅಕ್ಕಮಾಹಾದೇವಿಯರ ವಚನಗಳು ನೆನಪಿಗೆ ಬರುತ್ತವೆ. ಅಲ್ಪ ಸ್ವಲ್ಪ ವ್ಯತ್ಯಾಸವನ್ನು ಬಿಟ್ಟರೆ ಬಸವಾದಿ ಶರಣರ ವಚನಗಳನ್ನೇ ಹೊಲುವಂತಾಗಿದೆ.

ಬಸವಾದಿ ಶರಣರ ವಚನಗಳಿಗೆ ಬಣಕಾರರ ವಚನಗಳು ತೀರಾ ಹತ್ತಿರವಾಗಿರುವದನ್ನು ಸ್ಪಷ್ಟವಾಗಿ ಕಾಣಬಹುದಾಗಿದೆ.

> ದೇವನೊಬ್ಬ ನಾಮ ಹಲವು
> ಪರಮ ಪಾವಿತ್ರೆತೆಗೆ ಗಂಡನೊಬ್ಬ ಎಂಬ ಬಸವಣ್ಣನವರ ವಚನ ಪ್ರಕಾರ,

ಬಣಕಾರರ ವಚನದಲ್ಲಿ,

> ಗರತಿಗೆ ಗಂಡನೊಬ್ಬನಾದಂತೆ
> ಭಕ್ತನಿಗೆ ಕರ್ತೃ ಒಬ್ಬನೇ ಕಾಣಿರೋ,

ಪತಿವ್ರತಾ ಸ್ತ್ರೀ ಒಬ್ಬ ಪುರುಷನನ್ನು ನೆಚ್ಚಿಕೊಂಡಂತೆ ಭಕ್ತನಾದವನು ದೇವರನ್ನು ಉಪವಾಸನೆ ಮಾಡಬೇಕೆಂಬುದೇ ಈ ವಚನಗಳ ತಾತ್ಪರ್ಯವಾಗಿದೆ.

ಬಸವಣ್ಣನವರ ವಚನದಲ್ಲಿರುವ ಶಬ್ದಗಳನ್ನೇ ಸ್ವಲ್ಪ ಅದಲು ಬದಲು ಮಾಡಿ, ಬಣಕಾರರು ಹಿಂದು ಮುಂದಾಗಿ ಬಳಸಿದಂತೆ ಕಾಣಿಸುತ್ತದೆ. ಹೊಸದೇನು ಇಲ್ಲಿ ಕಾಣಲಾರೆವು.

ತನ್ನಾಶ್ರಯದ ರತಿ ಸುಖವನ್ನು ತಾನುಂಬ ಊಟವನ್ನು
ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ?
ತನ್ನ ಲಿಂಗಕ್ಕೆ ಮಾಡುವ ನಿತ್ಯ ನಿಯಮವ ತಾಮಾಡಬೇಕಲ್ಲದೆ
ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ?
ಎಂಬ ಬಸವಣ್ಣನವರ ವಚನಗಳಲ್ಲಿ,

ಬಣಕಾರರ ವಚನದಲ್ಲಿ,

ಸಿರಿಯುಳ್ಳವನ ಮನೆಯ ಶಿವಪೂಜೆಯಾಳು,
ಪೂಜಿಸಿ ಪ್ರಸಾದವನೊಡೆಯನಿಗಿತ್ತೊಡೆ,
ಪ್ರತಿಫಲವಾರಿಗಯ್ಯ? ಪರಿಣಾಮವಾರಿಗಯ್ಯಾ?
ಉಂಡವನ ಮುಖವ ಕಂಡೊಡೆ ಹಸಿವು ಹಿಂಗಿತ್ತೆ?

ಬಸವಣ್ಣ ಹಾಗೂ ಬಣಕಾರರ ಈ ಮೇಲಿನ ಎರಡೂ ವಚನಗಳನ್ನು ಗಮನಿಸಿದಾಗ ಒಂದೇ ಅರ್ಥವನ್ನು ಕಲ್ಪಿಸಿಕೊಡುತ್ತವೆ. ಆದರೆ ಬಣಕಾರರು ವಚನಗಳನ್ನು ಹೇಳುವ ಶೈಲಿ ಸ್ವಲ್ಪ ವಿಭಿನ್ನ. ಪ್ರತಿಯೊಬ್ಬ ವ್ಯಕ್ತಿ ತನ್ನ ಬೆಳವಣಿಗೆಗೆ ತಾನೆ ಪ್ರಯತ್ನಿಸಬೇಕು, ಬೇರೊಬ್ಬರ ಸಹಾಯವಿಲ್ಲದೆ ಸ್ವ ಪ್ರೇರಣೆಯಿಂದ ಮುಂದೆ ಬರಬೇಕು.ತನ್ನ ಪರವಾಗಿ ಇನ್ನಾರು ಪೂಜೆ ಮಾಡುತ್ತಾರೆನ್ನುವದು ಹಾಸ್ಯಸ್ಪದ ಎನ್ನುವುದು ಈ ಎರಡು ವಚನಗಳ ತಾತ್ಪರ್ಯವಾಗಿದೆ.

ನೀನೊಲಿದರೆ ಕೊರಡು ಕೊನರುವದಯ್ಯಾ
ನೀನೊಲಿದರೆ ಬರಡು ಹಯನಹುದಯ್ಯ
ನೀನೊಲಿದರೆ ವಿಷ ಅಮೃತವಾಹುದಯ್ಯಾ ಎಂಬ
ಪ್ರಸಿದ್ಧ ಬಸವಣ್ಣನವರ ವಚನದಲ್ಲಿ.

ಬಣಕಾರರ ವಚನದಲ್ಲಿ,

ನೀನೊಲಿದರೆ ಪಾಷಾಣ ಪುರುಷವಪ್ಪುದಯ್ಯಾ
ನೀನೊಲಿದರೆ ಕಾಷ್ಟ ಕಡವರಪ್ಪುದಯ್ಯಾ
ನೀನೊಲಿದರೆ ತರುವೆಲ್ಲ ಕಲ್ಪತರುವಪ್ಪುದಯ್ಯಾ ಈ ರೀತಿಯಾಗಿ ಕಾಣಬಹುದಾಗಿದೆ.

ಶಿವಾನುಗ್ರಹ ಪಡೆದ ಶಿವ ಭಕ್ತರಿಗೆ ಅಸಾಧ್ಯವೆಂಬುವದು ಯಾವುದು ಇಲ್ಲ. ಅಘಟಿತವಾದ ಘಟನೆಗಳು ಘಟಿಸುವವು ಎಂಬ ಭಾವವಿಲ್ಲಿದೆ. ಅಲ್ಲಿ ವಿಷ ಅಮೃತವಾದರೆ ಇಲ್ಲಿ ಪಾಷಾಣ ಪುರುಷವಾಗಿದೆಯೆಷ್ಟೆ. ಎರಡು ವಚನಗಳಲ್ಲಿ ಭಾವ ಒಂದೇ ಆಗಿದೆ ಎಂಬುದನ್ನು ಇಲ್ಲಿ ಅರಿಯಬಹುದಾಗಿದೆ.

ಒಟ್ಟಿನಲ್ಲಿ ಬಣಕಾರರ ವಚನಗಳಲ್ಲಿ 12 ನೇ ಶತಮಾನದ ಶರಣರ ವಚನ ಸಾಹಿತ್ಯ, ಅವರ ಬದುಕು ತತ್ವಗಳ ಪ್ರಭಾವವನ್ನೇ ಹೆಚ್ಚಾಗಿ ಕಾಣುತ್ತೇವೆ.

ಧಾರ್ಮಿಕವಾಗಿ ಮತ್ತು ಆಧ್ಯಾತ್ಮಿಕವಾಗಿ ಹಿಂದಿನ ಶಿವ ಶರಣರ ಪರಂಪರೆಗೆ ಸೇರುವ ಬಣಕಾರರು, ತಾವು ಹಿಂದಿನವರಿಗಿಂತ ಬೇರೆಯಾದ ಅಭಿವ್ಯಕ್ತಿ ಪ್ರಕಾರವನ್ನು ರೂಪಿಸಿಕೊಳ್ಳುವಲ್ಲಿ ಸಾಹಿತ್ಯಿಗೆ ಮಾತ್ರ ಪ್ರಾಪ್ತವಾಗುವ ಹೊರಾಟದ ಬಗ್ಗೆ ತಟಸ್ತರಾಗಿದ್ದಾರೆ. ತಾವು ಒಂದು ಪೂಜ್ಯ ಪರಂಪರೆಯ ಅಂಗವೆಂಬ ಶ್ರದ್ಧೆ ಬಣಕಾರರಲ್ಲಿ ಪ್ರಧಾನವಾಗಿ ಮೂಡಿ ಬಂದಿದೆ. ಅದಕ್ಕೆಂದೆ ಬಣಕಾರರಿಗೆ ಬಣಕಾರರೇ ಸಾಟಿ ಎಂಬುದನ್ನು ಸಾರಿ ಹೇಳಬಹುದಾಗಿದೆ.

## ಮಹಾಕಾವ್ಯಗಳ ರಚನೆ:

ಮಹಾಕಾವ್ಯಗಳನ್ನು ರಚಿಸುವ ಪರಂಪರೆ ಇಂದು ನಿನ್ನೆಯದಲ್ಲ ಜಗತ್ತಿನ ಎಲ್ಲ ಭಾಷೆಗಳಲ್ಲಿ ಮಹಾಕಾವ್ಯಗಳನ್ನು ರಚಿಸುವ ಪರಂಪರೆ ಹಿಂದಿನಿಂದಲೂ ಬಂದಿದೆ ಎಂಬುದನ್ನು ಭಾರತೀಯ ಸಾಹಿತ್ಯದಲ್ಲಿ ನಾವು ಕಾಣುತ್ತೇವೆ. ಅಂತೆಯೇ ಕನ್ನಡ ಸಾಹಿತ್ಯದಲ್ಲಿ ಮೊದಲಿನಿಂದಲೂ ಪ್ರಮುಖವಾಗಿ ಬೆಳೆದು ಬಂದಿದ್ದು 'ಮಹಾಕಾವ್ಯ' ಎಂದು ಪರಿಗಣಿಸಬಹುದು.ಕವಿ ಪಂಪನಿಂದ ಹಿಡಿದು ಇಲ್ಲಿಯವರೆಗೂ ಮಹಾಕಾವ್ಯ ಪರಂಪರೆ ಮೂಡಿ ಬಂದಿದೆ. ಹಳೆಗನ್ನಡದಲ್ಲಿ ಪಂಪರಾದರೆ ಕುಮಾರವ್ಯಾಸ ಹೊಸಗನ್ನಡದಲ್ಲಿ ಕುವೆಂಪುರವರ ಮಹಾಕಾವ್ಯಗಳು ಪರಂಪರೆಯಲ್ಲಿ ಮೈಲಿಗಲ್ಲುಗಳಾಗಿವೆ.

ಆದರೆ ಆಧುನಿಕತೆಯ ಭರಾಟೆಯಲ್ಲಿ ಮಹಾಕಾವ್ಯಗಳನ್ನು ರಚಿಸುವುದು ಪ್ರಸ್ತುತವೆ? ಈ ಮಹಾಕಾವ್ಯಗಳನ್ನು ಓದುವ ವ್ಯವಧಾನ, ತಾಳ್ಮೆ ಈಗೀನ ಜನರಲ್ಲಿದೆಯೇ ಎಂದು ಅವಲೋಕಿಸಿದಾಗ ಇದು ಅಪ್ರಸ್ತುತ ಎಂಬ ಅಭಿಪ್ರಾಯ ಸರ್ವೇಸಾಮಾನ್ಯವಾಗಿ ಮೂಡಿ ಬರುತ್ತದೆ. ಕನ್ನಡ ಭಾಷೆಗಳಲ್ಲಿ ಮಹಾಕಾವ್ಯಗಳು ಸೃಷ್ಠಿಯಾದದ್ದು ಒಂದು ವಿಸ್ಮಯವಾದರೆ, ನಿಮಿಷಾರ್ಧದಲ್ಲಿ ಓದುವ ಸಣ್ಣಕಥೆ, ಚುಟುಕು, ಹನಿಗವನದಂಥಹ ಸಾಹಿತ್ಯ ಒಂದು ಕಡೆ ಬೆಳೆಯುತ್ತಿರುವ ಸಂದರ್ಭದಲ್ಲಿ ಮಹಾಕಾವ್ಯ ಹುಟ್ಟಿ ಸಾಹಿತ್ಯದಲ್ಲಿ ಮೈಲಿಗಲ್ಲು ಸ್ಥಾಪಿಸಿದೆ ಎಂದರೆ ಅಚ್ಚರಿಪಡಬೇಕಾಗಿದ್ದೇ.

ರಾಷ್ಟ್ರಕವಿ ಕುವೆಂಪುರವರು 'ಶ್ರೀ ರಾಮಾಯಣದರ್ಶನಂ' ವನ್ನು ರಚಿಸಿ ಆಧುನಿಕ ಮಹಾಕಾವ್ಯಗಳ ಹೊಸ ಪರಂಪರೆಗೆ ಪಾದಾರ್ಪಣೆ ಮಾಡಿದರು. ಈ

ಪರಂಪರೆಯನ್ನು ಸಾಂಗವಾಗಿ ಬೆಳಸಿಕೊಂಡು ಬಂದವರೆಂದರೆ ವಿ. ಕೃ. ಗೋಕಾಕ್, ಭೂಸನೂರಮಠ, ಪು.ತಿ. ನರಸಿಂಹಚಾರ್ಯ ಹಾಗೂ ಜ.ಚ.ನಿ ನಂತರದಲ್ಲಿ ಬಂದವರು ಮಹಾದೇವ ಬಣಕಾರರು.

ಕುವೆಂಪುರವರ 'ರಾಮಾಯಣದರ್ಶನಂ' ಆದರೆ ಗೋಕಾಕ್‌ರ 'ಭಾರತಸಿಂಧುರಶ್ಮಿ', ಭೂಸನೂರಮಠರವರ 'ಭವ್ಯಮಾನವ' ಪು.ತಿ. ನರಸಿಂಹಚಾರ್ಯರವರ 'ಶ್ರೀ ಹರಿಚರಿತೆ', ಜ.ಚ.ನಿ.ಯವರ 'ಸದಾಶಿವರುದ್ರಂ' ನಂತರದಲ್ಲಿ ಮಹದೇವ ಬಣಕಾರರು ರಚಿಸಿದ, 'ವಿಶ್ವಬಂಧು ಮರುಳಸಿದ್ಧ ಕಾವ್ಯ' ಮುಂತಾದ ಕೃತಿಗಳನ್ನು ವಿಮರ್ಶಕರು ಆಧುನಿಕ ಮಹಾಕಾವ್ಯಗಳೆಂದು ಹೊಗಳಿದ್ದಾರೆ.

ಆಧುನಿಕ ಮಹಾಕಾವ್ಯಗಳು ಮಾನವನ ವ್ಯಕ್ತಿತ್ವವವನ್ನು ಅಗಾಧಗೊಳಿಸುವ ಹಾಗೂ ಮನಸ್ಸನ್ನು ವಿಶಾಲಗೊಳಿಸುವ ಮತ್ತು ಬದುಕನ್ನು ಹಸನಗೊಳಿಸುವ ಸಾಧನಗಳಾಗಿವೆ ಎಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ.

ಬಣಕಾರರಿಗೆ ತರಳಬಾಳು ಹಿರಿಯ ಜಗದ್ಗುರು ಶ್ರೀ ಶಿವಕುಮಾರಸ್ವಾಮಿಗಳಲ್ಲಿ ಅಪಾರವಾದ ಭಕ್ತಿ, ಶ್ರೀಗಳು ಹೇಳಿದ್ದೇ ಬಣಕಾರರಿಗೆ ವೇದ ವಾಕ್ಯವಾಗಿತ್ತು. ತರಳುಬಾಳು ಪೀಠದ ಮೂಲ ಪುರುಷನಾದ ವಿಶ್ವಬಂಧು ಮರುಳಸಿದ್ಧರ ಚರಿತೆಯನ್ನು ಶ್ರೀಗಳಿಂದ ಆಗಾಗ ತಿಳಿದುಕೊಂಡು ಪ್ರಭಾವಿತರಾಗಿದ್ದರು.

ಬಣಕಾರರಲ್ಲಿನ ಆಗಾಧ ಪ್ರತಿಭೆಯನ್ನು ಗುರುತಿಸಿಕೊಂಡಿದ್ದ ಶ್ರೀಗಳು ಇದ್ದಕ್ಕಿದ್ದಂತೆ ಒಂದು ದಿನ ಬಣಕಾರರನ್ನು ಕರೆದು, ನೀವು ಮರುಳಸಿದ್ಧನ ಬಗ್ಗೆ ಕಾವ್ಯವವನ್ನು ರಚಿಸಬೇಕೆಂದು, ಇದೊಂದು ನನ್ನ ಬಹು ದಿನದ ಆಶೆಯಾಗಿದೆ ಇದನ್ನು ಇಡೇರಿಸುವುದು ನಿಮ್ಮ ಆದ್ಯ ಕರ್ತವ್ಯವೆಂದು ಗೆರೆ ಹೊಡೆದಂತೆ ಹೇಳಿಬಿಟ್ಟರು. ಶ್ರೀಗಳ ಮಾತನ್ನು ದಾಟದೇ ಒಪ್ಪಲೇಬೇಕಾದ ಅನಿವಾರ್ಯತೆ ಬಣಕಾರರಿಗೆ ಬಂದೊದಗಿತು. ಏನನ್ನೋ ಆಲೋಚಿಸುತ್ತಿರುವಂತೆ ಮೌನವಾಗಿದ್ದುಕೊಂಡ ಬಣಕಾರರನ್ನು ಕಂಡ ಶ್ರೀಗಳು ಅವರನ್ನು ಕುರಿತು ನೀವು ಬರೆದ ಕಾವ್ಯ ಸಾಮಾನ್ಯ ಜನತೆಗೆ ಅರ್ಥವಾಗುವಂತೆ, ಸರಳವಾಗಿ ಓದಲು ಹಾಡಲೂ ಬರುವಂತಾಗಬೇಕು ಅಂತೆಯೇ ಈ ಮಹಾಕಾವ್ಯವನ್ನು ಭಾಮಿನಿಷಟ್ಪದಿಯಲ್ಲಿ ರಚಿಸಿದರೆ ಒಳಿತು ಎಂಬ ಅಭಿಪ್ರಾಯವನ್ನು ಬಣಕಾರರಿಗೆ ನೀಡಿದರು.

ಇದಕ್ಕೂ ಪೂರ್ವದಲ್ಲಿ 'ಬಸವ ಪುರಾಣ', 'ಪ್ರಭುಲಿಂಗ ಲೀಲೆ', ಗದುಗಿನ ಭಾರತ', ಮುಂತಾದ ಉದ್ಗ್ರಂಥಗಳು ಭಾಮಿನಿಷಟ್ಪದಿಯಲ್ಲಿ ರಚನೆಯಾಗಿ ಜನಮನವನ್ನು ಸೂರೆಗೊಂಡಿದ್ದವು. ಇದನ್ನರಿತ ಬಣಕಾರರು ಭಾಮಿನಿಷಟ್ಪದಿ ಛಂದಸ್ಸಿನ ಪರಂಪರೆಯನ್ನು ಅನುಸರಿಸಿದರು.

ಬಣಕಾರರು ತಮ್ಮ ಹದಿನಾರನೇ ವಯಸ್ಸಿನಲ್ಲಿಯೇ ತಾಯಿ ಸಿದ್ಧಮ್ಮನವರು ತೀರಿಕೊಂಡಾಗ ಭಾಮಿನಿಷಟ್ಪದಿಯಲ್ಲಿ ಎರಡು ಪದ್ಯಗಳನ್ನು ರಚಿಸಿದ್ದರು. ಅವರ ಅಗಾಧ ಪ್ರತಿಭೆಗೆ ಇದೊಂದು ಉತ್ತಮವಾದ ಉದಾಹರಣೆ. ಆ ಎರಡು ಪದ್ಯಗಳಲ್ಲಿ ಒಂದು ಪದ್ಯವನ್ನು ಇಲ್ಲಿ ಕಾಣಬಹುದಾಗಿದೆ.

ಆರು ನಿನ್ನವರೆನಿಸಿಕೊಳ್ಳುವ
ರಾರು ಧಾರಿಣಿಯೊಳಗೆ ಸಲಹುವ
ರಾರು ನೀನೆಂತೆಂದು ಕೇಳುವರಾರು ನಿನಗಿಹರು
ಆರು ಕೇಳುವರಿಲ್ಲ ನಿನ್ನನು
ತೋರುವನಿತರೊಳೆಲ್ಲ ಸಿಹಿ–ಕಹಿ
ಕಾರುವರು ದ್ವೇಷಾಗ್ನಿಯನು ಮರೆ ಮೋಸದಲಿ ನಿಂದು.
ತೋರಬೇಡಲೆ ನಿನ್ನ ಬರಿತನ
ಹೇರಬೇಡನ್ಯರಿಗೆ ಭಾರವ
ಹಾರ ಹಾಕರು ನೀನೆ ಹರನಾದೊಡೆ ಇಳಿಯೊಳಗೆ.

ಆದರೆ ಈ ಪದ್ಯ ಎಲ್ಲಿಯೂ ಪ್ರಕಟವಾಗಲಿಲ್ಲ ಈ ಎರಡು ವಚನಗಳು ಸುಮಾರು ವರ್ಷಗಳವರೆಗೆ ಬಣಕಾರರ ಸ್ಮೃತಿಪಟಲದಲ್ಲಿಯೇ ಇದ್ದವು.ಮುಂದೆ ಇದೇ ವಿಶ್ವ ಬಂಧು ಮರುಳಸಿದ್ಧಕಾವ್ಯದಲ್ಲಿ ಈ ಎರಡು ವಚನಗಳು ಸೇರಿಕೊಂಡವು. ತಮ್ಮ ಕಾವ್ಯಕ್ಕೆ ಭಾಮಿನಿಷಟ್ಪದಿಯನ್ನೇ ಆಯ್ಕೆ ಮಾಡಿಕೊಳ್ಳಲಿಕ್ಕೆ ಈ ಎರಡು ವಚನಗಳು ಪೂರಕವಾದವು.

ತರಳುಬಾಳು ಶ್ರೀಗಳ ಅಪ್ಪಣೆಯನ್ನು ಶಿರಸಾವಹಿಸಿ ಪಾಲಿಸಿದ ಬಣಕಾರರು ಮಹಾಕಾವ್ಯ ರಚನೆಯ ಸಿದ್ಧತೆಯಲ್ಲಿ ತೊಡಗಿದರು.ದೇವ ಕವಿಯ ಮರುಳಸಿದ್ಧ ಕಾವ್ಯವನ್ನು ಸಮಗ್ರವಾಗಿ ಅಧ್ಯಯನ ಮಾಡುವುದರೊಂದಿಗೆ, ಸುಮಾರು ಮೂರು ನಾಲ್ಕು ವರ್ಷಗಳ ಕಾಲ ಮರುಳಸಿದ್ಧ ಹುಟ್ಟಿದ ಸ್ಥಳವಾದ ಕಗ್ಗಲು ಪುರದಿಂದ ಪ್ರಾರಂಭಿಸಿ ಆತ ಸಂಚರಿಸಿದ ಸ್ಥಳಗಳನ್ನೆಲ್ಲ ಸಂದರ್ಶಿಸಿ ಸ್ಮಾರಕಗಳನ್ನು ಹಾಗೂ ಅವಶೇಷಗಳನ್ನು ಬಣಕಾರರು ಗುರುತಿಸಿಕೊಂಡರು. ಮರುಳಸಿದ್ಧರ ಸಾಧನೆಯನ್ನು ಹೆಕ್ಕಿ ತೆಗೆದು ಕಾವ್ಯ ರಚನೆಗೆ ನೀಲಿ ನಕ್ಷೆಯನ್ನು ಸಿದ್ಧಪಡಿಸಿಕೊಳ್ಳುವಷ್ಟರಲ್ಲಿ ಅವರ ಆರೋಗ್ಯ ಕೈಕೊಟ್ಟಿತ್ತು.

ಈ ಸಂದರ್ಭದಲ್ಲಿ ಬಣಕಾರರನ್ನು ಬೆಂಗಳೂರಿನ ಪ್ರಸಿದ್ಧ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಚಿಕಿತ್ಸೆ ಒದಗಿಸಲಾಯಿತು. ಸ್ವಲ್ಪ ಚೇತರಿಕೆಯ ನಂತರ

ಆಸ್ಪತ್ರೆಯಲ್ಲಿದ್ದುಕೊಂಡೆ ಬಣಕಾರರು 350 ಪುಟಗಳನ್ನು ಬರೆದರು. ಇದು ಅವರ ಕಾರ್ಯಕ್ಷಮತೆಗೆ ಹಿಡಿದ ಕನ್ನಡಿಯಾಗಿದೆ.ಆಸ್ಪತ್ರೆಯಲ್ಲಿ ವೈದ್ಯರು ಆಗಾಗ ಬಣಕಾರರು ಇರುವ ಕೋಣೆಗೆ ಬಂದು ಆರೋಗ್ಯವನ್ನು ವಿಚಾರಿಸುತ್ತಿದ್ದ ಸಂದರ್ಭದಲ್ಲಿ ಬಣಕಾರರು ಬರೆಯುತ್ತಿರುವುದನ್ನು ಕಂಡು ನೀವು ವಿಶ್ರಾಂತಿಯಲ್ಲಿರಬೇಕು ಎಂದು ಪದೇ ಪದೇ ಹೇಳುತ್ತಿದ್ದರಂತೆ. ಅದಕ್ಕೆ ಬಣಕಾರರು ನನಗೆ ನೀವು ವಿಶ್ರಾಂತಿ ನೀಡಿದಾಗಿನಿಂದ ನಾನಾಗ ವಿಶ್ರಾಂತನಾಗಿದ್ದೇನೆ ಅದಕ್ಕೆಂದೆ ಈ ಮಹಾಕಾವ್ಯವನ್ನು ರಚಿಸುತ್ತಿದ್ದೇನೆಂದು ಹಾಸ್ಯವಾಗಿ ಹೇಳುತ್ತಿದ್ದರಂತೆ. ಹಿಡಿದ ಕೆಲಸಕ್ಕೆ ಬಣಕಾರರು ಎಂದೂ ಹಿಂದೇಟು ಹಾಕುತ್ತಿರಲಿಲ್ಲ 'ಪ್ರಯತ್ನ ಸರ್ವತ್ರ ಸಾಧನ' ವಾಗಲೇಬೇಕೆಂದು ಬಣಕಾರರು ಆಗಾಗ ಹೇಳುತ್ತಿದ್ದರಂತೆ. ಅದರಂತಯೇ ಬಣಕಾರರು ನಡೆದುಕೊಂಡಿದ್ದರು.

ಸಂಪೂರ್ಣ ಚೇತರಿಕೆಯ ನಂತರದಲ್ಲಿ ಬಣಕಾರರು ಆರೇಳು ತಿಂಗಳುಗಳಲ್ಲಿ 23 ಸಂಧಿಗಳಗಳುಳ್ಳ 1270 ಪದ್ಯಗಳನ್ನು ಭಾಮಿನಿ ಷಟ್ಪದಿಯಲ್ಲಿ ರಚಿಸಿ 'ವಿಶ್ವಬಂಧು ಮರುಳಸಿದ್ಧಕಾವ್ಯ' ವನ್ನು ಪೂರ್ಣಗೊಳಿಸಿದರು. ಅನಾರೋಗ್ಯದಿಂದ ನರಳುವ ಸ್ಥಿತಿಯಲ್ಲಿಯೂ ಸಹ ಬಣಕಾರರು ಈ ಮಹಾಕಾವ್ಯವನ್ನು ಪೂರ್ಣಗೊಳಿಸಿ ಎಲ್ಲರ ಬಾಯಲ್ಲಿ ಸಿಹಿಯಾಗಿ ಉಳಿದು ಸೈ ಎನಿಸಿಕೊಂಡರು.

ಮರುಳಸಿದ್ಧ ಕಾವ್ಯವನ್ನು ಶಿವಕುಮಾರಶ್ರೀಗಳು ಎದೆಗವಿಚಿಕೊಂಡು ತುಂಬಿದ ಹೃದಯದಿಂದ ನಿಮ್ಮ ಜೀವನ ಸಾರ್ಥಕವಾಯಿತು ನಮ್ಮ ಶಿಷ್ಯನಾಗಿ ಈ ಅದ್ಭುತ ಕಾವ್ಯವನ್ನು ರಚಿಸಿದ್ದು ಒಂದು ಪವಾಡವೇ ಸರಿ ಎಂದು ಬಣಕಾರರನ್ನು ಹಾಡಿಹೊಗಳಿದರು.

ಮರುಳಸಿದ್ಧ ಕಾವ್ಯವನ್ನು ಓದಿಯೇ ಇಹಲೋಕ ತ್ಯಜಿಸಿಬೇಕೆಂಬ ಆಸೆಯಿಂದ ಶ್ರೀಗಳು ಜೀವಹಿಡಿದಿಟ್ಟು ಕೊಂಡಿದ್ದರೇನೋ ಎಂಬಂತೆ ಬಣಕಾರರ 'ಮರುಳಸಿದ್ಧಕಾವ್ಯ' ಬಿಡುಗಡೆಯಾದ ಸ್ವಲ್ಪ ದಿನದಲ್ಲಿಯೇ ಶ್ರೀಗಳು ಶಿವಾಧೀನರಾದರು.

ಬಣಕಾರರು ಬಸವಣ್ಣನವರ ಕ್ರಾಂತಿಯ ವಿಧಾನ ಮತ್ತು ಮರುಳಸಿದ್ಧನ ಸಾಧನೆಯ ರೀತಿಗೂ ಬಹಳಷ್ಟು ವ್ಯತ್ಯಾಸವಿದೆ ಎಂಬುದನ್ನು ಅರ್ಥಪೂರ್ಣವಾಗಿ ಈ ಮಹಾಕಾವ್ಯದಲ್ಲಿ ಹಿಡಿದಿಟ್ಟಿದ್ದಾರೆ. ಬಸವಣ್ಣವರದು ಸಾಂಘಿಕ ಹೋರಾಟ ಮತ್ತು ಸಾಮೂಹಿಕ ಪ್ರಯತ್ನವಾದರೆ, ಮರುಳಸಿದ್ಧನದು ಏಕವ್ಯಕ್ತಿ ಹೋರಾಟವಾಗಿದೆ. ಬಸವಣ್ಣವನವರ ವೀರಶೈವಾಚರಣೆಯ ವಿಧಾನವೇ ಬೇರೆ,ಮರುಳಸಿದ್ಧನ ಕಾರ್ಯಾಚರಣೆಯ ವಿಧಾನವೇ ಬೇರೆ, ಒಟ್ಟಿನಲ್ಲಿ ಅವರಿಬ್ಬರ ಧಾರ್ಮಿಕ ಗುರಿಗಳು

ಒಂದೇ ಆಗಿದ್ದರೂ ಪರಿಸರ ಬೇರೆ ಬೇರೆ ಎಂಬುದನ್ನು ಈ ಮಹಾಕಾವ್ಯದಲ್ಲಿ ವ್ಯಕ್ತಪಡಿಸಿದ್ದಾರೆ.

## ಆಶ್ಚರ್ಯ ವ್ಯಕ್ತಪಡಿಸಿದ ಅಂಬೇಡ್ಕರ ಪತ್ನಿ;

ಅನಾರೋಗ್ಯದ ಕ್ಷಣದಲ್ಲಿ ಕಷ್ಟಪಟ್ಟು 'ವಿಶ್ವಬಂಧು ಮರುಳಸಿದ್ಧ' ಕಾವ್ಯವವನ್ನು ರಚಿಸಿ ಬೆಂಗಳೂರಿನಲ್ಲಿ ಬಿಡುಗಡೆಗೊಳಿಸಿದ ಸಂದರ್ಭ ನಿಜಕ್ಕೂ ಮರೆಯಲಾರದ ಐತಿಹಾಸಿಕ ದಿನ.

ಸಂವಿಧಾನ ಶಿಲ್ಪಿ ಡಾ.ಬಿ.ಆರ್.ಅಂಬೇಡ್ಕರ ಪತ್ನಿ ಶ್ರೀಮತಿ ಸವಿತಾ ಅಂಬೇಡ್ಕರವರು ಈ ಮಹಾ ಕಾವ್ಯವವನ್ನು ಬಿಡುಗಡೆಗೊಳಿಸಿದರು. ಇದರಿಂದ ಮಹಾಕಾವ್ಯಕ್ಕೆ ಮತ್ತೊಷ್ಟು ಮೆರಗು ಮತ್ತು ಪ್ರಚಾರ ಬಂದಿತು. ದಲಿತನೊಬ್ಬ ಮಹಾ ಮಾನವತನಾಗಿ ವಿಶ್ವಬಂಧುತ್ವ ಪಡೆದುದನ್ನು ಬಣಕಾರರಂಥಹ ಲೇಖಕರೊಬ್ಬರು ಪೂರ್ವಾಗ್ರಹಕ್ಕೊಳಗಾಗದೆ ನೈಜವಾಗಿ ಪ್ರತಿಬಿಂಬಿಸಿರುವುದನ್ನು ಅರಿತುಕೊಂಡ ಸವಿತಾರವರು ನಿಜಕ್ಕೂ ಇದೊಂದು ಅದ್ಭುತ ಮಹಾಕಾವ್ಯ ಎಂದು ಬಣ್ಣಿಸಿದ್ದಾರೆ. ಕಾವ್ಯ ಬಿಡುಗಡೆಯಂಥಹ ಸಮಾರಂಭಕ್ಕೆ ಆಗಮಿಸಿದ ಜನಸ್ತೋಮವನ್ನು ಕಂಡು ಸವಿತಾರವರು ಬೆರಗುಗೊಂಡಿದ್ದರಂತೆ. ಇಂಥಹ ಮಹಾಕಾವ್ಯದ ಬಿಡುಗಡೆಗೆ ಗಣ್ಯರೊಬ್ಬರು ಆಗಮಿಸಿದ್ದು ಕಾರ್ಯಕ್ರಮಕ್ಕೆ ಮೆರಗುಬಂದಿತ್ತು.

## ಶಿವಕುಮಾರ ಚರಿತೆ:

'ವಿಶ್ವಬಂಧು ಮರುಳಸಿದ್ಧ' ಮಹಾಕಾವ್ಯವವನ್ನು ಬಣಕಾರರು ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆಯಲ್ಲಿದ್ದು ಬರೆದು ಲೋಕಾರ್ಪಣೆ ಮಾಡಿದರೆ, ಆಶ್ಚರ್ಯವೆಂಬಂತೆ ಬಣಕಾರರ ಪರಮರಾಧ್ಯ ಗುರು ಶಿವಕುಮಾರ ಸ್ವಾಮಿಗಳ ಕುರಿತು 'ಶ್ರೀ ಶಿವಕುಮಾರ ಚರಿತಂ' ಎಂಬ ಮತ್ತೊಂದು ಮಹಾಕಾವ್ಯವನ್ನು ದಾವಣಗೇರಿ ಮತ್ತು ಬೆಂಗಳೂರಿನ ಬೌರಿಂಗ್ ಆಸ್ಪತ್ರೆಯಲ್ಲಿದ್ದುಕೊಂಡೇ ರಚಿಸಿದ್ದಾರೆ.

ತಮ್ಮ ಚೇತನಾ ಶಕ್ತಿಯಂತಿದ್ದ ಶಿವಕುಮಾರ ಶ್ರೀಗಳ ಅಗಲಿಕೆಯಿಂದ ನೊಂದ ಬಣಕಾರರು ಶ್ರೀಗಳ ಚರಿತೆಯನ್ನು ಬರೆದು ಅವರ ಆತ್ಮಕ್ಕೆ ಶಾಂತಿಯನ್ನು ನೀಡಬೇಕೆಂಬ ಮಹಾದಾಶೆಯಿಂದ, ಶ್ರೀಗಳು ಐಕ್ಯರಾದ ಒಂದು ವರುಷದಲ್ಲಿ 'ಶಿವಕುಮಾರ ಸ್ತೋತ್ರ ವಚನ'ಗಳೆಂಬ ಹೆಸರಿನಲ್ಲಿ ನೂರೊಂದು ವಚನಗಳನ್ನು ಪ್ರಕಟಿಸಿದರು. ಮುಂದೆ ಅನಾರೋಗ್ಯದ ಸ್ಥಿತಿಯಲ್ಲಿಯೂ ಸಹ 'ಶಿವಕುಮಾರ

ಚರಿತಂ' ಮಹಾಕಾವ್ಯವನ್ನು ಬರೆಯಲು ಪ್ರಾರಂಭಿಸಿದರು. 1993ರ ಫೆಬ್ರವರಿ ತಿಂಗಳಿನಲ್ಲಿ ಜಗಳೂರಿನಲ್ಲಿ ಜರುಗಿದ ತರಳುಬಾಳು ಹುಣ್ಣಿಮೆಯ ಕಾರ್ಯಕ್ರಮದಲ್ಲಿ ಬಣಕಾರರು ನಿಂತು ಮಾತನಾಡುವ ಸಂದರ್ಭದಲ್ಲಿ ಒಮ್ಮಿಂದೊಮ್ಮಿಲೇ ನೆಲಕ್ಕೆ ಕುಸಿದುಬಿದ್ದರು.ಅಂದೇ ಬಣಕಾರರು ತಮಗೆ ಸಾವು ಯಾವಾಗ ಸಂಭವಿಸುತ್ತಿದೆಯೋ ಎಂಬ ಅನುಮಾನದಿಂದ, ಶಿವಕುಮಾರ ಚರಿತೆಯನ್ನು ಸಂಪೂರ್ಣ ಮುಗಿಸಬೇಕೆಂದು ಬಯಸಿ ದಾವಣಗೇರಿ ಆಸ್ಪತ್ರೆಗೆ ದಾಖಲಾಗಿ ಅಲ್ಲಿಯೇ ಚರಿತ್ರೆ ಬರೆಯಲು ಪ್ರಾರಂಭಿಸಿದರು.

ತಮ್ಮ ಗುರುಗಳ ಮೇಲಿನ ಅನನ್ಯ ಭಕ್ತಿಯಿಂದ ಚರಿತೆಯನ್ನು ಆಸ್ಪತ್ರೆಯ ಹಾಸಿಗೆಯ ಮೇಲಿದ್ದುಕೊಂಡೆ ಪಕ್ಕದಲ್ಲಿಟ್ಟಿದ್ದ ಟೇಬಲ್‌ನ್ನು ಎಳೆದುಕೊಂಡು ಹಟತೊಟ್ಟಂತೆ ಚರಿತ್ರೆ ಬರೆಯುತ್ತಿದ್ದರು. ವೈದ್ಯರ ಮತ್ತು ಶೂಶ್ರಕಿಯರ ಮಾತು ಬಣಕಾರರ ಕಿವಿಗೆ ಬೀಳುತ್ತಿರಲಿಲ್ಲ. ವರಗುರುವಿನ ಚರಿತ್ರೆ ಬರೆಯುವುದೊಂದೆ ಅವರ ಪರಮ ಗುರಿಯಾಗಿತ್ತು.ಅಂಥಹ ಗುರು ಭಕ್ತಿ, ಛಲ ಬಣಕಾರರಲ್ಲಿ ಮನೆ ಮಾಡಿತ್ತು. ಹಿಡಿದ ಕೆಲಸದಲ್ಲಿ ಮುಂದಿಟ್ಟ ಹೆಜ್ಜೆಯನ್ನು ಹಿಂದಿಟ್ಟವರಲ್ಲ. ಇಟ್ಟ ಹೆಜ್ಜೆಯಲ್ಲಿ ಕಲ್ಲಿರಲಿ, ಮುಳ್ಳಿರಲಿ, ಹೂವಿರಲಿ ಎಲ್ಲವೂ ಒಂದೇ ಎಂಬ ಆತ್ಮಬಲದೊಂದಿಗೆ ಮುನ್ನುಗ್ಗಿ ಹಿಡಿದ ಕಾರ್ಯವನ್ನು ಮುಗಿಸಿಬಿಡುತ್ತಿದ್ದರು.

ಉಂಡರೂ ಒಂದೇ ಉಪವಾಸವಿದ್ದರೂ ಒಂದೇ, ಅದೇ ತಾನೇ ಊಟಮಾಡಿ ಕುಳಿತವರಂತೆ ಬರುವವರನ್ನು ಹೋಗುವವರನ್ನು ಸಂತಸದಿಂದಲೇ ವಿಚಾರಗಳನ್ನು ಹಂಚಿಕೊಳ್ಳುವ ಸ್ವಭಾವ ಬಣಕಾರರ ಹೃದಯ ಸಿರಿವಂತಿಕೆಗೆ ಕಾರಣವಾಗಿದೆ. ತಮ್ಮ ಆರೋಗ್ಯದ ಕಡೆ ಕಿಂಚಿತ್ತೂ ಚಿಂತಿಸದೆ ಹಗಲಿರುಳು ನಿದ್ರೆ ಎನ್ನದೆ ಬಾಳಿಗೆ ಬೆಳಕಾದ, ಸಾಹಿತ್ಯಕ್ಕೆ ಪ್ರೇರಕ ಶಕ್ತಿಯಾಗಿ, ವಚನಕ್ಕೆ ಅಂಕಿತರಾಗಿ ಜೀವಕ್ಕೆ ಉಸಿರಾಗಿ ಅಂತರಕ್ಕೆ ಚೇತನರಾಗಿದ್ದ ಸಿರಿಗೇರಿ ಶ್ರೀಗಳ ಭವ್ಯ ವ್ಯಕ್ತಿತ್ವವನ್ನು ಈ ಮಹಾಕಾವ್ಯದಲ್ಲಿ ಸೆರೆ ಹಿಡಿದಿದ್ದಾರೆ.

ಕಾವ್ಯದ ಪ್ರಾರಂಭದಲ್ಲಿಯೇ ಬಣಕಾರರು

ಇಟ್ಟು ಧೀರೋದಾತ್ತ ಹೆಜ್ಜೆಯ
ಮೆಟ್ಟಿ ಕುಲಜಾತಿಗಳ ಸಂಕರ
ಇಟ್ಟು ಹರನೈಸಿರಿಯ ಭಕ್ತರ ಬಾಳ ಬೆಳಗಿಸಲು
ಕೊಟ್ಟು ಪ್ರಾಣವ,ಧರ್ಮಪೀಠವ ಕಟ್ಟಿಬೆಳಸಿದ

ಎಂದು ಪೀಠಿಕಾ ಸಂಧಿಯಲ್ಲಿಯೇ ಶ್ರೀಗಳ ಸಮಗ್ರ ವ್ಯಕ್ತಿತ್ವ ಹೋರಾಟದ ಬದುಕು ವ್ಯಕ್ತವಾಗಿದೆ. ಶ್ರೀಗಳ ಹೋರಾಟಮಯ ಜೀವನವನ್ನು ಕಾವ್ಯರೂಪದಲ್ಲಿ ಬರೆದು ಮಹದೇವ ಬಣಕಾರರು ಮಾನವ ಜನಾಂಗಕ್ಕೆ ನೀಡಿ ಮಹಾದುಪಕಾರವನ್ನು ಮಾಡಿದ್ದಾರೆ. ಶ್ರೀಗಳ ವಿಚಾರಗಳು ಎಂದೆಂದಿಗೂ ಅನುಕರಣೀಯ, ಹಾಗೂ ಆದರ್ಶಮಯವಾದದ್ದು. ಮಹಾಪುರುಷರ ಚರಿತ್ರೆಯನ್ನು ಬರೆದು ಕನ್ನಡ ಸಾಹಿತ್ಯ ಲೋಕಕ್ಕೆ ಅರ್ಪಿಸುವುದರೊಂದಿಗೆ ಬಣಕಾರರು ಶ್ರೀಗಳನ್ನು ಅಮರರನ್ನಾಗಿಸಿದ್ದಾರೆ.

## ವಿನೋದಮಯ ವ್ಯಕ್ತಿತ್ವ;

ಬಣಕಾರರೊಡನೆ ಮಾತಿಗೆ ಕುಳಿತರೆ ಹೊಟ್ಟೆ ಹುಣ್ಣಾಗುವಷ್ಟು ನಗಿಸುತ್ತಿದ್ದರು. ತಿಳಿಹಾಸ್ಯದ ಸ್ವಭಾವ ಅವರದ್ದಾಗಿದೆ. ಜೀವನದಲ್ಲಿ ದುಃಖ ದುಮ್ಮಾನಗಳು ಬರುವುದು ಸಹಜವೆಂದು ಭಾವಿಸಿದ ಬಣಕಾರರು, ಪ್ರತಿಯೊಬ್ಬರು ಸಮಸ್ಯೆಯ ಭಾಗವಾದರೆ ಪರಿಹಾರವೇ ಇಲ್ಲ ಅದರ ಪರಿಹಾರ ಭಾಗವಾದರೆ ಸಮಸ್ಯಗಳೇ ಇಲ್ಲವೆನ್ನುತ್ತಿದ್ದರು ಬಣಕಾರರು.

ಕವಿಯಾಗಿ, ವಚನಕಾರರಾಗಿ, ಸಂಶೋಧಕರಾಗಿ, ರಾಜಕಾರಣಿಯಾಗಿ ಪತ್ರಕರ್ತರಾಗಿ ಬಣಕಾರರು ಜೀವನ ಕಳೆದಿದ್ದು ಒಂದು ಸಂಘರ್ಷದ ಹಾದಿಯಲ್ಲಿ.ಕಷ್ಟದ ಬದುಕಿನಲ್ಲಿ ಕೈತೊಳೆದು ಬದುಕಿನ ಮಹತ್ತರ ಮೆಟ್ಟಿಲುಗಳನ್ನು ಬದುಕಿನ ಮಹತ್ತರ ಮೆಟ್ಟಿಲುಗಳನ್ನು ಏರಿದ ದಿಗ್ಗಜರಾಗಿದ್ದರು ಬಣಕಾರರು.

ಕಷ್ಟ ಜೀವನದ ಪರಂಪರೆಯಲ್ಲಿ ಹಾಸ್ಯವು ಹರಿಗೋಲು ಇದ್ದಂತೆ ಎಂದು ಹೇಳುವ ಬಣಕಾರರು ನಾನು ನಡೆದುಬಂದ ಹಾದಿ ಇದೆ ಆಗಿರುತ್ತದೆ ಎನ್ನುತ್ತಾರೆ.ಅವರ ಕಷ್ಟ ಜೀವನಕ್ಕೆ ಮತ್ತು ಜೀವನದ ಏರು ಪೇರುಗಳಿಗೆ ಹಾಸ್ಯವೇ ಜೀವನಾಧಾರ ಎಂದರೆ ತಪ್ಪಾಗದು ಇದನ್ನು ಬಣಕಾರರೇ ಒಪ್ಪಿಕೊಂಡಿದ್ದಾರೆ.

ಬಣಕಾರರ ಹಾಸ್ಯ ಪ್ರವೃತ್ತಿಯ ರೋಚಕದ ಕೆಲವೊಂದು ಪ್ರಸಂಗಗಗಳನ್ನು ಇಲ್ಲಿ ಸಾಧ್ಯವಾದಷ್ಟು ಕಾಣಬಹುದಾಗಿದೆ. ಮಹದೇವ ಬಣಕಾರರು ಮಗಳ ಮದುವೆಯನ್ನು ಹಮ್ಮಿಕೊಂಡಿದ್ದರು. ಮದುವೆಗೆ ತರಳುಬಾಳು ಜಗದ್ಗುರುಗಳನ್ನು ಆಹ್ವಾನಿಸಿದ್ದರು. ಆಹ್ವಾನಕ್ಕೆ ಓಗೊಟ್ಟು ಶ್ರೀಗಳು ಮದುವೆಗೆ ಆಗಮಿಸಿ ನವದಂಪತಿಗಳಿಗೆ ಆಶೀರ್ವದಿಸಿ ಕಾಣಿಕೆಯನ್ನು ಸ್ವೀಕರಿಸಿಕೊಂಡು ಹಿಂದಿರುಗುವ ಸಂದರ್ಭದಲ್ಲಿ ದುಡುವ ಎರಡು ಗಾಲಿಯ ಕುರ್ಚಿಯಲ್ಲಿ ಶ್ರೀಗಳನ್ನು ಬೀಳ್ಕೊಡಲು ಬಂದರು. ಮಗಳ ಮದುವೆಯ ಸಂತಸದಲ್ಲಿದ್ದ ಬಣಕಾರರನ್ನು ನೋಡಿ ಬಣಕಾರರೊಂದಿಗೆ

ಕುಶಲೋಪರಿ ಮಾತುಗಳನ್ನಾಡಿದ ಮೇಲೆ ಬಣಕಾರರದ್ದು ಸುದೈವ ಅಳಿಯ ಸುಂದರವಾಗಿದ್ದಾನೆ ಎಂದರು ಶ್ರೀಗಳು.ಅದಕ್ಕೆ ಬಣಕಾರರು ಗಂಭೀರವಾಗಿ ಪಕ್ಕದಲ್ಲಿಯೇ ನಿಂತಿದ್ದ ಪಾರ್ವತಮ್ಮನವರನ್ನು ಓರೆ ನೋಟದಿಂದ ನೋಡಿ ಈ ಮಾವನಾದ ನಾನು ಏನು ಕಡಿಮೆ? ಎಂದು ತುಂಟು ನಗೆ ಬೀರಿದರು.ಬಣಕಾರರ ಹಾಸ್ಯವನ್ನು ಕಂಡು ಶ್ರೀಗಳು ನಕ್ಕು ಬಿಟ್ಟರು. ಅಲ್ಲಿಯೇ ನೆರೆದಿದ್ದ ಬೀಗರೆಲ್ಲರೂ ಗೊಳ್ಳೆಂದು ನಕ್ಕು ಬಿಟ್ಟರು. ಇವರೆಲ್ಲ ನಕ್ಕ ಮೇಲೆ ಪಾರ್ವತಮ್ಮನವರಿಗೆ ಹೇಗಾಗಿರಬೇಡ? ಸುಮ್ನೆ ಮುಖ ಗಂಟಿಕ್ಕಿಕೊಂಡು ನಾಚಿ ನೀರಾಗಿ ಸರಸರನೇ ಒಳಗೆ ಹೋದರು.

ಸಂತೋಷದ ಕ್ಷಣದಲ್ಲಿ ಹಾಸ್ಯ ಮಾಡುವುದು ಸಹಜ ಆದರೆ ನೋವಿನ ಸಂದರ್ಭದಲ್ಲಿ ಹಾಸ್ಯಮಾಡುವುದು ಬಣಕಾರರ ವಿನೋದಮಯ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿತ್ತು.

ಇನ್ನೊಂದು ಪ್ರಸಂಗ ಹೇಗಿತ್ತಿಂದರೆ ಬಣಕಾರರು ಆಗಾಗ ಕಾಯಿಲೆಗಳಿಂದ ಬಳಲುತ್ತಿದ್ದ ಸಂದರ್ಭ ಒಮ್ಮೆ ಇದ್ದಕ್ಕಿದ್ದಂತೆ ಬಣಕಾರರರಿಗೆ ಲಘು ಹೃದಾಯಾಘಾತವಾಯಿತು. ಕೂಡಲೇ ಅವರನ್ನು ಬೌರಿಂಗ್ ಆಸ್ಪತ್ರೆಗೆ ಸೇರಿಸಲಾಯಿತು. ಪ್ರಜ್ಞಾ ಶೂನ್ಯರಾಗಿದ್ದ ಬಣಕಾರರನ್ನು ವೈದ್ಯರು ತೀವ್ರ ನಿಗಾಘಟಕದಲ್ಲಿರಿಸಿ ಪರೀಕ್ಷಿಸಿದರು. ಹೃದಯಕ್ಕೆ ತೀವ್ರ ಅಘಾತವಾಗಿದೆ ಬಣಕಾರರು ಬದುಕುಳಿಯುವುದು ಕಷ್ಟ ದೇವರ ಮೇಲೆ ಭಾರವಷ್ಟೇ ಎಂದು ಹೇಳಿ ವೈದ್ಯರು ಚಿಕಿತ್ಸೆ ಪ್ರಾರಂಭಿಸಿದರು. ಎರಡು ಮೂರು ಗಂಟೆಯಾದರೂ ಬಣಕಾರರು ಚೇತರಿಸಿಕೊಳ್ಳಲಿಲ್ಲ, ಹೃದಯಕ್ಕೆ ರಕ್ತಸಂಚಲನ ಸರಿಯಾಗಿ ದೊರುಕುತ್ತಿಲ್ಲ ಹೀಗಾಗಿ ಹೃದಯದ ಬಡಿತ ಬಹಳಷ್ಟು ಕ್ಷೀಣಿಸಿದೆ ಎಂದು ವೈದ್ಯರು ಉಸಿರು ಗಟ್ಟಿದ ಧ್ವನಿಯಲ್ಲಿ ಹೇಳಿದಾಗ ಬಣಕಾರರ ಪತ್ನಿ,ಮಕ್ಕಳು ಸೇರಿದಂತೆ ಕುಟುಂಬದವರೆಲ್ಲರೂ ಅಳಲಿಕ್ಕೆ  ಪ್ರಾರಂಭಿಸಿದರು. ಪಾರ್ವತಮ್ಮನವರಂತೂ ಜೀವವೇ ಹೋದಂತೆ ತದೇಕಚಿತ್ತದಿಂದ ದೇವರನ್ನು ಪ್ರಾರ್ಥಿಸುತ್ತಾ ಮಾಂಗಲ್ಯ ಭಾಗ್ಯವನ್ನು ಮರಳಿ ಕರುಣಿಸು ತಂದೆ ಎಂದು ಗೋಳಾಡಿ ದು;ಖಿಸಲಿಕ್ಕೆ ಹತ್ತಿದರು. ಈ ಮಧ್ಯ ಸಾಕಷ್ಟು ಸಾರ್ವಜನಿಕ ವಲಯದಲ್ಲಿ ಜನಪ್ರಿಯತೆ ಬೆಳೆಸಿಕೊಂಡಿದ್ದ ಬಣಕಾರರ ಹಿತೈಷಿಗಳು, ಅಭಿಮಾನಿಗಳು, ಬೌರಿಂಗ್ ಆಸ್ಪತೆಗೆ ದೌಡಾಯಿಸಲಿಕ್ಕೆ ಹತ್ತಿದ್ದರು.ಆದರೆ ಬಣಕಾರರನ್ನು ಅತೀ ಸೂಕ್ಷ ನಿಗಾ ಘಟಕದಲ್ಲಿ ಇಟ್ಟಿದ್ದರಿಂದ ಅಲ್ಲಿ ಯಾರಿಗೂ ಪ್ರವೇಶವಿರಲಿಲ್ಲ. ವೈದ್ಯರ ನಿರಂತರ ಅವಿರತ ಶ್ರಮದ ಪ್ರಯತ್ನದ ಫಲವಾಗಿ ಕೊನೆಗೆ ಐದು ತಾಸಿನ ನಂತರದಲ್ಲಿ ಬಣಕಾರರು ಸ್ವಲ್ಪ ಕಣ್ಣು ತೆರೆದಂತೆ ಆಯಿತು ದೇಹ ಸಹಜ ಸ್ಥಿತಿಗೆ

ಬರುವುದನ್ನು ವೈದ್ಯರು ಗಮನಿಸುತ್ತಲೇ ಇದ್ದರು. ಆಗ ಬಣಕಾರರು ಕಣ್ಣನ್ನು ಪಿಳಿ ಪಿಳಿ ಬಿಡಲು ಪ್ರಾರಂಭಿಸಿದರು. ಆಗ ಬಣಕಾರರ ಕುಟುಂಬದವರೆಲ್ಲರಿಗೂ ಆಶ್ಚರ್ಯ, ವೈದ್ಯರಿಗಂತೂ ಸತ್ತವನು ಬದುಕಿದನೆ? ಎಂದು ಹರ್ಷಚಕಿತರಾದರು. ಬಣಕಾರರು ಸಂಪೂರ್ಣ ಕಣ್ಣು ತೆರೆದು ಅಕ್ಕ ಪಕ್ಕ ಕಣ್ಣಾಡಿಸಿದಾಗ ಪತ್ನಿ ಸೇರಿದಂತೆ ಎಲ್ಲರೂ ಅಳುವುದನ್ನು ಕಂಡು, ಬಣಕಾರರು ಸತ್ತಿರುವನೆಂದು ತಿಳಿದು ನೀವೆಲ್ಲ ಅಳುವುದರಲ್ಲಿ ಅರ್ಥವಿದೆ ಆದರೆ ಈಗ ಬದುಕಿದ್ದೇನೆಂದು ತಿಳಿದು ಅಳುತ್ತಿರುವಿರೇನು? ಎಂದರಂತೆ. ಸತ್ತು ಬದುಕಿದ ಸಂದರ್ಭದಲ್ಲಿಯೂ ಸಹ ಇಂಥಹ ಹಾಸ್ಯ ಮಾತುಗಳನ್ನು ಕೇಳಿ ಅಲ್ಲಿದ್ದವರು ಬೆಪ್ಪಾಗಿ ಹೋಗಿದ್ದರು.

ಇನ್ನೇನೋ ಹೃದಯದ ಬಡಿತ ನಿಂತು ಹೋಗುತ್ತೆ ಬಣಕಾರರ ಸಾವು ನಿಶ್ಚಿತವೆಂದು ಅಂದುಕೊಂಡ ವೈದ್ಯರಿಗೆ, ಬಣಕಾರರು ಎಚ್ಚರವಾಗಿರುವುದನ್ನು ನೋಡಿ ಅಚ್ಚರಿಯಾಗಿತ್ತು. ವೈದ್ಯರು ಸುಧಾರಿಸಿಕೊಂಡು ಏನೇನೋ ಸಬೂಬ ಹೇಳಿ ಜಾರಿಕೊಳ್ಳಲು ಯತ್ನಿಸತೊಡಗಿದಾಗ, ವೈದ್ಯರಿಗೆ ಬಣಕಾರರು ಹೇಳಿದ್ದಿಷ್ಟು. ಪರವಾಗಿಲ್ಲ ಬಿಡಿ ಡಾಕ್ಟರೇ ನೀವ್ಯಾಕೆ ಗಾಬರಿಯಾಗುತ್ತಿರುವಿರಿ, ನನಗೂ ಒಂದು 'ಹಾರ್ಟ' ಇದೆ ಅಂತಾ ಈಗ ಗೊತ್ತಾಯಿತು ಅಷ್ಟೆ ಸಾಕು ನನಗೆ, ಈಗ ನಿಮ್ಮದೇ ಅನುಮಾನ ತಾವು ಹಾರ್ಟನ್ನು ಪರೀಕ್ಷಿಸಿಕೊಳ್ಳಿ ಎಂದು ಹಾಸ್ಯ ಚಟಾಕಿಯನ್ನು ಸಿಡಿಸಿ ವೈದ್ಯರನ್ನು ಸಮಾಧಾನಗೊಳಿಸಿದರು.

ಈ ಸಂದರ್ಭದಲ್ಲಿ ಬಣಕಾರರು ರೋಗಿಯ ಮಂಚಕ್ಕೆ ತೂಗು ಹಾಕಿದ ಚಿಕಿತ್ಸಾ ವಿವರದ ಫಲಕವನ್ನು ತೆಗೆದುಕೊಂಡು ಪುಟಗಳನ್ನು ತಿರುವಿ ಹಾಕಿ ಅಲ್ಲಿಯೇ ತಮ್ಮ ಗುರುಗಳ ಅಂಕಿತ ಹಾಕಿ ಒಂದು ವಚನವನ್ನು ರಚಿಸಿದರು.

ಶರಣರಿಗೆ ಮರಣವೇ ಮಹಾನವಮಿ ಎಂಬರು

ಎನಗೆ ಮರಣ ಸಂಧಿ ಮರಳಿಪೊದುದೇಕೆ?

ಕಸುಕಾಯ ಹಿಸುಕಿ ಮೇಲಿದವರುಂಟೆ?

ಆನು ಹಣ್ಣಾಗದ ಕಾರಣ ನೀನುಣ್ಣಲೊಲ್ಲೆಯಾದೆಯಯ್ಯ!

ಎನ್ನ ಹಣ್ಣ ಮಾಡಿ ನೀನುಣ್ಣುವಂತೆ ಮಾಡಾ

ಎನ್ನ ವರಗುರು ಶಿವಕುಮಾರ ಪ್ರಭುವೇ!

ಇನ್ನು ಸಭೆ ಸಮಾರಂಭಗಳಲ್ಲಿ ಬಣಕಾರರು ಭಾಷಣ ಮಾಡುತ್ತಾರೆಂದರೆ ಕನಿಷ್ಟ ಒಂದು ತಾಸು ಬೇಕು. ಒಂದು ತಾಸು ಭಾಷಣ ಎಂದರೆ ಇಗೀನವರಿಗೆ

ಅಲರ್ಜಿ. ಅದಕ್ಕೆಂದೆ ಬಣಕಾರರು ಸಂದರ್ಭಕ್ಕೆ ಅನುಗುಣವಾಗಿ ಹಾಸ್ಯ ಚಟಾಕಿಗಳನ್ನು ಹಾರಿಸುತ್ತಿದ್ದರು.

ಒಂದೂರಿನಲ್ಲಿ ಒಬ್ಬ ಶ್ರೀಮಂತನಿದ್ದ ಇತನಿಗೆ ಒಬ್ಬನೇ ಒಬ್ಬ ಮಗನಿದ್ದನು. ಅವನ ಹೆಸರು ಜಗದೀಶ, ಮಗಾ ಓದಿ ದೊಡ್ಡ ವ್ಯಕ್ತಿಯಾಗಬೇಕೆಂಬ ಹಂಬಲ ಆ ಶ್ರೀಮಂತನದಾಗಿತ್ತು ಅಂತೆಯೇ ಜಗದೀಶನನ್ನು ಪಿಯುಸಿ ಕಲಿಯಲು ಕಾಲೇಜಿಗೆ ಸೇರಿಸಿದ್ದ.ಮಗನಿಗೆ ಕಾಲೇಜಿಗೆ ಹೋಗಲು ತಂದೆ ಒಂದು ರಾಜ್ ಟಿವಿಯ ಕಾರೊಂದನ್ನು ಕೊಡಿಸಿದ್ದ. ಜಗದೀಶ ಅದೇ ಕಾರಿನಲ್ಲಿ ಕಾಲೇಜಿಗೆ ಹೋಗಿಬರುತ್ತಿದ್ದ, ಜಗದೀಶನ ಮುಂದಿನ ಮನೆ ಹುಡುಗಿಯೂ ಸಹ ಅದೇ ಕಾಲೇಜಿನಲ್ಲಿ ಪಿಯುಸಿ ಓದುತ್ತಿದ್ದಳು ಇಬ್ಬರೂ ಕ್ಲಾಸಮೇಟ್ ಆ ಹುಡುಗಿ ತುಂಬಾ ಬುದ್ಧಿವಂತೆ ಆದರೆ ಬಡತನದ ಬೇಗೆಯಿಂದ ಬಳಲಿದ್ದಳು. ತಲೆಗೆ ಎಣ್ಣೆ, ಕಾಲಿಗೆ ಚಪ್ಪಲಿ ಇಲ್ಲದೆ ಹಾಗೆ ಕಾಲೇಜಿಗೆ ಬರುತ್ತಿದ್ದಳು ಬಡತನದ ಕುಟುಂಬದಿಂದ ಬಂದ ಆ ಹುಡುಗಿ ಪಿಯುಸಿ ವಾರ್ಷಿಕ ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ ಪಾಸಾದಳು ಶ್ರೀಮಂತನ ಮಗ ಜಗದೀಶ ಪರೀಕ್ಷೆಯಲ್ಲಿ ಫೇಲಾದ. ಮಗ ಫೇಲಾದದ್ದನ್ನು ತಿಳಿದ ಜಗದೀಶನ ತಾಯಿ ಮಗನಿಗೆ ಲೋ ಜಗದೀಶ ಆ ಎದುರಿನ ಮನಿಯ ಹುಡುಗಿಯನ್ನು ನೋಡಿದ್ದಿಯೇನು ಅವಳು ಪಸ್ಟ್ ಕ್ಲಾಸನಲ್ಲಿ ಪಾಸಾಗಿದ್ದಾಳೆ ನಿನಗೇನಾಗಿತ್ತೊ ರೋಗ ಅಂತ ಬೈದಳು. ಅದಕ್ಕೆ ಜಗದೀಶ ಅಮ್ಮಾ ಆ ಹುಡುಗಿ ನೋಡಿದ್ದೇನಮ್ಮಾ ಹುಡುಗಿ ನೋಡಿಯೇ ಫೇಲಾದೆ ಅಂದನಂತೆ. ಇಂತಹ ಅನೇಕ ರೀತಿಯ ಹಾಸ್ಯಗಳು ಬಣಕಾರರಲ್ಲಿ ಇದ್ದವು.

ಇನ್ನೊಂದು ಪ್ರಸಂಗ ಹೇಗಿತ್ತೆಂದರೆ ಒಂದೂರಿನಲ್ಲಿ ಗಂಡ ಹೆಂಡತಿ ನೆಮ್ಮದಿಯಿಂದ ಜೀವನ ಸಾಗಿಸುತ್ತಿದ್ದರು. ಒಂದು ದಿನ ಗಂಡನ ಆರೋಗ್ಯ ಕೈಕೊಟ್ಟಿತ್ತು ಹೆಂಡತಿ ಗಂಡನನ್ನು ಕರೆದುಕೊಂಡು ಆಸ್ಪತ್ರೆಗೆ ಸೇರಿಸಿದಳು. ಗಂಡನ ಆರೈಕೆಗಾಗಿ ಹೆಂಡತಿ ಹಗಲು ರಾತ್ರಿ ಆಸ್ಪತ್ರೆಯಲ್ಲಿಯೇ ಕಳೆದಳು. ಒಂದು ದಿನ ಅವಳ ಗೆಳತಿ ಆಸ್ಪತ್ರೆಗೆ ಬಂದಿದ್ದಳು, ಆಕೆ ಆಸ್ಪತ್ರೆಯಲ್ಲಿದ್ದ ತನ್ನ ಗೆಳತಿಯನ್ನು ನೋಡಿ ಎನೇ ಕಣ್ಣು ಎಷ್ಟು ಕೆಂಪಾಗಿವೆ ರಾತ್ರಿ ನಿದ್ದೆ ಮಾಡಿಲ್ಲವೇನು? ಸಿಸ್ಟರ್ ಬಂದಿರಲಿಲ್ಲವೇ? ಎಂದು ಕೇಳಿದಳು. ಆಗ ಅವಳು ಸಿಸ್ಟರ್ ಬಂದಿದ್ದಳಮ್ಮಾ ಆಕೆ ಎಚ್ಚರವಾಗಿಯೇ ಇದ್ದಳು ಅದಕ್ಕೆ ನಿದ್ದೆ ಬರಲಿಲ್ಲ ಅದಕ್ಕೆ ಕಣ್ಣು ಕೆಂಪಾಗಿವೆ ಎಂದಳಂತೆ.

ಒಬ್ಬನಿಗೆ ನಾಲ್ಕು ದಿನದಿಂದ ಭೇದಿಯೇ ಆಗಿದ್ದಿಲ್ಲ ತುಂಬಾ ತ್ರಾಸು ಪಟ್ಟುಕೊಂಡು ಒಂದು ನರ್ಸಿಂಗ್ ಹೊಂ ಗೆ ಬಂದು ದಾಖಲಾದ. ದಾಖಲಾದರೂ ಅಲ್ಲಿಯೂ ಒಂದೆರಡು ದಿನ ಭೇದಿ ಆಗಲಿಲ್ಲವಂತೆ ಆಗ ಆ ರೋಗಿಗೆ ವೈದ್ಯರ

ಮೇಲೆ ಸಿಟ್ಟು ಬಂದು ರಿ ಡಾಕ್ಟರೇ ನಾನು ಸಾಯುವುದಾದರೆ ನಮ್ಮ ಮನೆಯಲ್ಲಿಯೇ ಸಾಯುತ್ತೇನೆ, ನೀವು ಸತಾಯಿಸದೇ ಬಿಲ್ಲು ಕೊಟ್ಟು ಬಿಡ್ರಿ ನಾನು ಹೋಗ್ತಿನಿ ಅಂತಾ ಖಾರವಾಗಿ ಹೇಳಿದ. ಆಗ ಡಾಕ್ಟರು ಬಿಲ್ಲು ಕೊಟ್ಟರು ಅದನ್ನು ನೋಡಿದ ತಕ್ಷಣವೇ ಆರೋಗಿಗೆ ಭೇದಿ ಆಯಿತಂತೆ.

ಇನ್ನೊಂದು ಆಸ್ಪತ್ರೆಯಲ್ಲಿನ ಪ್ರಸಂಗ ಒಬ್ಬನಿಗೆ ದೀಡಿರನೇ ಒಬ್ಬನಿಗೆ ಹೊಟ್ಟೆನೋವು ಕಾಣಿಸಿಕೊಂಡಿತು. ಆಸ್ಪತ್ರೆಗೆ ಹೋಗಿ ದೊಡ್ಡ ವೈದ್ಯರನ್ನು ಇದ್ದಾರೆಯೇ ಎಂದು ಕೇಳಿದ, ಅವರು ರಜೆ ಮೇಲಿರುವುದು ಆತನಿಗೆ ಗೊತ್ತಾಯಿತು. ಆಗ ಅಲ್ಲಿದ್ದ ಸಹಾಯಕ ವೈದ್ಯರನ್ನು ಭೇಟಿಯಾಗಿ ತನಗಾದ ಹೊಟ್ಟೆನೋವಿನ ಬಗ್ಗೆ ಅವರಿಗೆ ವಿವರಿಸಿದ ಎರಡು ಮಾತ್ರೆಗಳನ್ನು ಕೊಟ್ಟು ಆ ರೋಗಿಗೆ ಹೇಳಿದರು, ರಾತ್ರಿ ಒಂದು ತಗೋ ಆಕಸ್ಮಾತ ಬದುಕಿದ್ದರೆ ಬೆಳಿಗ್ಗೆ ಇನ್ನೊಂದು ತಗೋ ಎಂದರಂತೆ.

ಬಣಕಾರರು 1969 ರಲ್ಲಿ ವಿಧಾನ ಸಭೆಯ ಸದಸ್ಯರಾಗಿದ್ದಾಗಿನ ಒಂದು ಪ್ರಸಂಗ, ಬಣಕಾರರು ವಿಧಾನ ಸಭೆಯ ಸದಸ್ಯರಾಗಿದ್ದಾಗ ಶ್ರೀ ಎಸ್.ಆರ್.ಕಂಠಿ ಯವರು ಕೆಲವು ಅವಧಿಗೆ ಸ್ಪೀಕರ್ ಆಗಿದ್ದರು. ಈಗಿನಂತೆ ಶಾಸಕರ ಭವನದಲ್ಲಿ ವಿಶಾಲವಾದ ಕಟ್ಟಡವಿರಲಿಲ್ಲ ಹಳೆಯ ಬಿಲ್ಡಿಂಗ್ ಒಂದೇ ಇತ್ತು. ಹೀಗಾಗಿ ಒಂದೇ ರೂಮಿನಲ್ಲಿ ಇಬ್ಬಿಬ್ಬರು ಶಾಸಕರು ವಾಸಮಾಡಬೇಕಾಗಿತ್ತು. ಶಾಸಕರ ನೆಂಟರು,ಆಪ್ತರು ಯಾರಾದರೂ  ಬಂದರೆ ತುಂಬಾ ತೊಂದರೆ ಯಾಗುತ್ತದೆ ಎಂಬ ವಿಚಾರವನ್ನು ಹೊಂದಿದ ಕಂಠಿಯವರು ನಿಮ್ಮ ಸಂಸಾರವನ್ನು ತರಬೇಡಿ [Don’t bring your family ] ಎಂಬ ಆದೇಶವನ್ನು ಪ್ರತಿಯೊಬ್ಬ ಶಾಸಕರಿಗೆ ರವಾನಿಸಿದ್ದರು. ಒಮ್ಮೆ ಆಡಳಿತದ ಮೊಗಸಾಲೆಯಲ್ಲಿ ಸ್ಪೀಕರ್ ಮತ್ತು ಬಣಕಾರರು ಎದುರಾದರು. ಆಗ ಸ್ಪೀಕರ್ ಅವರು ಬಣಕಾರರನ್ನುದ್ದೇಶಿಸಿ ಎನೊ ಬಣಕಾರ ಹೇಗಿದ್ದಿಯಾ? ಅಂತ ಕೇಳಿದರು, ಆಗ ಬಣಕಾರರು ತಮ್ಮ ಜೊತೆಗಿದ್ದ ಶ್ರೀ ದುರಗಪ್ಪನವರಿಗೆ ಕಣ್ಣ ಸನ್ನೆ ಮಾಡಿ ಸ್ಪೀಕರ್‌ಗೆ ಹೇಳಿದರು. ಈ ದಿನ ನಿಮ್ಮ ಮೇಲೆ ಪಾಯಿಂಟ್ ಆಫ್ ಆರ್ಡರ್ ಇದೆ ಎಂದು ಬಣಕಾರರು ಹೊರಟರಂತೆ ಆಗ ಸ್ಪೀಕರ್ ರವರು ಏ ಬಾರೋ ಎನೋ ಅದು ಅಂದದ್ದು ಎಂದು ಕೇಳಿದರಂತೆ, ಆಗ ಬಣಕಾರರು ಎನು ಇಲ್ಲ ಸರ್ ಇದು ಬಜೆಟ್ ಸೆಸೆನ್ ಆಗಿದ್ದರಿಂದ ಬಹುದಿವಸ  ಬೆಂಗಳೂರಿನಲ್ಲಿ ಉಳಿಯಬೇಕಾಗುತ್ತದೆ ಆದ ಕಾರಣ ನನ್ನ ಹೆಂಡತಿಯನ್ನು, ಜೊತೆಗೆ ಕರೆ ತರಬೇಕೆಂದು ಊರಲ್ಲಿ ಗಂಟುಮೂಟೆ ಕಟ್ಟಿಸಿದೆ ಆ ಸಮಯಕ್ಕೆ ತಮ್ಮ ಆದೇಶ ಪತ್ರ ಬಂತು. ಆ ಪತ್ರವನ್ನು ನನ್ನ ಹೆಂಡತಿಗೆ ಓದಿ ಹೇಳಿದೆ ಬೆಂಗಳೂರಿನಲ್ಲಿ ಎಲ್ಲ ವ್ಯವಸ್ಥೆ ಮಾಡಲಾಗಿದೆ. ಅದಕ್ಕಾಗಿ Don`t bring your family ಎಂದು ಆದೇಶ

ಹೊರಡಿಸಿದ್ದಾರೆ ನೀನು ಬರುವದು ಬೇಡ ಎಂದರಂತೆ. ಆದರೆ ಅಲ್ಲಿ ಬಂದು ನೋಡಿದರೆ ಅದೆ ರೂಂ, ಅದೇ ಮಂಚ ಇಲ್ಲಿ ಎನೂ ವ್ಯವಸ್ಥೆ ಇಲ್ಲ ಇದೆ ನನ್ನ Point of order ಎಂದರಂತೆ, ಬಣಕಾರರ ಈ ಹಾಸ್ಯ ಮಾತಿಗೆ ಅಲ್ಲಿದ್ದವರು ಮುಗುಳ್ನಗೆ ನಕ್ಕು ಅಲ್ಲಿಂದ ಕಾಲ್ಕಿತ್ತರು.

ಒಮ್ಮೆ ರಾಜನ ಮೆರವಣಿಗೆ ಊರಿನ ಪ್ರಮುಖ ಬೀದಿಗಳಲ್ಲಿ ಹೊರಟಿತ್ತು. ಆ ಸಂದರ್ಭದಲ್ಲಿ ರಾಜನನ್ನೇ ಹೋಲುತ್ತಿದ್ದ ವ್ಯಕ್ತಿಯನ್ನು ರಾಜಾ ಕಂಡನು. ಅವನು ನನ್ನನ್ನೆ ಹೋಲುತ್ತಾನಲ್ಲ ಎಂದು ಭಾವಿಸಿ ಆಶ್ಚರ್ಯಚಕಿತನಾಗಿ ಮೆರವಣಿಗೆ ಮುಗಿದ ತಕ್ಷಣ ಆತನನ್ನು ಆಸ್ಥಾನಕ್ಕೆ ಕರೆ ತರಲು ಸೇವಕರಿಗೆ ಆದೇಶಿಸಿದ. ಆ ಪ್ರಕಾರವಾಗಿ ರಾಜನನ್ನೇ ಹೊಲುವ ಆ ವ್ಯಕ್ತಿಯನ್ನ ಸೇವಕರು ಕರೆ ತಂದರು ಆಗ ರಾಜಾ ಅವನಿಗೆ ಅನೇಕ ಪ್ರಶ್ನೆಗಳನ್ನು ಹಾಕಿದ. ಅದಕ್ಕೆ ಆ ವ್ಯಕ್ತಿ ನನಗೇನು ಗೊತ್ತಿಲ್ಲಾ ಸ್ವಾಮಿ ಎಂದು ಪರಿ ಪರಿಯಿಂದ ಬೇಡಿಕೊಂಡ. ಆಗ ಮಹಾರಾಜ ಹೋಗಲಿ ಬಿಡು ನಿಮ್ಮ ತಾಯಿ ಏನಾದರೂ ಅರಮನೆಯಲ್ಲಿ ಈ ಹಿಂದೆ ಕೆಲಸಕ್ಕೆ ಇದ್ದಳೇನು? ಎಂದು ರಾಜ ಮರು ಪ್ರಶ್ನೆ ಹಾಕಿದ ಅದಕ್ಕೆ ಉತ್ತರವಾಗಿ ಆ ವ್ಯಕ್ತಿ ನಮ್ಮ ತಾಯಿ ಇಲ್ಲ ಸ್ವಾಮಿ ಆದರೆ, ನಮ್ಮ ತಂದೆ ಮಾತ್ರ ಬಹಳದಿನ ಈ ಅರಮನೇಲಿ ಕೆಲಸಕ್ಕೆ ಇದ್ದ ಎಂದನಂತೆ ಆಗ ರಾಜ ಕಕ್ಕಾಬಿಕ್ಕಿ.

ಕಚೇರಿಯ ಅಧಿಕಾರಿಗಳ ಗೋಳು ಎಂಥಹ ಹಾಸ್ಯಮಯವಾಗಿತ್ತೆಂದರೆ, ಒಂದು ದಿನ ಕಚೇರಿಯ ಅಧಿಕಾರಿಗಳೆಲ್ಲರೂ ಕೂಡಿ ಮಹತ್ತರವಾದ ಚರ್ಚೆಯಲ್ಲಿ ಪಾಲ್ಗೊಂಡಿದ್ದರು. ಅಂದಿನ ಚರ್ಚೆ ಬಹಳೊತ್ತು ನಡೆಯುವುದಿತ್ತು ಆಗ ಒಬ್ಬ ಅಧಿಕಾರಿ ನಾನು ಎಂಟು ಗಂಟೆಗೆ ಮನೆಯಲ್ಲಿ ಇರಬೇಕು ಎಕೆಂದರೆ ನನ್ನ ಹೆಂಡತಿ ನಾನು ಊಟ ಮಾಡದೆ ಆಕೆ ಎನೂ ತಿನ್ನುವುದೇ ಇಲ್ಲ, ಆ ಕಾರಣವಾಗಿ ತಪ್ಪಿಸುವ ಹಾಗಿಲ್ಲ ಎಂದು ಚರ್ಚೆಯ ಮಧ್ಯದಲ್ಲಿಯೇ ಎದ್ದು ಬಿಟ್ಟ. ಉಳಿದ ಅಧಿಕಾರಿಗಳೆಲ್ಲರಿಗೂ ಆಶ್ಚರ್ಯವಾಯಿತು. ಆಗ ಮನೆಗೆ ಹೋಗುವ ಸಂದರ್ಭಲ್ಲಿ ಒಬ್ಬ ಅಧಿಕಾರಿ ಸ್ನೇಹಿತನ ಕಿವಿಯಲ್ಲಿ ಗುಟ್ಟಾಗಿ ಈ ರೀತಿಯಾಗಿ ಹೇಳಿದ 'ಗಂಡ ಹೆಂಡತಿಯರಿಬ್ಬರಿಗೂ ಒಂದೇ ಒಂದು ಹಲ್ಲಿನ ಸೆಟ್ಟು' ಎಂದಾಗ ಆತ ಠುಸ್ಸೆಂದ.

ಅತ್ಯಂತ ಸುಖಕರವಾದ ಸಂಸಾರ ಯಾವುದು? ಈ ಪ್ರಶ್ನೆಗೆ ಬಣಕಾರರ ಉತ್ತರ 'ಕುರುಡ ಗಂಡ, ಕಿವುಡ ಹೆಂಡತಿ, ಎಂದರಂತೆ.

ಒಬ್ಬ ಬ್ಯಾಂಕಿನ ಮ್ಯಾನೇಜರ ಪ್ರತಿ ದಿನವೂ ಬ್ಯಾಂಕಿಗೆ ಹೋಗುವಾಗ ಐದು ರೂಪಾಯಿಗಳ ನೋಟನ್ನು ಹೆಂಡತಿಯ ಕೈಗಿಟ್ಟು ಮುತ್ತಿಟ್ಟು ಹೋಗುತ್ತಿದ್ದ ಆಕೆ ಗಂಡ ಪ್ರತಿ ದಿನ ಕೈಗಿಟ್ಟ ಐದು ರೂಪಾಯಿಗಳನ್ನು ಡಬ್ಬಿಯಲ್ಲಿ ಸಂಗ್ರಹಿಸಿ ತಿಂಗಳ

ಕೊನೆಯಲ್ಲಿ ಬ್ಯಾಂಕಿಗೆ ಜಮಾ ಮಾಡುತ್ತಿದ್ದಳು. ಒಂದು ದಿನ ಶೇಖರಿಸಿಟ್ಟಿದ್ದ ಡಬ್ಬಿ ಗಂಡ ಮ್ಯಾನೇಜನ ಕೈಗೆ ಸಿಕ್ಕಿತು. ನನ್ನ ಹೆಂಡತಿ ಬಲು ಜಾಣೆ ಎಂದು ಗುಣಗಾನ ಮಾಡಿ ಗಂಡ ಹೆಂಡತಿ ಒಟ್ಟಿಗೆ ಸೇರಿ ಆ ಡಬ್ಬಿಯನ್ನು ಒಡೆದು ತೆಗೆದರು. ಅದರಲ್ಲಿ ಹತ್ತು, ಇಪ್ಪತ್ತು ಹಾಗೂ ಮೂವತ್ತು ರೂಪಾಯಿ ನೋಟುಗಳು ಕಾಣಿಸಿಕೊಂಡವು. ಅದನ್ನು ನೋಡಿ ಏನೇ ಐದು ರೂಪಾಯಿ ನೋಟಿನ ಮೇಲೆ ನಾನು ಎಂದೂ ಜಾಸ್ತಿ ಕೊಟ್ಟಿಲ್ಲ ಆದರೆ 5.10,20 ರೂಪಾಯಿಗಳು ಎಲ್ಲಿಂದ ಬಂದವು ಎಂದು ಆಶ್ಚರ್ಯ ವ್ಯಕ್ತಪಡಿಸಿದರೆ ಆಗ ಅವಳು ಎಲ್ಲರೂ ನಿಮ್ಮಂತೆ ಕಂಜ್ಯೂಸ್ ಇರುವುದಿಲ್ಲ ತಿಳಿಯಿತೇ ಎಂದಳಂತೆ.

ಹೀಗೆ ಬಣಕಾರರಲ್ಲಿನ ಅನೇಕ ಈ ಹಾಸ್ಯಮಯಗಳನ್ನು ಒಂದೆಡೆ ಜೋಡಿಸಿಕೊಂಡು ಬರೆದರೆ ಒಂದು ದೊಡ್ಡ ಪುಸ್ತಕ ರಚಿಸಿದಂತೆ ಆಗುತ್ತದೆ. ಕೇವಲ ಬರಬಣಿಗೆಯ ಮೂಲಕ ಇವರ ವಿನೋದಮಯ ವ್ಯಕ್ತಿತ್ವವನ್ನು ಕಂಡುಕೊಂಡರೆ ಸಾಲದು, ಬೆಟ್ಟದಷ್ಟು ದು;ಖ ಮಡಿಗಟ್ಟಿ ಕುಳಿತುಕೊಂಡು ಬಣಕಾರರ ಭಾಷಣ ಕೇಳಲು ಕುಳಿತವರಿಗೆ ಬಣಕಾರರ ಹಾಸ್ಯಭರಿತ ಮಾತುಗಳು ಮಡುಗಟ್ಟಿದ ದುಖ;ಗಳು ಮನಸ್ಸಿನಿಂದ ಮಾಯವಾಗಿ ಬಿಡುತ್ತಿದ್ದವು. ಇನ್ನೊಬ್ಬರನ್ನು ನಗಿಸಿ,ನಕ್ಕು ದುಖ;ವನ್ನು ಮರೆಯುವುದು ಮರೆಸುವುದು ಬಣಕಾರರ ಸ್ವಭಾವವಾಗಿತ್ತು. ಅಂತೆಯೇ ಅವರ ಮಾತಿನಲ್ಲಿನ ಹಾಸ್ಯಗಳು ಕೇಳುಗರಿಗೆ ಹಲವು ಸಂದರ್ಭದಲ್ಲಿ ಚಿಂತೆ ಮೂಡಿಸುತ್ತಿದ್ದವು. ಒಟ್ಟಿನಲ್ಲಿ ಬಣಕಾರರದ್ದು ವಿಚಿತ್ರ ಸ್ವಭಾವದ ವಿನೋದಮಯ ವ್ಯಕ್ತಿತ್ವ.

ಡಾಕ್ಟರೇಟ್ ಪದವಿ: ಈ ನಾಡಿನಲ್ಲಿ ಸಾಹಿತ್ಯದ ಹಲವು ಮುಖಗಳಲ್ಲಿ ಸೃಜನಶೀಲ ಪ್ರತಿಭೆಯನ್ನು ಪಡೆದು ಹಿರಿಮೆ ಸಾಧಿಸಿದವರು ಅನೇಕರಿರಬಹುದು, ಆದರೆ ಸಾಹಿತ್ಯ, ಸಂಶೋಧನ, ಸಮಕಾಲಿನ ರಾಜಕೀಯ ಪ್ರಜ್ಞೆ ಹಾಗೂ ಸಾಮಾಜದ ಸಮಸ್ಯೆಗಳಿಗೆ ಮಿಡಿಯುವ ಸೂಕ್ಷ್ಮ ಪ್ರಜ್ಞೆ, ಭಾಷಾಭಿಮಾನ, ದುರ್ಬಲ ವರ್ಗಗಳ ಆಶೋತ್ತರಗಳಿಗೆ ಸ್ಪಂದಿಸುವ ವಿಶಾಲವಾದ ಹೃದಯ ಇವೆಲ್ಲವುಗಳನ್ನು ಮೇಳವಿಸಿಕೊಂಡ ಪ್ರತಿಭಾವಂತರು ವಿರಳ. ಆದರೆ ಬಣಕಾರರು ಇವೆಲ್ಲವುಗಳಿಗೆ ಪೂರಕವೆಂಬಂತೆ ಇವೆಲ್ಲವುಗಳನ್ನು ಕರಗತಮಾಡಿಕೊಂಡಿದ್ದಾರೆ. ವೈವಿಧ್ಯವನ್ನು ಸಾಧಿಸುವುದು ಮಾತ್ರವಲ್ಲದೆ ಕೈಗೆತ್ತಿಕೊಂಡು ಎಲ್ಲ ಮಹತ್ತರ ಕಾರ್ಯಗಳಲ್ಲಿ ಉನ್ನತಿ ಸಾಧಿಸಬೇಕೆನ್ನುವ ಬಣಕಾರರ ತತ್ಪರತೆ ಅಪೂರ್ವವಾದದ್ದು.

1932 ರಲ್ಲಿ ಬ್ಯಾಡಗಿ ತಾಲೂಕು ಮೋಟೆಬೆನ್ನೂರ ಗ್ರಾಮದಲ್ಲಿ ಜನಿಸಿದ ಶ್ರೀ ಬಣಕಾರರು ಬಡತನದ ಬೇಗೆಯಲ್ಲಿ ತಮ್ಮ ವ್ಯಕ್ತಿತ್ವವನ್ನು ಎಲೆ

ಮರೆಕಾಯಿಯಂತಿದ್ದು ಬೆಟ್ಟದೆತ್ತರದತ್ತ ರೂಪಿಸಿಕೊಂಡಿದ್ದಾರೆ. ಬಾಲ್ಯದಲ್ಲಿಯೇ ಕಾವ್ಯ ರಚನೆ, ನಾಡು–ನುಡಿ, ಜಲ–ಭಾಷೆ, ಗಳಿಗೆ ಧಕ್ಕೆ ಬಂದಾಗ ಬಣಕಾರರು ತಮ್ಮ ಕುಟುಂಬದ ಅನೇಕ ಸಮಸ್ಯೆಗಳ ಮಧ್ಯದಲ್ಲಿ ಅನೇಕ ಚಳುವಳಿಯಲ್ಲಿ ಭಾಗವಹಿಸಿ ಜನರಲ್ಲಿ ಜಾಗೃತಿಯನ್ನುಂಟು ಮಾಡಿದರು. ಇದರ ಜೊತೆ ಜೊತೆಗೆ ಸಾಹಿತ್ಯವನ್ನು ಗಟ್ಟಿಗೊಳಿಸಿಕೊಂಡಿದ್ದರು. ಶ್ರೀಮಂತ ಕುಟುಂಬದಲ್ಲಿ ಬಣಕಾರರು ಜನಿಸಿದರೂ ಬಡತನದ ಅನೇಕ ಮಗ್ಗಲುಗಳಲ್ಲಿ ಬೆಂದರಾಗಿದ್ದರು. ಹೀಗಿರುವಾಗ ಅವರು ಸಾಂಸ್ಕೃತಿಕ ವಲಯದ ಪ್ರಮುಖ ಪ್ರತಿನಿಧಿಯಾಗುತ್ತಾರೆಂದು ಊಹಿಸುವುದು ಕಷ್ಟವಾಗಿತ್ತು.

ತಮ್ಮ ಅಣ್ಣನೊಂದಿಗೆ ಇಂಗ್ಲೀಷ್ ಕಲಿಯಲು ಧಾರವಾಡಕ್ಕೆ ಹೋದಾಗ ಅದೃಷ್ಟವೆಂಬಂತೆ ಹಿರಿಯ ಕವಿ ಸಾಲಿರಾಮಚಂದ್ರರಾಯರ ಸಂಪರ್ಕದೊರಕಿ ತಾವು ಬರೆದ ಅನೇಕ ಪದ್ಯಗಳನ್ನು ತೋರಿಸಿ ಅವರಿಂದ ಶಹಭಾಷಗಿರಿ ಪಡೆದಿದ್ದರು. ಕುವೆಂಪು ಸಾಹಿತ್ಯದಿಂದ ಈ ಮೊದಲೇ ಪ್ರೇರಿತರಾಗಿದ್ದ ಬಣಕಾರರು ಕವಿ ಸಾಲಿರಾಮಚಂದ್ರರಾಯರ ಮಾರ್ಗದರ್ಶನದಲ್ಲಿ ಬಣಕಾರರು ಒಬ್ಬ ಸೃಜನಶೀಲ ಬರಹಗಾರರಾಗಿ ಶ್ರೇಷ್ಠ ಕವಿಯಾಗಿ ಬೆಳೆದರು. ತಮ್ಮ ಹದಿನೆಂಟನೆಯ ವಯಸ್ಸಿನಲ್ಲಿ ಇವರ ಪ್ರಥಮ ಕವನ ಸಂಕಲನ ಕಾವ್ಯೋದಯ ಪ್ರಕಟವಾಯಿತು. ಇದಕ್ಕೆ ಸಾಲಿರಾಮಚಂದ್ರರಾಯರು ಮುನ್ನುಡಿ ಬರೆದಿದ್ದರು. ಇದೇ ಸಂದರ್ಭದಲ್ಲಿ ಹಲವು ನಾಟಕಗಳನ್ನು ಬರೆದರು. ಆರ್ಥಿಕ ತೊಂದರೆ ಮುಗ್ಗರಿಸಿದಾಗ ಬಣಕಾರರು ಆಯ್ದುಕೊಂಡಿದ್ದು ಪತ್ರಿಕೋದ್ಯಮವನ್ನು ಹುಬ್ಬಳ್ಳಿಯಲ್ಲಿ 'ನವಯುಗ' ಪತ್ರಿಕೆಯ ಉಪಸಂಪಾದಕರಾಗಿ, ಕೆಲವು ವಾರ ಪತ್ರಿಕೆಗಳ ಸಂಪಾದಕರಾಗಿ ಕೆಲಸ ಮಾಡಿದರು. ಪತ್ರಿಕೋದ್ಯಮದಲ್ಲಿನ ಈ ಅನುಭವ ಹಲವಾರು ದೃಷ್ಟಿಯಲ್ಲಿ ಅವರ ಪ್ರತಿಭೆಗೆ ವಿಶಿಷ್ಠವಾದ ರೂಪವನ್ನು ಕೊಟ್ಟಿತು. ವ್ಯಾಪಕವಾದ ಅನುಭವಗಳ ಜೊತೆಗೆ ಜನಸಾಮಾನ್ಯರಿಗೂ ಅರ್ಥವಾಗುವ ರೀತಿಯಲ್ಲಿ ಭಾಷೆಯನ್ನು ಬಳಸುವುದನ್ನು ಸುಲಲಿತವಾಗಿ ಬಣಕಾರರು ತಿಳಿದುಕೊಂಡರು. ಪತ್ರಿಕೋದ್ಯಮಿಯಾಗಿ, ಸಮಕಾಲಿನ ಸಾಮಾಜಿಕ ಸಮಸ್ಯೆಗಳ ಬಗ್ಗೆ ಸ್ಪಂದಿಸುವುದನ್ನು ಬಣಕಾರರು ಈ ಸಂದರ್ಭದಲ್ಲಿ ಕಲಿತುಕೊಂಡರು.

ಬಣಕಾರರು ಆಯ್ದುಕೊಂಡ ವೃತ್ತಿ ಏನೇ ಇರಲಿ ನಿರಂತರ ಅಧ್ಯಯನ ಹಾಗೂ ವಿದ್ವತ್ತಿನ ಸಂಪಾದನೆ ಎಡಬಿಡದೆಸಾಗಿದವು. ತದನಂತರದಲ್ಲಿ ತಮ್ಮ ಅವಿರತದ ಪರಿಶ್ರಮದ ಫಲವಾಗಿ ಸಾಹಿತ್ಯದ ಹಲವು ಪ್ರಕಾರದ ಶ್ರೇಷ್ಠ ಕೃತಿಗಳು ಹೊರಬಂದವು. ಕಾವ್ಯೋದಯ, ಬಣ್ಣದ ಕಾರಂಜಿ, ಅಪರಂಜಿ, ಹೊಸಹುಟ್ಟು

ಕಾವ್ಯ ಕೃತಿಗಳಾದರೆ, ಬಣಕಾರರ ವಚನಗಳ ವಚನ ದೀಪ್ತಿ, ನೂತನ ವಚನಗಳು, ಅವರ ವಚನ ಕೃತಿಗಳಾಗಿವೆ.

ಬಣಕಾರರು ಸುಮಾರು ಐದು ದಶಕಗಳವರೆಗೆ ಸಾಹಿತ್ಯ ಸೇವೆಯಲ್ಲಿ ತೊಡಗಿಕೊಂಡಿದ್ದು, ಕವಿತೆ, ನಾಟಕ, ಕಥೆ, ಜೀವನ ಚರಿತ್ರೆ, ವಚನ, ಮಹಾಕಾವ್ಯ, ಸಂಶೋಧನಾ ಗ್ರಂಥ, ಸಂಪಾದನೆ, ಕನ್ನಡ ನಾಡು ನುಡಿಗೆ ಸಂಬಂಧಪಟ್ಟ ಕೃತಿಗಳಾಗಿವೆ. ಹೀಗೆ ಬಣಕಾರರ ಸಾಹಿತ್ಯ ವೈವಿಧ್ಯಮಯದಿಂದ ಕೂಡಿದೆ. ಸುಮಾರು 35 ಕ್ಕೂ ಹೆಚ್ಚೂ ಕೃತಿಗಳ ರಚನೆ ಮಾಡಿ ಕನ್ನಡ ಕೃಷಿ ಸಾಹಿತ್ಯದಲ್ಲಿ ಕೃಷಿಗೈದ ಬಣಕಾರರ ಸಾಹಿತ್ಯಕ್ಕೆ ಸಿಗಬೇಕಾದಷ್ಟು ಪ್ರಚಾರ ಸಿಕ್ಕಿಲ್ಲವೆಂಬುದು ಒಂದು ವ್ಯಥೆ.

ಬಣಕಾರರ ಸಾಹಿತ್ಯ ರಚನೆಯ ಮೇರು ಕೃತಿಗಳೆಂದರೆ 'ಮಹದೇವ ಬಣಕಾರರ ವಚನಗಳು', ಭಾಮಿನಿಷಟ್ಪದಿಯಲ್ಲಿ ಬರೆದ ' ವಿಶ್ವ ಬಂಧು ಮರುಳಸಿದ್ಧ ಕಾವ್ಯ' ಹಾಗು 'ಆಂಗ್ಲರ ಆಡಳಿತದಲ್ಲಿ ಕನ್ನಡ' ಇವು ಬಣಕಾರರ ಶ್ರೇಷ್ಠ ಕೃತಿಗಳಾಗಿರುವುದಲ್ಲದೆ ಕನ್ನಡ ಸಾಹಿತ್ಯ ಬದುಕುಳಿಯುವವರೆಗೆ ಉಳಿಯಬಲ್ಲ ಅಮೂಲ್ಯ ಕೃತಿಗಳಾಗಿವೆ.

ಬಣಕಾರರ ವ್ಯಕ್ತಿತ್ವದ ಇನ್ನೊಂದು ಮಗ್ಗುಲೆಂದರೆ ವಿಧಾನ ಸಭೆಯ ಉಭಯ ಸದನಗಳಲ್ಲಿ ಶಾಸಕರಾಗಿ ಅವರು ಸಲ್ಲಿಸಿದ ಸೇವೆ ಅಪೂರ್ವವಾದದ್ದು. ಬಣಕಾರರಿಗೆ ರಾಜಕೀಯ ಅನ್ನುವುದು ವೃತ್ತಿಯೂ ಅಲ್ಲ, ಪ್ರವೃತ್ತಿಯೂ ಅಲ್ಲ ಆದರೆ ರಾಜಕೀಯ ವ್ಯವಸ್ಥೆಯ ಚೌಕಟ್ಟಿನಲ್ಲಿ ಒಬ್ಬ ಸಂವೇದನಾಶೀಲ ವ್ಯಕ್ತಿಯಾಗಿ ಮಾಡಬಹುದಾದ ಕಾರ್ಯವನ್ನು ಮಾಡಿತೋರಿಸಿದ್ದಾರೆ. 1986 ರಲ್ಲಿ ಕನ್ನಡ ಕಾವಲು ಸಮಿತಿಯ ಸದಸ್ಯರಾಗಿದ್ದುಕೊಂಡು ಹಲವು ಬೆಳವಣಿಗೆಗಳನ್ನು ಕಂಡುಕೊಂಡಿದ್ದಾರೆ.

ಬದುಕಿನ ಅನೇಕ ಏರಿಳಿತಗಳಲ್ಲಿ ಬಣಕಾರರು ಮುಗ್ಗರಿಸಿದಾಗ ಅವರನ್ನು ಮುನ್ನಡೆಸಿದವರು ತರಳುಬಾಳು ಹಿರಿಯ ಜಗದ್ಗುರು ಶಿವಕುಮಾರ ಸ್ವಾಮಿಗಳು. ಬಣಕಾರರ ಮತ್ತು ಶ್ರೀಗಳ ಒಡನಾಟ ಹೆಚ್ಚಾಗತೊಡಗಿದಾಗ ಅವರ ಸಾಹಿತ್ಯದ ಧೋರಣೆ ಇಮ್ಮಡಿಯಾಯಿತು. ಸತತ ಶ್ರೀಗಳ ಸಂಪರ್ಕ, ಆಧ್ಯಾತ್ಮ ಸಭೆಗಳಲ್ಲಿ ಭಾಗವಹಿಸುತ್ತಿರುವುದರಿಂದ ಬಣಕಾರರಲ್ಲಿ ವಚನ ಸಾಹಿತ್ಯಾಧ್ಯಯನ ಚಿಗುರೊಡೆಯಿತು.ವಚನ ಸಾಹಿತ್ಯಕ್ಕೆ ಇದು ಪ್ರೇರಣೆಯಾಯಿತು. ಮುಂದೆ ಆಧುನಿಕ ಯುಗದಲ್ಲಿ ವಚನ ಪ್ರಾಕಾರವನ್ನು ಪುನರುಜ್ಜೀವನ ಗೊಳಿಸುಲ್ಲಿ ಬಣಕಾರರು ಯಶಸ್ವಿಯಾದರು. ಸಂಪ್ರದಾಯದ ವಚನಗಳಲ್ಲಿ ಕಂಡು ಬರುವ

ಸರಳತೆಯ ಗುಣಗಳನ್ನು ಉಳಿಸಿಕೊಂಡು ಆ ಪ್ರಕಾರವನ್ನು ಆಧುನಿಕ ಸಂವೇದನೆಯ ಅಭಿವ್ಯಕ್ತಿಗೆ ಅವರು ಬಳಸಿಕೊಂಡರು.

ಬಣಕಾರರ ಅತ್ಯುತ್ತಮ ಸಂಶೋಧನಾ ಕೃತಿ 'ಆಂಗ್ಲರ ಆಡಳಿತದಲ್ಲಿ ಕನ್ನಡ' ಹಲವು ರೀತಿಯಲ್ಲಿ ಅದ್ವಿತೀಯವಾದದ್ದು. ಒಂದು ವಿಶ್ವವಿದ್ಯಾಲಯವು ಹಲವಾರು ವರ್ಷಗಳಲ್ಲಿ ಮಾಡಬಹುದಾದ ಸಂಶೋಧನೆಯನ್ನು ಬಣಕಾರರು ಅತೀ ಕಡಿಮೆ ಅವಧಿಯಲ್ಲಿ ಸಾಧಿಸಿತೋರಿಸಿದ್ದಾರೆ. ಆಡಳಿತದಲ್ಲಿ ಕನ್ನಡ ಬಳಕೆಯು ಇತ್ತೀಚಿನದ್ದಾಗಿದೆ. ಹೀಗಾಗಿ ಆಡಳಿತ ಭಾಷೆಯಾಗಿ ಕನ್ನಡವನ್ನು ಅನುಷ್ಠಾನಕ್ಕೆ ತಂದ ಬಗ್ಗೆ ಅಚ್ಚರಿ ಹುಟ್ಟಿಸಬಹುದಾದಂತಹ ಚಾರಿತ್ರ್ಯಿಕ ದಾಖಲೆಗಳನ್ನು ಈ ಕೃತಿಯಲ್ಲಿ ಶ್ರೀ ಬಣಕಾರರು ವಿಶ್ಲೇಶಿಸಿದ್ದು ಗಮನಾರ್ಹವಾಗಿದೆ.

ಪ್ರಾಚೀನ ಕಾಲದಿಂದಲೂ ಕನ್ನಡವೇ ಆಡಳಿತ ಭಾಷೆಯಾಗಿತ್ತು, ಆದರೆ ಇತ್ತೀಚೆಗೆ ಆಡಳಿತದ ಎಲ್ಲ ಹಂತಗಳಲ್ಲಿ ಕನ್ನಡ ಭಾಷೆ ಬಳಕೆಯಾಗದಿರುವುದನ್ನು ಕಂಡು ನೊಂದುಕೊಂಡಿದ್ದ ಬಣಕಾರರು 'ಆಂಗ್ಲರ ಆಡಳಿತದಲ್ಲಿ ಕನ್ನಡ' ಅಮೂಲ್ಯ ಕೃತಿಯನ್ನು ರಚಿಸಿ ಆಡಳಿತದ ಎಲ್ಲ ಹಂತಗಳಲ್ಲಿ ಜನಸಾಮಾನ್ಯರಿಗೆ ಕನ್ನಡವನ್ನು ಬಳಕೆಯಲ್ಲಿ ತಂದಿದ್ದು ಬಣಕಾರರ ಒಂದು ಮಹತ್ವ ಪೂರ್ಣ ಸಾಧನೆಯಂತಿದೆ. ಆಡಳಿತದಲ್ಲಿ ಕನ್ನಡ ಭಾಷೆಯ ಬಳಕೆಯ ಕುರಿತು ರಚಿಸಿದ ಈ ಅಪೂರ್ವ ಗ್ರಂಥ ಚರಿತ್ರೆಯ ಇತಿಹಾಸದ ಪುಟಗಳಲ್ಲಿ ಕನ್ನಡಿಗರಿಗೆ ಭಾಷೆಯ ವಿಚಾರದಲ್ಲಿ ಒಂದು ಹೊಸ ಮೈಲಿಗಲ್ಲು ಸ್ಥಾಪನೆಯಾದಂತೆ ಎಂದು ಕರೆಯಬಹುದಾಗಿದೆ.

ವಸ್ತುನಿಷ್ಠವಾದ ಅಧ್ಯಯನ, ಸಂಶೋಧನೆಯ ಸಂಯಮ ಹಾಗೂ ಸಮಗ್ರತೆಯ ಗುಣಗಳನ್ನು 'ಮಹಾಜನ ವರದಿ' ವಿಶ್ಲೇಷಣೆಯಲ್ಲಿ ಬಣಕಾರರು ಗುರುತಿಸಿದ್ದಾರೆ. ಚರಿತ್ರೆ ಹಾಗೂ ದಾಖಲೆಗಳ ಆಧಾರದ ಮೇಲೆ ವಾದವನ್ನು ಮಂಡಿಸುವ ಬಣಕಾರರ ರೀತಿ ಹಲವಾರು ಪೂರ್ವಾಗ್ರಹಳನ್ನು ತಿಳಿಯಾಗಿಸುತ್ತದೆ. ಮಂಡಲ ವರದಿಯ ವಿಶ್ಲೇಷಣೆ ಕೂಡ ಇದೇ ಬಗೆಯ ಕೃತಿಯಾಗಿದೆ.

ಒಟ್ಟಾರೆಯಾಗಿ ಶ್ರೀ ಬಣಕಾರ ಸಂಶೋಧನೆಯ ಮುಖ್ಯ ಗುಣವೆಂದರೆ ಕನ್ನಡದ ಅಭಿಮಾನ, ದುರ್ಬಲವರ್ಗದ ಬಗೆಗಿನ ಸಾಮಾಜಿಕ ಕಾಳಜಿ ಇವುಗಳು ಎಷ್ಟು ಪ್ರಖರಗೊಂಡಿವೆಯೋ ಅವರ ಸಂಶೋಧನಕೃತಿಗಳು ಅಷ್ಟೇ ನಿಚ್ಚಳವಾಗಿವೆ. ಕನ್ನಡ ನಾಡು ಹಾಗೂ ಭಾಷೆಯ ಇತಿಹಾಸದ ಅಧ್ಯಯನದಲ್ಲಿ ಶ್ರೀ ಬಣಕಾರರ ಕೃತಿಗಳಿಗೆ ಶಾಶ್ವತವಾದ ಒಂದು ಅದ್ಭುತ ಸ್ಥಾನವಿದೆ. ಬಣಕಾರರ ಸಂಶೋಧನಾ ಕೃತಿಗಳು ಓದುಗರನ್ನು ಅಚ್ಚರಿಮೂಡಿಸುದಲ್ಲದೆ, ಗಂಭೀರ ವಿಮರ್ಶೆ ಹಾಗೂ ಅಧ್ಯಯನಗಳಿಗೆ ವಸ್ತುನಿಷ್ಠವಾಗಿವೆ. ಅವರ ಕೃತಿಗಳನ್ನು ಕುರಿತು ಹಲವಾರು ಸಂಶೋಧನಾ ಪ್ರಬಂಧಗಳು ರಾಜ್ಯದ ವಿಶ್ವವಿದ್ಯಾಲಯಗಳಲ್ಲಿ ಮನ್ನಣೆ ಪಡೆದಿವೆ. 1986 ರಲ್ಲಿ ಬಣಕಾರರಿಗೆ ರಾಜ್ಯ ಪ್ರಶಸ್ತಿ ಮತ್ತು ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳು ದೊರಕಿವೆ.

ಕರ್ನಾಟಕ ಸಾಹಿತ್ಯ ಪರಂಪರೆಗೆ ದೇಣಿಗೆಯಾದ ಶ್ರೀ ಬಣಕಾರರು ವಿಶ್ವ ವಿದ್ಯಾಲಯಗಳು ಮಾಡಬಹುದಾದ ಸಾಧನೆಗಳನ್ನು ಮಾಡಿದ್ದಾರೆ. ಅಂತೆಯೇ ಬಣಕಾರರು ಅವರ ಪ್ರತಿಭೆಯನ್ನು, ಸಾಧನೆಯನ್ನು ಅಲ್ಲದೆ ಮುಖ್ಯವಾಗಿ ಅವರಲ್ಲಿನ ಸಾಮಾಜಿಕ ಕಳಕಳಿಯನ್ನು ಕಂಡು ಗೌರವಿಸಿ ಮೈಸೂರ ಕುವೆಂಪು ವಿಶ್ವವಿದ್ಯಾಲಯವು ಅತ್ಯುನ್ನತ ಗೌರವ 'ಡಾಕ್ಟರೇಟ್' ಪದವಿ ನೀಡಿ ಗೌರವಿಸಿದೆ.

**ಪ್ರಶಸ್ತಿ ಹಾಗೂ ಸನ್ಮಾನಗಳು:** ಮಹದೇವ ಬಣಕಾರರ ಕನ್ನಡ ಭಾಷೆಗೆ ಮತ್ತು ಗಡಿ ನಾಡಿನ ಬಗ್ಗೆ ಇದ್ದ ಅಭಿಮಾನಕ್ಕಾಗಿ ಹಾಗೂ ಉತ್ತಮ ಗ್ರಂಥಗಳ ಸಂಶೋಧನೆಗಾಗಿ ಅಲ್ಲದೆ ಅವರ ವಾಕ್ ಚಾತುರ್ಯಕ್ಕಾಗಿ ಮುಖ್ಯವಾಗಿ ಅವರ ಮೇರು ಕೃತಿಗೆ ಸಂಬಂಧಿಸಿದಂತೆ ಸಲ್ಲಿಸಿದ ಅನುಪಮ ಸೇವೆಗೆ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಮತ್ತು ಕನ್ನಡ ನಾಡು ನುಡಿಗೆ ಸಂಬಂಧಪಟ್ಟ ಅನೇಕ ಸಮಾರಂಭಗಳಲ್ಲಿ, ನಾಡಿನ ಹಲವು ಮಠಮಾನ್ಯಗಳ ಸಮಾರಂಭಗಳಲ್ಲಿ ಭಾಗವಹಿಸುವ ಅನೇಕ ಅವಕಾಶಗಳು ಒದಗಿ ಬಂದವು. ಆ ಎಲ್ಲ ಸಮಾರಂಭಗಳಲ್ಲಿ ಉತ್ತಮ ಉಪನ್ಯಾಸ ನೀಡಿ ಜನ ಮನ ಗೆದ್ದಿದ್ದಾರೆ. ಅಲ್ಲದೆ ಸಾವಿರಾರು ಕಾರ್ಯಕ್ರಮಗಳಲ್ಲಿ ಸನ್ಮಾನಿತರಾಗಿದ್ದಾರೆ.

ಹುಬ್ಬಳ್ಳಿ, ಧಾರವಾಡ, ಕೊಪ್ಪಳ, ಬೀದರಗಳಲ್ಲಿ ಈ ಹಿಂದೆ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಭಾಷಣ ಮಾಡಿ ಚಪ್ಪಾಳೆ ಗಿಟ್ಟಿಸಿಕೊಂಡಿದ್ದಾರೆ. ಮೈಸೂರಲ್ಲಿ ನಡೆದ ವಿಶ್ವ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಭಾಷಣ ಮಾಡಿದ್ದಾರೆ. ವಿಶ್ವ ಕನ್ನಡ ಸಾಹಿತ್ಯ ಸಮ್ಮೇಳನ, ಮೈಸೂರಲ್ಲಿ ಭಾಷಣ, ಸಾಹಿತ್ಯ ಪರಿಷತ್ತಿನ ಅಮೃತಮಹೋತ್ಸವದಲ್ಲಿ ಸತ್ಕಾರ ಭಾಷಣ ಹೀಗೆ ಪ್ರಮುಖ ಭಾಷಣಕಾರರಾಗಿ ಬಣಕಾರರು ಜನಪ್ರಿಯರಾಗಿದ್ದಾರೆ.

ನಾಡಿನ ಅನೇಕ ಕವಿಗೋಷ್ಠಿಯಲ್ಲಿ ಭಾಗವಹಿಸಿ ತಾನೇ ಸ್ವತ; ರಚಿಸಿದ ಕವಿತೆಗಳ ವಾಚನ ಮಾಡಿದ್ದಾರೆ. ಹುಬ್ಬಳ್ಳಿಯ ಪ್ರತಿಷ್ಠಿತ ಮೂರುಸಾವಿರಮಠ, ಇಳಕಲ್ಲಮಠ, ಗದುಗಿನ ತೋಂಟದಾರ್ಯಮಠ ,ಸಾವಳಗಿಮಠ, ಸಿರಿಗೆರೆಮಠ, ಮುಂತಾದ ನಾಡಿನ ಪ್ರಸಿದ್ಧ ಮಠಗಳಿಂದ ಸನ್ಮಾನಿತರಾಗಿದ್ದಾರೆ.ಧಾರವಾಡ ವಿದ್ಯಾವರ್ಧಕ ಸಂಘದವರು ಬಣಕಾರರ ವಚನ ಸಾಹಿತ್ಯಕ್ಕೆ 1979 ರಲ್ಲಿ ಪುರಸ್ಕಾರ ನೀಡಿ ಗೌರವಿಸಿದ್ದಾರೆ.

ಇವರ ಮಹತ್ವದ ಮರುಳಸಿದ್ಧ ಕಾವ್ಯಕ್ಕೆ ಕನ್ನಡ ಸಾಹಿತ್ಯ ಪರಿಷತ್ತಿನಿಂದ ದತ್ತಿನಿಧಿ ಬಹುಮಾನ ದೊರೆತಿದೆ. ಆದಿ ಚುಂಚನಗಿರಿ ಮಠದಿಂದ ಪ್ರತಿಷ್ಠಾನ

ಬಹುಮಾನ ಇಳಕಲ್ಲ ಮಹಾಸ್ವಾಮಿಗಳಿಂದ ದತ್ತಿನಿಧಿ ಬಹುಮಾನ ಅಲ್ಲದೆ ನಾಡಿನಾದ್ಯಂತ ಸಂಘ ಸಂಸ್ಥೆಗಳು ಬಣಕಾರರ ಸಾಧನೆಯನ್ನು ಕಂಡು ಗೌರವಿಸಿವೆ.

1989 ರಲ್ಲಿ ಬಣಕಾರರು ರಚಿಸಿದ 'ಮರುಳಸಿದ್ಧ ಕಾವ್ಯ' ದ ಕುರಿತು ಸಿರಿಗೆರೆ ತರಳುಬಾಳು ಮಠದಲ್ಲಿ ವಿಚಾರ ಸಂಕಿರಣ ಜರುಗಿತ್ತು. ಆ ವಿಚಾರ ಸಂಕಿರಣದಲ್ಲಿ ಬಣಕಾರರಿಗೆ ಸಂದ ಗೌರವ ಅಷ್ಟಿಷ್ಟಲ್ಲ. ಚಿತ್ರದುರ್ಗ, ಶಿವಮೊಗ್ಗ, ಚಿಕ್ಕಮಗಳೂರ ಜಿಲ್ಲೆಗಳಲ್ಲಿ ಸತ್ಕಾರಗಳು ಬಣಕಾರರಿಗೆ ದೊರೆತಿವೆ.

ಚಿತ್ರದುರ್ಗ ತಾಲೂಕಿನ ಅನೆಗೋಡಿನಲ್ಲಿ ಶ್ರೀ ಮರುಳಸಿದ್ಧ ಟ್ರಸ್ಟಿನವರು ಸಮಗ್ರ ಮರುಳಸಿದ್ಧ ಕಾವ್ಯವನ್ನು ಕಲ್ಲಿನಲ್ಲಿ ಕೆತ್ತಿಸಿ, ವಿಶ್ವಬಂಧು ಮರುಳಸಿದ್ಧ ಕಾವ್ಯವನ್ನು ಕೆತ್ತಿಸಿ ವಿಶ್ವಬಂಧು ಮರುಳಸಿದ್ಧ ಕಾವ್ಯ ಮಂಟಪವನ್ನು ಕಟ್ಟಿಸುವ ಮಹಾದಾಸೆಯನ್ನು ಹೊಂದಿದ್ದರು. ಇವೆಲ್ಲ ಮರುಳಸಿದ್ಧ ಮಹಾಕಾವ್ಯದ ಜನಪ್ರಿಯತೆಗೆ ಹಾಗೂ ಶ್ರೇಷ್ಠತೆಗೆ ಸಾಕ್ಷಿಯಾಗಿದೆ.

ಮಹದೇವ ಬಣಕಾರರ ಅಪೂರ್ವ ಆಕರ ಗ್ರಂಥ 'ಆಂಗ್ಲರ ಆಡಳಿತದಲ್ಲಿ ಕನ್ನಡ' ವು ರಾಷ್ಟ್ರಮಟ್ಟದಲ್ಲಿ ಕೀರ್ತಿ ಮತ್ತು ಗೌರವವನ್ನು ಸಂಪಾದಿಸಿದ ಶ್ರೇಷ್ಠ ಕೃತಿ, ಈ ಒಂದು ಕೃತಿಯ ಸಾಕ್ಷ್ಯಚಿತ್ರ ನಿರ್ಮಾಣವಾಗಿದೆ ಎಂದು ತಿಳಿದು ಬಂದಿದೆ. ಈ ಸಾಕ್ಷ್ಯ ಚಿತ್ರಕ್ಕೆ ಲಕ್ಷ್ಮೀ ನಾರಾಯಣರು ನಿರ್ದೇಶಿಸಿದರೆ, ಸಿ.ವಿ.ಎಲ್ ಶಾಸ್ತ್ರೀಗಳು ನಿರ್ಮಾಪಕರಾಗಿದ್ದಾರೆಂದು ತಿಳಿದು ಬಂದಿದೆ. ಆದರೆ ಆ ಸಾಕ್ಷ್ಯ ಚಿತ್ರ ಮುಂದೆ ಯಶಸ್ವಿ ಕಂಡಿತೋ ಇಲ್ಲವೋ ತಿಳಿದುಬಂದಿರುವುದಿಲ್ಲ.

ಈ ಕೃತಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತವಾಗಿದೆ. ಬಣಕಾರರು 35 ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ನಾಲ್ಕು ಕವನ ಸಂಕಲನಗಳು, ಎರಡು ಕಥಾ ಸಂಕಲನಗಳು, ಹತ್ತು ನಾಟಕಗಳು, 'ಕಲಪನಹಳ್ಳಿಯಲ್ಲಿ ಕಲ್ಪತರು', 'ರಾಮ–ಕಮಲ' ಮತ್ತು 'ಸದ್ಗುಣಗಳ ಸಂಗಮ ಶ್ರೀ ಲಕ್ಷ್ಮೀಕಾಂತಪ್ಪನವರು' ಎಂಬ ಮೂರು ಜೀವನ ಚರಿತ್ರೆಗಳು, ಒಂದು ಮಹಾ ಕಾವ್ಯ ಆಂಗ್ಲರ ಆಡಳಿತದಲ್ಲಿ ಕನ್ನಡವಲ್ಲದೆ ಇನ್ನೂ ಐದಾರು ಕನ್ನಡ ನಾಡು ನುಡಿಗೆ ಸಂಬಂಧಿಸಿದ ಕೃತಿಗಳಾಗಿವೆ. ಇದರಲ್ಲಿ 'ಭಾಷಾ ಅಲ್ಪಸಂಖ್ಯಾತರ ಹಿತ ರಕ್ಷಣೆ'ಎಂಬ ಪುಸ್ತಕವನ್ನು ಇಂಗ್ಲೀಷನಲ್ಲಿ 'The safe guards for Lingustic minorities India' ಎಂಬ ಹೆಸರಿನಲ್ಲಿ ಅನುವಾದಿಸಿ ಪ್ರಕಟಿಸಿದ್ದಾರೆ. ಒಟ್ಟು ನಾಲ್ಕು ಗ್ರಂಥಗಳನ್ನು ರಚಿಸಿದ್ದಾರೆ. ಈ ನಾಲ್ಕು ಗ್ರಂಥಗಳಲ್ಲಿ 'ಶಿವಕುಮಾರ ಚರಿತೆ' ಆಕರ್ಷಕ ಗ್ರಂಥವಾಗಿ ಹೊರಹೊಮ್ಮಿದೆ. ಮೊದಲಿನ 1108 ವಚನಗಳಲ್ಲದೆ ಶಿವಕುಮಾರ ಸ್ತೋತ್ರ ವಚನಗಳಲ್ಲಿ ಒಂದನೂರ ಒಂದು ವಚನಗಳು ಅಡಕವಾಗಿವೆ.

ಹೀಗೆ ಬಣಕಾರರು ಸಾಹಿತ್ಯ ರಚನೆಯ ನಿರ್ಗಳತೆಯನ್ನು ಯಾರೂ ಅಲ್ಲಗಳೆಯಲಾರರು. ಕುಳಿತಲ್ಲಿ ನಿಂತಲ್ಲಿ ,ಆಸ್ಪತ್ರೆಯಲ್ಲಿ ಗಟ್ಟಿ ಸಾಹಿತ್ಯವನ್ನು ರಚಿಸಿದರು. ನೋವಿನಲ್ಲಿಯೂ ನಲಿವನ್ನು ಕಂಡವರು ಮಹದೇವ ಬಣಕಾರರೊಬ್ಬರೆ ಎಂದರೆ ತಪ್ಪಾಗುವುದಿಲ್ಲ. ಇದಕ್ಕೆ ಕಾರಣ ಹುಡುಕಬೇಕಾಗಿಲ್ಲ ಇದಕ್ಕೆಲ್ಲ ಸಾಧ್ಯವಾದದ್ದು ಬಣಕಾರರ ಗಟ್ಟಿತನದ ಸಾಹಿತ್ಯವೊಂದೇ. ಯಾವುದೇ ವ್ಯಕ್ತಿ ಅನಾರೋಗ್ಯದಿಂದ ಬಳಲುತ್ತಾ ಚಿಕಿತ್ಸೆಗೆ ಆಸ್ಪತ್ರೆ ಸೇರಿದರೆ ತಾನು ಕೈಗೊಂಡ ಎಲ್ಲ ಕೆಲಸಗಳು ನಿಂತು ಬಿಡುತ್ತವೆ. ಆದರೆ ಬಣಕಾರರು ಇದಕ್ಕೆ ತದ್ವಿರುದ್ದ, ಆಸ್ಪತ್ರೆಗೆ ಸೇರಿದರೆ ಸಾಕು ಬಣಕಾರರು ಹಿಡಿದ ಎಲ್ಲ ಕೆಲಸಗಳು ನಿರ್ವಿಗ್ನತೆಯಿಂದ ಸಾಗಿಬಿಡುತ್ತಿದ್ದವು. ಹಿಡಿದ ಕೆಲಸವನ್ನು ಎಲ್ಲಿಯಾದರೂ ಸರಿ ಮಾಡಿ ಮುಗಿಸಿ ಬಿಡುವ ಬಣಕಾರರ ಛಲ ಮೆಚ್ಚುವಂತಹದ್ದು. ಬಣಕಾರರ ಎಷ್ಟೋ ಕೃತಿಗಳು ಆಸ್ಪತ್ರೆಯಲ್ಲಿ ರಚಿತಗೊಂಡು ಪ್ರಕಟಗೊಂಡಿವೆ. ಇದನ್ನು ಕಂಡ ಬಣಕಾರರ ಸ್ನೇಹಿತರು ನೀವು ಬೇಗನೆ ಆಸ್ಪತ್ರೆಗೆ ಸೇರುವಂತಾಗಲಿ ಎಂದು ಗೇಲಿ ಮಾಡುತ್ತಿದ್ದರಂತೆ. ಅಂದರೆ ಬಣಕಾರರ ಮತ್ತೊಂದು ಕೃತಿ ಪ್ರಕಟವಾಗುತ್ತದೆ ಎಂಬ ಭಾವನೆಯಿಂದ ಈ ರೀತಿಯಾಗಿ ಗೇಲಿ ಮಾಡುತ್ತಿದ್ದರು.

ಒಟ್ಟಿನಲ್ಲಿ ಬಣಕಾರರು ತಮ್ಮ ಬದುಕಿನ ಅತ್ಯಂತ ಕಷ್ಟಗಳನ್ನು, ನೋವುಗಳನ್ನು ನುಂಗಿ ಆಕಾಶದೆತ್ತರಕ್ಕೆ ಬೆಳೆದು ನಿಂತವರು. ಸಾವು ಬಂದಾಗ ಬರಲಿ ಬದುಕುವವರೆಗೆ ಜೀವನದ ಒಂದೊಂದು ಕ್ಷಣಗಳನ್ನು ಸಾರ್ಥಕವಾಗಿ ಬಳಸಬೇಕೆಂಬ ಮಹಾದಾಸೆ ಬಣಕಾರರದ್ದಾಗಿತ್ತು.

ಗುರು ಭಕ್ತನಾಗಿ, ಪತ್ರಕರ್ತ, ನಾಟಕಗಾರ, ನಟ, ಕ್ರಾಂತಿಕಾರಿ ಕವಿ, ಕತೆಗಾರ, ಭಾಷಣಕಾರ, ವಚನಕಾರ, ಸಂಶೋಧಕ, ಗಡಿ–ನಾಡು–ನುಡಿ, ನೆಲ ಜಲಗಳ ಅತ್ಯುಗ್ರ ಹೋರಾಟಗಾರ, ಸಮಾಜ ಸೇವಕ, ಸಮರ್ಥ ರಾಜಕಾರಣಿ ಹೀಗೆ ಅನೇಕ ಕ್ಷೇತ್ರಗಳಲ್ಲಿ ಸಾಧನೆಗೈದ ಉನ್ನತ  ಗುಣಗಳು ಒಬ್ಬ ವ್ಯಕ್ತಿಯಲ್ಲಿರಲು ಸಾಧ್ಯವೇ? ಸಾಧ್ಯವೆಂಬುದನ್ನು ಬಣಕಾರರನ್ನು ನೋಡಿಯೇ ತಿಳಿದುಕೊಳ್ಳಬೇಕು.ಅವರ ಈ ಒಂದು ಶ್ರಮಕ್ಕೆ ಅನೇಕ ಸನ್ಮಾನ ಸತ್ಕಾರಗಳು ಅವರನ್ನು ಅರಸಿಬಂದಿವೆ.

## ಕಾವ್ಯ ಋಷಿ:

ಬಣಕಾರರು ತಮ್ಮ ಸತ್ವಯುತ ಸಾಹಿತ್ಯ ಕೃಷಿಯಿಂದ ಮೇಲೆ ಬಂದವರು ರಾಜಕೀಯ ಅನ್ನುವದು ಬಣಕಾರರಿಗೆ ವೃತ್ತಿಯೂ ಅಲ್ಲ ಪ್ರವೃತ್ತಿಯೂ ಅಲ್ಲ. ಬಣಕಾರರು ಪ್ರಜಾ ಸಮಾಜವಾದಿ ಪಕ್ಷದಿಂದ ಪ್ರಥಮ ಬಾರಿಗೆ ಶಾಸಕರಾಗಿ ಆಯ್ಕೆಯಾದಗಲೂ ಸಹ, ಪಕ್ಷಕ್ಕೆ ಮಾತ್ರ ಸೀಮಿತವಾಗದೆ ಸಂವಿಧಾನ ಬದ್ಧವಾದ

ನಿಯಮಗಳನ್ನು ಚಾಚೂ ತಪ್ಪದೆ ಪಾಲಿಸುತ್ತಿದ್ದರು. ಬಣಕಾರರು ಪಕ್ಷಗಳ ಜಾತಿಯ ಗಡಿದಾಟಿ ಬೆಳೆದವರು, ಹೀಗಾಗಿ ಪಕ್ಷಾತೀತ ವರ್ಣರಂಜಿತ ವ್ಯಕ್ತಿತ್ವವನ್ನು ಮೈಗೂಡಿಸಿಕೊಂಡಿದ್ದರು. ಹೀಗಾಗಿ ಅವರನ್ನು ಯಾರೂ ಇಂತಹ ಪಕ್ಷದವರೆಂದು ಗುರುತಿಸಿರಲಿಲ್ಲ ಅಲ್ಲದೆ ಪಕ್ಷಗಳಲ್ಲಿ ಅವರನ್ನು ಪ್ರೀತಿಸುವವರೆ ಹೆಚ್ಚಾಗಿದ್ದರು.

ಬಾಲ್ಯದಿಂದಲೇ ಪ್ರಗತಿಗಾಮಿ ದೋರಣೆ ಹೊಂದಿದ್ದ ಬಣಕಾರರು ಅಂಧಶ್ರದ್ಧೆ, ಅಸ್ಪೃಶ್ಯತೆ, ಅಜ್ಞಾನ, ಡಾಂಭಿಕ ಭಕ್ತಿ ಮೊದಲಾದವುಗಳನ್ನು ರಾಜಕೀಯ ಪ್ರವೇಶಿಸುವ ಮುನ್ನವೇ ತಮ್ಮ ವಚನಗಳ ಮೂಲಕ ಖಂಡಿಸುತ್ತ ಬಂದಿದ್ದಾರೆ. ಜಾತಿಯ ವಿಷ ಬೀಜ ಬಿತ್ತಿ ಸಮಾಜವನ್ನ ಅಧೋಗತಿಗೆ ತರುವಂತಹ ವ್ಯಕ್ತಿಗಳನ್ನು ತಮ್ಮ ಸಾಹಿತ್ಯದ ಬರವಣಿಗೆಯ ಮೂಲಕ ಖಂಡಿಸುತ್ತಾ ಬಂದಿರುತ್ತಾರೆ. ಪಕ್ಷ ಜಾತಿಯನ್ನು ಮೀರಿ ಬೆಳೆದ ಬಣಕಾರರ ವ್ಯಕ್ತಿತ್ವ ಬ್ಯಾಡಗಿ ಕ್ಷೇತ್ರದಿಂದ ವಿಧಾನ ಸಭೆವರೆಗೂ ಹಬ್ಬಿತ್ತು.

ಶಾಸಕರಾಗಿದ್ದುಕೊಂಡು ನಾನೇ ದೊಡ್ಡವನಾಗಬೇಕು ಕ್ಷೇತ್ರದಲ್ಲಿ ನನ್ನ ಮಾತೇ ನಡೆಯಬೇಕು, ಅಧಿಕಾರಿ ವರ್ಗ ನಾನು ಹೇಳಿದಂತೆ ಕೇಳಬೇಕು ನನ್ನದೇ ವೇದವಾಕ್ಯವಾಗಬೆಕು, ಎಲ್ಲವೂ ನನಗೆ ಸೇರಬೇಕೆಂದು ಬಯಸಿ ಮತ್ತೊಬ್ಬರನ್ನು ತುಳಿಯುವ ಪ್ರವೃತ್ತಿ ಇಂದಿನ ರಾಜಕಾರಣದಲ್ಲಿ ಹೊಸದೇನಲ್ಲ. ಎಷ್ಟೋ ರಾಜಕರಣಿಗಳು ಇದನ್ನು ಮೈಗೂಡಿಸಿಕೊಂಡು ಮೆರೆಯುತ್ತಿದ್ದರೆ, ಬಣಕಾರರು ಮಾತ್ರ ಇದಕ್ಕೆ ಅಪವಾದವೆಂಬಂತೆ ಇದ್ದರು.

ಬಣಕಾರರು ಪಕ್ಷ ಜಾತಿಯನ್ನು ಮೀರಿದ ವ್ಯಕ್ತಿ ಹೀಗಾಗಿ ಜೊತೆಯಲ್ಲಿದ್ದವರನ್ನು ಸಮಾಜದ ಕಟ್ಟಕಡೆಯ ವ್ಯಕ್ತಿಗಳನ್ನು ಶ್ರೀಮಂತರ ದಬ್ಬಾಳಿಕೆಯಿಂದ ಶೋಷಿತಗೊಂಡ ಜನರನ್ನು, ತಮ್ಮ ತೆಕ್ಕೆಗೆ ತೆಗೆದುಕೂಂಡು ಬೆಳಸಿದ್ದಾರೆ ಇವರ ಬೆಳವಣಿಗೆಯನ್ನು ಕಂಡು ಸಂತಸ ವ್ಯಕ್ತಪಡಿಸಿದ ಪ್ರಸಂಗವೂ ಇದೆ.

## ಸಮರ್ಥ ರಾಜಕಾರಣಿಯಾಗಿ ಬಣಕಾರರು:

ಬಣಕಾರರು ತಮ್ಮ ಸತ್ವಯುತ ಸಾಹಿತ್ಯ ಕೃಷಿಯಿಂದ ಮೇಲೆ ಬಂದವರು. ರಾಜಕೀಯ ಅನ್ನುವುದು ಬಣಕಾರರಿಗೆ ವೃತ್ತಿಯೂ ಅಲ್ಲ ಪ್ರವೃತ್ತಿಯೂ ಅಲ್ಲವೆಂದೇ ಹೇಳಬೇಕು. ಆದರೆ ರಾಜಕೀಯ ವ್ಯವಸ್ಥೆಯ ಚೌಕಟ್ಟಿನಲ್ಲಿ ಒಬ್ಬ ಕ್ರೀಯಾಶೀಲ ವ್ಯಕ್ತಿ ಮಾಡಬಹುದಾದ ಮಹತ್ತರ ಸಾಧನೆಯನ್ನು ರಾಜಕೀಯ ಕ್ಷೇತ್ರದಲ್ಲಿ ಸಾಧಿಸಿತೋರಿಸಿದ್ದಾರೆ.

ಮೂಲತ ಕವಿ ಹೃದಯವನ್ನು ಹೊಂದಿದ ಬಣಕಾರರಿಗೆ, ತಾವೊಬ್ಬ ಸೃಜನಶೀಲ ರಾಜಕೀಯ ವ್ಯಕ್ತಿಯಾಗಿ ಆಳೆತ್ತರಕ್ಕೆ ಬೆಳೆಯುತ್ತೇನೆಂಬ ಕನಸು ಕಂಡಿರಲಿಲ್ಲ. ಸಾಮಾನ್ಯ ಜನರ ನಿವೇದನೆ, ಸುಖ ದುಃಖಗಳನ್ನು ನಿರರ್ಗಳವಾಗಿ ಅರ್ಥಮಾಡಿಕೊಳ್ಳಬಲ್ಲ ಬಣಕಾರರು ಸಂವೇದನಾ ಶೀಲರಾಗಿದ್ದರು. ಒಬ್ಬ ಸಾಮಾನ್ಯ ವ್ಯಕ್ತಿಯ ಕಷ್ಟ ಸುಖಗಳನ್ನು ಸರಳವಾಗಿ ಅರ್ಥಮಾಡಿಕೊಳ್ಳ ಬಲ್ಲ ಶಕ್ತಿ ಕವಿ ಹೃದಯ ಹೊಂದಿದ ಪ್ರತಿಯೊಬ್ಬ ರಾಜಕಾರಣಿಗೆ ಇದೆ ಎಂಬುದನ್ನು ಬಣಕಾರರಿಂದಲೇ ತಿಳಿದುಕೊಳ್ಳಬೇಕಾಗಿದೆ. ಅಜಾತಶತ್ರು ಎಂದೇ ಕರೆಸಿಕೊಂಡಿರುವ ನಮ್ಮ ಮಾಜಿ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿಯವರು ಈ ದೇಶದ ಸರ್ವ ಜನರ ಪ್ರೀತಿಗೆ ಪಾತ್ರರಾಗಿರುವುದು ಅವರ ಕವಿ ಹೃದಯದಿಂದ ಎಂಬುದನ್ನು ಇಲ್ಲಿ ನೆನಪಿಸಿಕೊಳ್ಳಬೇಕಾಗಿದೆ. ಒಟ್ಟಿನಲ್ಲಿ ಕವಿ ಹೃದಯದ ಶ್ರೇಷ್ಠ ರಾಜಕಾರಣಿಗಳಲ್ಲಿ ಬಣಕಾರರು ಒಬ್ಬರಾಗಿದ್ದಾರೆ ಎಂಬುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಕನ್ನಡ ನಾಡಿನ ನಾಡು–ನುಡಿ– ಭಾಷೆಯ ಬಗ್ಗೆ ಅಪಾರವಾದ ಜ್ಞಾನವನ್ನು ಹೊಂದಿದ ಬಣಕಾರರು ಅಪ್ರತಿಮ ಹೋರಾಟಗಾರರು ಹೌದು. ಕನ್ನಡ ನಾಡಿನ ಬಗ್ಗೆ ಇದ್ದ ಕಾಳಜಿ ಜನ ಸಾಮಾನ್ಯರ ಸುಖ ದುಃಖಗಳಿಗೆ ನಿಜವಾಗಿ ಸ್ಪಂದಿಸಬಲ್ಲ, ಪರಿಹರಿಸಬಲ್ಲ, ನಗಿಸಬಲ್ಲ ಬಣಕಾರರು, ಬಡವರ ದೀನ ದಲಿತರ ಆಶೋತ್ತರಗಳನ್ನು ಕಾಲಕ್ಕೆ ತಕ್ಕಂತೆ ಪರಿಹರಿಸಬಲ್ಲ ಶಕ್ತಿಯನ್ನು ಹೊಂದಿದ್ದರಲ್ಲದೆ, ಕೈಲಾದ ಸಹಾಯವನ್ನು ಮಾಡುವ ಮಾತೃ ಹೃದಯವನ್ನು ಹೊಂದಿದವರಾಗಿದ್ದರು.

ಇವೆಲ್ಲವುಗಳ ಪರಿಣಾಮವಾಗಿ ಜನ ಮನ್ನಣೆಗೆ ಪಾತ್ರರಾಗಿದ್ದ ಬಣಕಾರರನ್ನು, ಅವರ ಸ್ನೇಹಿತ ಬಳಗ, ಸಾಹಿತ್ಯಾಸಕ್ತರು, ನಾಡಿನ ಚಿಂತಕರು, ರಾಜಕೀಯ ಮುಖಂಡರು ಒಟ್ಟಾಗಿ ಸೇರಿಕೊಂಡು ಬಣಕಾರರನ್ನು ರಾಜಕೀಯ ಕ್ಷೇತ್ರದಲ್ಲಿ ಧುಮುಕಿಸಬೇಕೆಂಬ ಬಲವಾದ ಆಸೆ ಆಕಾಂಕ್ಷೆಗಳನ್ನು ಹೊಂದಿ, ಬಣಕಾರರ ಮೇಲೆ ಒತ್ತಡ ಹೇರಿದರು. ರಾಜಕೀಯ ಕ್ಷೇತ್ರದಿಂದ ದೂರವಾಗಿದ್ದುಕೊಂಡ ಬಣಕಾರರಿಗೆ ಇದು ನುಂಗಲಾರದ ತುತ್ತಾಯಿತು. ಅಂತಿಮವಾಗಿ ಒತ್ತಡಕ್ಕೆ ಮಣಿದ ಬಣಕಾರರು ಯಾವುದಾದರೂ ಕ್ಷೇತ್ರದಿಂದ ವಿಧಾನ ಸಭೆಯ ಸದಸ್ಯ ಸ್ಥಾನಕ್ಕೆ ಸ್ಪರ್ಧಿಸುವ ಇಂಗೀತವನ್ನು ವ್ಯಕ್ತಪಡಿಸಿದರು.

1967 ರಲ್ಲಿ ಅಖಂಡ ಧಾರವಾಡ ಜಿಲ್ಲೆಯ ಅಂದರೆ ಈಗಿನ ಹಾವೇರಿ ಜಿಲ್ಲೆಯ ಬ್ಯಾಡಗಿ ಕ್ಷೇತ್ರಕ್ಕೆ ಪ್ರಜಾ ಸಮಾಜವಾದಿ ಪಕ್ಷದಿಂದ ಸ್ಪರ್ಧಿಸಿದರು. ಬ್ಯಾಡಗಿ ತಾಲೂಕಿನ ಮೊಟೇಬೆನ್ನೂರ ಇವರ ಹುಟ್ಟೂರು, ಹೀಗಾಗಿ ಬಣಕಾರರಿಗೆ ಮತ್ತಷ್ಟು ಚುನಾವಣೆ ದೃಷ್ಟಿಯಿಂದ ಅನೂಕೂಲವಾಯಿತು. ಇದೇ ಗ್ರಾಮದ ಹುತಾತ್ಮ ಮೈಲಾರ

ಮಹದೇವರ ಧರ್ಮಪತ್ನಿ ಮೈಲಾರ ಸಿದ್ಧಮ್ಮನವರು ಆ ಚುನಾವಣೆಯಲ್ಲಿ ಬಣಕಾರರ ಎದುರಾಳಿ ಯಾದರು.ಮೈಲಾರವರ ಕುಟುಂಬದ ಬಗ್ಗೆ ಬಣಕಾರರಿಗೆ ಅಪಾರವಾದ ಗೌರವ ಎಲ್ಲಿಲ್ಲದ ಅಭಿಮಾನ. ಹುತಾತ್ಮ ಮೈಲಾರ ಮಹದೇವರವರ ದೇಶ ಪ್ರೇಮವನ್ನು ಯಾವಾಗಲೂ ಕೊಂಡಾಡುತ್ತಿದ್ದ ಬಣಕಾರರಿಗೆ ಕಾಂಗ್ರೆಸ್ ಪಕ್ಷದಿಂದ ಮೈಲಾರ ಸಿದ್ಧಮ್ಮನವರು ಚುನಾವಣೆಯಲ್ಲಿ ಬಣಕಾರರಿಗೆ ಎದುರಾಳಿಯಾದದ್ದು ಒಂದು ರೀತಿಯಲ್ಲಿ ಬಣಕಾರರಿಗೆ ಸಂಕಟ–ಪ್ರಾಯವಾಗಿತು.

ಬಣಕಾರರು ತಮ್ಮ ಸಾಹಿತ್ಯ ದೃಷ್ಠಿಯಿಂದ ಚುನಾವಣೆಯ ಪೂರ್ವದಲ್ಲಿ ಸಾಕಷ್ಟು ಆ ಕ್ಷೇತ್ರದಲ್ಲಿ ಜನಮನ್ನಣೆ ಪಡೆದಿದ್ದರು. ಆದಾಗ್ಯೂ ಸಹ ಮಹದೇವ ಬಣಕಾರರು ಮತ್ತು ಮೈಲಾರ ಸಿದ್ಧಮ್ಮನವರ ನಡುವಿನ ಚುನಾವಣೆ ಮಹಾ ಚುನಾವಣೆಯಾಗಿ ಪರಿಣಮಿಸಿತು.

ಪ್ರತಿಷ್ಠಿತ ಚುನಾವಣೆಯಲ್ಲಿ ಮಹದೇವ ಬಣಕಾರರು ಮೈಲಾರ ಸಿದ್ಧಮ್ಮನವರನ್ನು ಸೋಲಿಸಿ ಕರ್ನಾಟಕ ವಿಧಾನ ಸಭೆಯ ಸದಸ್ಯರಾಗಿ ಚುನಾಯಿತರಾದರು.

ವಿಧಾನ ಸಭೆಯ ಸದಸ್ಯರಾದ ಕೆಲವೇ ದಿನಗಳಲ್ಲಿ ಬಣಕಾರರು ವಿಧಾನ ಸಭೆಯಲ್ಲಿ ಸಮರ್ಥ ಶಾಸಕರೆಂಬ ಹೆಸರು ಪಡೆದರು. ಬಣಕಾರ ಬುದ್ಧಿ ಚಾತುರ್ಯತೆಯನ್ನು, ನೆನಪಿನ ಶಕ್ತಿಯನ್ನೂ ಯಾರೂ ಅಳೆಯುವಂತಿಲ್ಲ. ಪ್ರತಿ ವಿಧಾನ ಸಭೆಯ ಕಲಾಪಗಳಲ್ಲಿ ಯಾವುದೇ ವಿಷಯದ ಮೇಲಾದರೂ ಅಧಿಕೃತವಾಗಿ ಅಂಕಿ ಅಂಶಗಳ ಸಮೇತವಾಗಿ ಚರ್ಚಿಸುತ್ತಿದ್ದರು. ಮೊದಲೇ ಗ್ರಾಮೀಣ ಪ್ರದೇಶಗಳ ಸುತ್ತ ಓಡಾಡಿಕೊಂಡಿದ್ದ ಬಣಕಾರರಿಗೆ, ಗ್ರಾಮೀಣ ಪ್ರದೇಶಗಳ ಸಮಸ್ಯೆಗಳು ವಿಧಾನ ಸಭೆಯ ಕಲಾಪಗಳಲ್ಲಿ ಎದುರಾದರೆ ಸಾಕು ನೀರು ಕುಡಿದಂತೆ ಸಮಸ್ಯೆಗೆ ಪರಿಹಾರ ಕಾಣುವವರೆಗೆ ಹಠ ಬಿಡದೇ ಚರ್ಚಿಸುತ್ತಿದ್ದರು. ಕಲಾಪಗಳಲ್ಲಿ ಬಣಕಾರರು ಮಾತಿಗಿಳಿದರೆ ಸಾಕು ಬಹುತೇಕ ಶಾಸಕರು ಪಕ್ಷ ಬೇಧ ಮರೆತು ಮೇಜು ಚಪ್ಪರಿಸಿ ಬಣಕಾರರನ್ನು ಪ್ರೋತ್ಸಾಹಿಸುತ್ತಿದ್ದರು. ರಾಜಕೀಯ ಗಂಧ ಗಾಳಿ ಗೊತ್ತಿಲ್ಲದೇ ಸಾಹಿತ್ಯ ಅಂತ ಓಡಾಡಿಕೊಂಡಿದ್ದ ಬಣಕಾರರು, ವಿಧಾನ ಸಭೆಯ ಸದಸ್ಯರಾದ ಕೆಲವೇ ದಿನಗಳಲ್ಲಿ ರಾಜಕೀಯವನ್ನು ನೀರು ಕುಡಿದಂತೆ ಕರಗತ ಮಾಡಿಕೊಂಡರು.

ಬಣಕಾರರ ರಾಜಕೀಯ ಬದುಕಿಗೆ ಅವರ ಅಪ್ಪಟ ಮಾತುಗಾರಿಕೆಯೇ ಸಾಕ್ಷಿಯಾಗಿತ್ತು. ತಮ್ಮ ಮಾತಿನ ಮೂಲಕ ಸದನವನ್ನು ಬೇರೆ ದಿಕ್ಕಿನತ್ತ ಕೊಂಡೊಯ್ಯುವ ಚಾಣಕ್ಷತನ ಅವರದಾಗಿತ್ತು. ಹೀಗಾಗಿ ತಮ್ಮ ಮೊದಲ ಶಾಸಕರಾದ ಅವಧಿಯಲ್ಲಿ ಸದನದಲ್ಲಿ ಎಂಥಹ ಸಂಕಷ್ಟದ ಸಮಯದಲ್ಲಾದರೂ ಸುಲಭವಾಗಿ ಸಂಕಷ್ಟಗಳನ್ನು ದಾಟಿ ಬರುತ್ತಿದ್ದರು.

ಬಣಕಾರರು ಶಾಸಕರಾಗಿದ್ದ ಸಂದರ್ಭದಲ್ಲಿ ಸರ್ಕಾರದಲ್ಲಿ ಬಿರುಗಾಳಿಯನ್ನೆಬ್ಬಿಸುವ ಕೇವಲ ಆರು ಜನ ಶಾಸಕರಿದ್ದರು. ಅದರಲ್ಲಿ ಬಣಕಾರರು ಒಬ್ಬರು ಎಂಬುದನ್ನು ಇಂಡಿಯನ್ ಎಕ್ಸಪ್ರೆಸ್ ಪತ್ರಿಕೆ ಬಣಕಾರರನ್ನು ಹೊಗಳಿತ್ತು.

1967 ರಲ್ಲಿ ವಿಧಾನ ಸಭೆಯಲ್ಲಿ ಮಹಾಜನ ವರದಿಯ ಬಗ್ಗೆ ಸುದೀರ್ಘವಾದ ಚರ್ಚೆಗಳು ನಡೆದವು. ಮೊದಲೇ ಗಡಿ–ನಾಡು–ನುಡಿ, ಜಲ–ಭಾಷೆ ಅಂತಾ ಹೋರಾಟದ ಮನೋಭಾವನೆಯೊಂದಿಗೆ ಅಪಾರ ಜನಪ್ರಿಯತೆಯನ್ನು ಸಂಪಾದಿಸಿಕೊಂಡ ಬಣಕಾರರು ಚರ್ಚೆಯಲ್ಲಿ ಸುದೀರ್ಘ ಭಾಷಣ ಮಾಡಿ ತಮ್ಮ ಪಾಂಡಿತ್ಯವನ್ನು ಸದನಕ್ಕೆ ತೋರಿಸಿಯೇ ಬಿಟ್ಟರು.

ಭಾಷಣದ ನಂತರದಲ್ಲಿ ಬಣಕಾರರು 'ರಣಕಹಳೆಯನ್ನು ಊದು' ಎಂಬ ಪದ್ಯವನ್ನು ಓದಿದರು. ವಿಧಾನ ಸಭೆಯಲ್ಲಿ ಓದಿದ ಬಣಕಾರರ ಮೊದಲನೇ ಕವನ ಇದಾಗಿತ್ತು.

> ಯಾರು ಬಂದರು, ಎನು ತಂದರು?
> ದೀನ ದಲಿತರು ಕೊಂದರು
> ಬಡವ ಬಲ್ಲಿದಗೆಂದು ತೋರಿಸಿ, ತಾವೇ ಎಲ್ಲವ ತಿಂದರು.

ಇಂದಿನ ರಾಜಕಾರಣಿಗಳ ಸ್ಥಿತಿಗತಿಗಳನ್ನು ಎತ್ತಿ ತೋರಿಸುವ ಈ ಪದ್ಯ ಮರುದಿನ ಪ್ರಜಾವಾಣಿಯ ಮುಖ ಪುಟದಲ್ಲಿ ಪ್ರಕಟವಾಗಿತ್ತು.

## ಪಕ್ಷ ಜಾತಿ ಮಿರಿ ಬೆಳೆದ ವ್ಯಕ್ತಿತ್ವ :

ಮಹದೇವ ಬಣಕಾರರು ಪ್ರಜಾ ಸಮಾಜವಾದಿ ಪಕ್ಷದಿಂದ ಶಾಸಕರಾಗಿ ಆಯ್ಕೆಯಾದಾಗಲೂ ಸಹ ಪಕ್ಷಕ್ಕೆ ಮಾತ್ರ ಸೀಮಿತವಾಗದೇ ಸಂವಿಧಾನ ಬದ್ಧವಾದವಾದ ನಿಯಮಗಳನ್ನು ಚಾಚು ತಪ್ಪದೇ ಪಾಲಿಸುತ್ತಿದ್ದರು. ಒಂದು ಪಕ್ಷದಿಂದ ಬಣಕಾರರು ಚುನಾಯಿತರಾದರೂ, ಪಕ್ಷಗಳ ಮತ್ತು ಇಂದಿನ ರಾಜಕೀಯ ಬೆಳವಣಿಗೆಗಳಲ್ಲಿ ಹಾಸು ಹೊಕ್ಕಾಗಿರುವ ಜಾತಿ ಎಂಬ ವಿಷಕಾರಿಯಿಂದ ಬಣಕಾರರು ಬಹಳಷ್ಟು ದೂರವಾಗಿದ್ದರು.

ಹೀಗಾಗಿ ಪಕ್ಷಾತೀತ ವರ್ಣರಂಜಿತವಾದ ವ್ಯಕ್ತಿತ್ವವನ್ನು ಮೈಗೂಡಿಸಿಕೊಂಡಿದ್ದರು. ಅಂತಯೇ ಬಣಕಾರರನ್ನು ಯಾರೂ ಇಂಥಹದ್ದೇ ಪಕ್ಷವೆಂದು ಮತ್ತು ಇದೇ ಜಾತಿಯವರು ಎಂದು ಯಾರೂ ಗುರುತಿಸುತ್ತಿರಲಿಲ್ಲ. ಎಲ್ಲ ಪಕ್ಷಗಳಲ್ಲಿ ಎಲ್ಲ

ಜಾತಿಯ ವರ್ಗದ ಶಾಸಕರು ಬಣಕಾರರನ್ನು ಅತೀ ಆತ್ಮೀಯತೆಯಿಂದ, ಪ್ರೀತಿಯಿಂದ ಕಾಣುತ್ತಿದ್ದರು.

ಶಾಸಕರಾಗಿದ್ದುಕೊಂಡು ನಾನೇ ದೊಡ್ಡವನಾಗಬೇಕು, ಕ್ಷೇತ್ರದಲ್ಲಿ ನನ್ನ ಮಾತೇ ವೇದ ವಾಕ್ಯವಾಗಬೇಕು, ಅಧಿಕಾರಿಗಳೆಲ್ಲ ನಾನು ಹೇಳಿದಂತೆ ಕೇಳಬೇಕು, ನನ್ನದೇ ಧೇಯವಾಗಬೇಕೆಂದು ಅಲ್ಲದೇ ಎಲ್ಲವೂ ನನಗೆ ಸೇರಬೇಕೆಂದು ಬಯಸಿ ಮತ್ತೊಬ್ಬರನ್ನು ತುಳಿಯುವ ಪ್ರವೃತ್ತಿ ಇಂದಿನ ರಾಜಕಾರದಲ್ಲಿ ಹೊಸದೇನಲ್ಲ, ಎಷ್ಟೊಂದು ರಾಜಕೀಯ ವ್ಯಕ್ತಿಗಳು ಅದನ್ನು ಮೈಗಂಟಿಸಿಕೊಡಿದ್ದಾರೆಂದು ಹೇಳಲು ಅಸಹ್ಯವೆನಿಸುತ್ತದೆ. ಆದರೆ ಬಣಕಾರರು ಇವೆಲ್ಲವೂಗಳಿಗೆ ಅಪವಾದವೆಂತಿದ್ದರು.

ಇವೆಲ್ಲವುಗಳ ಪರಿಣಾಮವಾಗಿ ಬಣಕಾರರು ಪಕ್ಷ, ಜಾತಿಗಳನ್ನು ಮೀರಿ ಅಪ್ಪಟ ಚಿನ್ನವಾಗಿದ್ದರು. ಜೊತೆಯಲ್ಲಿದ್ದವರನ್ನು, ಸಮಾಜದ ಕಟ್ಟ ಕಡೆಯ ವ್ಯಕ್ತಿಗಳನ್ನು, ಶ್ರೀಮಂತರ ದಬ್ಬಾಳಿಕೆಯಲ್ಲಿ ನೊಂದವರನ್ನು ಬಣಕಾರರು ತಮ್ಮ ತೆಕ್ಕೆಗೆ ತೆಗೆದುಕೊಂಡು ಬೆಳೆಸಿದ್ದಾರೆ. ಇವರ ಬೆಳವಣಿಗೆಗಳನ್ನು ಕಂಡು ಸಂತಷ ವ್ಯಕ್ತಪಡಿಸಿದ ಪ್ರಸಂಗವೂ ಇದೆ. ಕ್ಷೇತ್ರದಲ್ಲಿ ಸಾರ್ವಜನಿಕ ಆಡಳಿತಕ್ಕೆ ಯಾವುದೇ ರೀತಿಯಲ್ಲಿ ಚ್ಯುತಿ ಬರದಂತೆ ಅಧಿಕಾರಿಗಳಿಗೆ ಸೂಕ್ತ ಮಾರ್ಗದರ್ಶನ ನೀಡುತ್ತಿದ್ದರು. 'ಅಧಿಕಾರ ಬಂದಾಗ ಅರಿತು ನಡೆ' ಎಂಬ ಗಾದೆ ಮಾತಿಗೆ ತಕ್ಕಂತೆ ಆಡಳಿತವನ್ನು ನಡೆಸುವ ಸ್ವಭಾವ ಬಣಕಾರರದ್ದಾಗಿತ್ತು. ಅಧಿಕಾರವಿದೆಯೆಂದು ಕ್ಷೇತ್ರದ ಅಧಿಕಾರಿಗಳಿಗೆ ಉಪಟಳ ಎಂದೂ ನೀಡಲಿಲ್ಲ. ಎಲ್ಲ ಅಧಿಕಾರಿ ವರ್ಗದವರನ್ನು ವಿಶ್ವಾಸಕ್ಕೆ ಬಳಸಿಕೊಂಡು ಉತ್ತಮ ಆಡಳಿತವನ್ನು ಜನತೆಗೆ ನೀಡಿದ ಹೆಗ್ಗಳಿಕೆ ಬಣಕಾರರದ್ದಾಗಿತ್ತು.

12ನೇ ಶತಮಾನದಲ್ಲಿನ ಬಸವಣ್ಣನವರ ವೈಚಾರಿಕ ಕ್ರಾಂತಿಗೆ ಮಾರು ಹೋದ ಬಣಕಾರರು ಅದನ್ನೇ, ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಬಂದಿದ್ದರು. ನುಡಿದಂತೆ ನಡೆಯಬೇಕು, ನಡೆದಂತೆ ನುಡಿಯಬೇಕೆನ್ನುವ ಅವರು, ಜಾತಿ, ಮತ ಪಂಥ, ಉಚ್ಚ ನೀಚ, ಮೇಲು ಕೀಳು ಸಿರಿತನ ಬಡತನ ಎಂಬ ತಾರತಮ್ಯವನ್ನು ಹೋಗಲಾಡಿಸಿ ಸರ್ವರಿಗೂ ಸಮಾನತೆಯನ್ನು ತಂದು ಕೊಡುವಲ್ಲಿ ಬಣಕಾರರು ಸಿದ್ಧಹಸ್ತರಾಗಿದ್ದರು.

ಬಣಕಾರರು ಶಾಸಕರಾಗಿದ್ದ ಸಂದರ್ಭದಲ್ಲಿ ಸಾರ್ವಜನಿಕರು ಶಿಫಾರಸ್ಸು ಪತ್ರಕ್ಕಾಗಿ, ಅನೇಕ ಕೆಲಸಗಳನ್ನು ಹೊತ್ತು ತಮ್ಮ ಮನೆಗೆ ಮತ್ತು ವಿಧಾನ ಸಭೆಯವರೆಗೂ ಬಂದವರಿಗೆ ಬಣಕಾರರು, ತಾವೇ ತಮ್ಮ ಸ್ವಂತ ಖರ್ಚಿನಲ್ಲಿ ಅವರ ಕೆಲಸ ಮಾಡಿಕೊಡುತ್ತಿದ್ದರು. ಬಣಕಾರರ ಹತ್ತಿರ ಕೆಲಸಕ್ಕೆ ಯಾರದರೂ ಬಡವರು ಬಂದರೆ

ಅವರಿಗೆ ಊಟ ಹಾಕಿಸಿ, ತಾವೇ ಅಟೋದಲ್ಲಿ ಕರೆದೊಯ್ದು ಆತನ ಕೆಲಸ ಎಲ್ಲೇ ಇರಲಿ ಅದನ್ನು ಮಾಡಿ ಮುಗಿಸಿ ಅವರನ್ನು ಊರಿಗೆ ಕಳುಹಿಸಿಕೊಡುತ್ತಿದ್ದರು. ಒಬ್ಬ ಶಾಸಕನಾಗಿ ಈ ರೀತಿಯಲ್ಲಿ ಸಾರ್ವಜನಿಕ ಬದುಕಿಗೆ ಅಂಟಿಕೊಂವರು ಯಾರಾದರೂ ಇದ್ದರೆ, ಅವರಲ್ಲಿ ಬಣಕಾರರು ಒಬ್ಬರು ಎಂಬುದನ್ನು ಅಲ್ಲಗಳೆಯುವಂತಿಲ್ಲ. ಆದರೆ ಈಗೆಲ್ಲಿ ಇಂಥಹ ಶಾಸಕರು, ಬಹುತೇಕರು ಚುನಾವಣೆಯಲ್ಲಿ ಸ್ಪರ್ಧಿಸುವ ಮುನ್ನ ಸಾರ್ವಜನಿಕರಿಗೆ ನೀಡುವ ಆಶ್ವಾಸನೆಗಳು, ಚುನಾವಣೆ ಮುಗಿದು ಚುನಾಯಿತರಾದ ಮೇಲೆ ನೀಡಿದ ಆಶ್ವಾಸನೆಗಳೆಲ್ಲವೂ ಠುಸ್ಸು. ಅಧಿಕಾರದ ವ್ಯಾಮೋಹಕ್ಕೆ ಮರುಳಾಗಿ ಸಾರ್ವಜನಿಕರ ರಕ್ತವನ್ನು ಹಿಂಡುವ ಎಷ್ಟೋ ಕೊಳ್ಳೇಬಾಕ ರಾಜಕಾರಣಿಗಳನ್ನು ಸದ್ಯದ ಪರಿಸ್ಥಿತಿಯಲ್ಲಿ ಕಾಣುತ್ತಿದ್ದೇವೆ. ಮಾನವೀಯತೆಯನ್ನು ಮರೆತು ಅಧಿಕಾರವನ್ನು ನಡೆಸುವ ಶಾಸಕರಿಗೆ ನಮ್ಮ ರಾಜ್ಯದಲ್ಲಿ ಕೊರತೆನೇ ಇಲ್ಲವೆಂದು ಹೇಳಬಹುದಾಗಿದೆ.

ಮಹದೇವ ಬಣಕಾರರು ಪತ್ರಕರ್ತರಾಗಿ, ಕವಿಗಳಾಗಿ, ಸಂಶೋಧಕರಾಗಿ ಹೀಗೆ ಹಲವು ಕ್ಷೇತ್ರಗಳಲ್ಲಿ ಗಣನೀಯವಾಗಿ ಸೇವೆ ಸಲ್ಲಸಿದಾಗಲೂ ತಮಗಾಗಿ ಏನನ್ನೂ ಸಂಪಾದಿಸಲಿಲ್ಲ. ಒಟ್ಟಿನಲ್ಲಿ ಬಣಕಾರರನ್ನು ಶೂನ್ಯ ಸಂಪಾದನೆಯ ಬರಿಗೈ ಬಸವಣ್ಣನೆಂದೇ ಕರೆಯಬಹುದಾಗಿದೆ. ಬಣಕಾರರು ತಮಗಾಗಿ ಏನನ್ನೂ ಮಾಡಿಕೊಳ್ಳದೆ ಸಮಾಜಕ್ಕಾಗಿ, ಕನ್ನಡನಾಡಿನ ಏಳ್ಗೆಗಾಗಿ, ಇನ್ನೊಬ್ಬರ ಸುಖ ದುಃಖ ಗಳಲ್ಲಿಯೇ ಭಾಗಿಯಾಗಿ ಮಾನವೀಯತೆಯನ್ನು ಮೆರೆದ ವಿಶಿಷ್ಠ ವ್ಯಕ್ತಿಯಾಗಿದ್ದಾರೆ. ರಾಜಕೀಯದಿಂದ ಬಹಳಷ್ಟು ದೂರವಿದ್ದ ಬಣಕಾರರು ಒತ್ತಾಸೆಗೆ ಒಳಗಾಗಿ, ರಾಜಕೀಯಕ್ಕೆ ಧುಮುಕಿ ಶಾಸಕರಾಗಿದ್ದುಕೊಂಡು ಉತ್ತಮ ಆಡಳಿತವನ್ನು ತಂದುಕೊಡುವಲ್ಲಿ ಬಣಕಾರರ ಶ್ರಮ ನಿಜಕ್ಕೂ ಶ್ಲಾಘನೀಯವಾದ್ದು.

## ಸದನದಲ್ಲಿ ಮಹದೇವ ಬಣಕಾರರು:

ಬಣಕಾರರು ವಿಧಾನ ಸಭೆಯ ಸದನದ ಒಳಗೆ ಹೊರಗೆ ನಾಡಿನ ಗಡಿಭಾಗದ ರಕ್ಷಣೆಯ ಕುರಿತು ನಡೆಸಿದ ಭಾಷಣ, ಹೋರಾಟಗಳು ನಿಜಕ್ಕೂ ಶ್ಲಾಘನೀಯವಾದದ್ದು. ಹಿಡಿದ ಅಂಕಿ ಅಂಶಗಳ ಸಮೇತ, ತಮ್ಮ ನೇರ ಹಾಗೂ ನಿಷ್ಠುರ ಮಾತುಗಳಿಂದ ದೀರ್ಘವಾಗಿ ಚರ್ಚಿಸುವುದರ ಪರಿಣಾಮವಾಗಿ, ಕೆಲವು ಶಾಸಕರಿಗೆ ಕಿರಿ ಕಿರಿ ಉಂಟು ಮಾಡುತ್ತಿದ್ದರು. ಹೀಗಾಗಿ ಸದನದ ಒಳಗೆ ಬಣಕಾರರಿಗೆ ಮಾತನಾಡಲು ಅವಕಾಶ ಸಿಗದಂತೆ ಪಕ್ಷಗಳ ಕೆಲವೊಂದು ಶಾಸಕರು ರಾಜಕೀಯ ಲಾಭಿ ನಡೆಸುತ್ತಿದ್ದರಂತೆ.

ಮಹದೇವ ಬಣಕಾರರು ಶಾಸಕರಾಗಿದ್ದಾಗ ಎಸ್ ನಿಜಲಿಂಗಪ್ಪನವರು ಮುಖ್ಯಮಂತ್ರಿಯಾಗಿದ್ದರು. ವಿಧಾನ ಸಭೆಯಲ್ಲಿ ಬಣಕಾರರಿಗೆ ಮಾತನಾಡುವ ಅವಧಿ ನಿಗದಿಯಾಗುತ್ತದೆ ಎಂದರೆ ಮುಖ್ಯ ಮಂತ್ರಿ ನಿಜಲಿಂಗಪ್ಪನವರಾಗಲಿ ಮತ್ತು ವಿರೇಂದ್ರ ಪಾಟೀಲರಾಗಲಿ ಬಣಕಾರರ ಪ್ರಶ್ನೆಗಳಿಗೆ ಉತ್ತರಿಸಲು ಬಹಳಷ್ಟು ತಯಾರಿಯನ್ನು ಮಾಡಿಕೊಂಡು ಬರುತ್ತಿದ್ದರಂತೆ, ನಿಜ ಹೇಳಬೇಕೆಂದರೆ ನಿಜಲಿಂಗಪ್ಪನವರಂತೂ ಬಣಕಾರರ ಪ್ರಶ್ನೆಗಳಿಗೆ ಉತ್ತರಿಸುವಾಗ ತಡಬಡಿಸುತ್ತಿದ್ದರಂತೆ. ಒಂದೇ ಅವಧಿಗೆ ಶಾಸಕರಾದರೂ ಕೂಡ ಕರಾರುವಕ್ಕಾಗಿ ಮಾತನಾಡುವ ಸಾಮರ್ಥ್ಯವನ್ನು ಬಣಕಾರರು ಹೊಂದಿದವರಾಗಿದ್ದರು.

## ಸಚಿವ ಸ್ಥಾನ ನಿರಾಕರಿಸಿದ ಬಣಕಾರರು:

ಈ ಹಿಂದೆ ಹಾವೇರಿ ವಿಧಾನ ಸಭಾ ಕ್ಷೇತ್ರದ ಶಾಸಕರಾಗಿದ್ದ ಮಾಗಾವಿ ಚನಬಸಪ್ಪನವರು 1968 ರಲ್ಲಿ ರಾಜ್ಯದ ಸಚಿವರಾಗಿದ್ದರು. ಅಕಾಲಿಕವಾಗಿ ಸಚಿವರು ನಿಧನ ಹೊಂದಿದರು. ಆಗ ವಿರೇಂದ್ರ ಪಾಟೀಲರು ರಾಜ್ಯದ ಮುಖ್ಯ ಮಂತ್ರಿಯಾಗಿದ್ದರು. ಮಾಗಾವಿ ಬಸವರಾಜರ ಸಚಿವ ಸ್ಥಾನದಲ್ಲಿ ವಿಧಾನ ಸಭೆಯಲ್ಲಿ ಬಿರುಗಾಳಿ ಎಬ್ಬಿಸಿದ್ದ ಬ್ಯಾಡಗಿ ಶಾಸಕ ಮಹದೇವ ಬಣಕಾರರನ್ನು, ಸಚಿವ ಸಂಪುಟಕ್ಕೆ ಸೇರಿಸಿಕೊಂಡು, ಅದೇ ಜಿಲ್ಲೆಯ ಶಾಸಕರಿಗೆ ಅವಕಾಶ ನೀಡಬೇಕೆನ್ನುವ ತೀರ್ಮಾನವನ್ನು ವಿರೇಂದ್ರ ಪಾಟೀಲರ ಸಚಿವ ಸಂಪುಟ ತೀರ್ಮಾನಿಸಿತ್ತು. ಆ ಪ್ರಕಾರವಾಗಿ ಬ್ಯಾಡಗಿ ಶಾಸಕರಾದ ಮಹದೇವ ಬಣಕಾರರನ್ನು ಸೇರ್ಪಡಿಸಿಕೊಳ್ಳುವ ವಿಚಾರವನ್ನು ವಿರೇಂದ್ರ ಪಾಟೀಲರು, ತರಳುಬಾಳು ಜಗದ್ಗುರು ಶಿವಕುಮಾರ ಸ್ವಾಮಿಗಳಲ್ಲಿ ಮೊದಲೇ ಭಿನ್ನವಿಸಿಕೊಂಡಿದ್ದರು.

ಆಗ ತರಳುಬಾಳು ಶ್ರೀಗಳವರು ರಾಜಕೀಯ ಬಣಕಾರರಿಗೆ ಸೇರಿದ್ದು, ನಾನೇನು ಹೇಳಲಾರೆ. ಇದರ ಬಗ್ಗೆ ಬಣಕಾರರನ್ನೇ ಕೇಳಿ ಎಂದು ಪಾಟೀಲರಿಗೆ ಹೇಳಿದಾಗ, ಪಾಟೀಲರು ಶ್ರೀಗಳಲ್ಲಿ ವಿನಮ್ರತೆಯಿಂದ ಕೇಳಿಕೊಂಡರಂತೆ. ಆಗ ಬಣಕಾರರಿಗೆ ಈ ಎಲ್ಲ ವಿಚಾರ ಗೊತ್ತಾದಾಗ, ಆವರು ಸಚಿವ ಸ್ಥಾನಕ್ಕೆ ಆಸೆ ಪಟ್ಟು ಮಾತು ನೀಡಲಿಲ್ಲವಂತೆ. ನನಗೆ ಕನ್ನಡ ನಾಡಿನ ಜ್ವಲಂತ ಸಮಸ್ಯೆಗಳು ಬಗೆ ಹರಿದರೆ ಸಾಕು ಗಡಿ–ನಾಡು–ನುಡಿ–ಭಾಷೆಯ ಜ್ವಲಂತ ಸಮಸ್ಯೆಗಳು ಕನ್ನಡಿಗರಿಗೆ ತೊಂದರೆಯಾಗದ ರೀತಿಯಲ್ಲಿ ಬಗೆಹರಿದರೆ ಸಾಕು,ಇದಕ್ಕಿಂತ ಹೆಚ್ಚಾಗಿ ನನಗೆ

ಯಾವ ಮಂತ್ರಿ ಪದವಿಯೊಲ್ಲೆ ಎನ್ನುವ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೇಳಿಬಿಟ್ಟರಂತೆ. ಹೀಗೆ ಮನೆ ಬಾಗಿಲಗೆ ಬಂದ ಸಚಿವ ಸ್ಥಾನವನ್ನು ಬಣಕಾರರು ನಿರಾಕರಿಸಿ ಬಿಟ್ಟರು.

ಈಗಿನ ಪರಿಸ್ಥಿಯನ್ನು ಸ್ವಲ್ಪ ಅವಲೋಕಿಸಿದರೆ ಮಂತ್ರಿ ಪದವಿಗಾಸೆಗೆ ಚುನಾಯಿಸಿದ ಮತದಾರರ ಕಣ್ಣಿಗೆ ಮಣ್ಣೆರಚಿ, ತಾವು ಆರಿಸಿ ಬಂದ ಪಕ್ಷದ ತತ್ವ ಸಿದ್ಧಾಂಥಗಳನ್ನು ಗಾಳಿಗೆ ತೂರಿ ಆಧಿಕಾರದ ಎಂಜಲಿಗೆ ಆಸೆ ಪಟ್ಟು, ಹಣ ಸಂಪಾದನೆಯೊಂದೇ ತಮ್ಮ ಕರ್ತವ್ಯವೆಂದು ರಾಜಕೀಯ ಕ್ಷೇತ್ರವನ್ನೇ ಹೊಲಸು ಮಾಡಿಬಿಟ್ಟ ಮಹಾನುಭಾವರಿಗೆ ನಮ್ಮ ನಾಡಿನಲ್ಲಿ ಕೊರತೆ ಇಲ್ಲ. ಇಂಥ ನೀಚ ರಾಜಕೀಯ ವ್ಯಕ್ತಿಗಳು ಇಡಿ ದೇಶದ ಪ್ರಜಾ ಪ್ರಭುತ್ವವನ್ನು ಕತ್ತಲಿನಲ್ಲಿ ಕೊಳೆಯುವ ಹಾಗೆ ಮಾಡಿಬಿಟ್ಟಿದ್ದಾರೆ. ಇವೆಲ್ಲವುಗಳಿಗೆ ಬಣಕಾರರು ತಿಲಾಂಜಲಿಯನ್ನಿಟ್ಟು ಪ್ರಜಾಪ್ರಭುತ್ವವನ್ನು ಕೈಯಲ್ಲಿ ಹಿಡಿದುಕೊಂಡು ಓಡಾಡಿದ್ದಾರೆ. ಅದನ್ನೇ ಶತಗತ ಪಾಲಿಸಿದ್ದಾರೆ.

ಬಣಕಾರರು ಸ್ವಲ್ಪ ಆಸೆ ಪಟ್ಟಿದ್ದರೆ ಏನೆಲ್ಲಾ ಆಗಬಹುದಿತ್ತು. ಆದರೆ ಅಧಿಕಾರ ದಾಹದಿಂದ ದೂರವಾಗಿದ್ದ ಬಣಕಾರರು, ಇನ್ನೊಬ್ಬರ ಮನೆಬಾಗಿಲಿಗೆ ಹೋಗಿ ಕೇಳುವ ಸ್ವಭಾವ ಇವರದಾಗಿರಲಿಲ್ಲ. ಇದ್ದ ಆಧಿಕಾರವನ್ನು ಸದುಪಯೋಗಪಡಿಸಿಕೊಂಡು ಸಾರ್ವಜನಿಕರಿಗೆ ಉತ್ತಮ ಆಡಳಿತವನ್ನು ನೀಡಿದ ಮಹಾನ್ ವ್ಯಕ್ತಿತ್ವ ಬಣಕಾರರದ್ದು.

ಬಣಕಾರರಿಗೆ ಸುಳ್ಳು ಹೇಳಿ ಜಾರಿಕೊಳ್ಳುವ ಜಾಯಮಾನಕ್ಕೆ ಎಂದೂ ಅಂಟಿಕೊಂಡಿರಲಿಲ್ಲ. ತಮ್ಮ ನೇರ ಸ್ಪಷ್ಟ ಮಾತುಗಳಿಂದ ಸತ್ಯವನ್ನೇ ಹೇಳುವ ಜಾಯಮಾನದವರಾಗಿದ್ದರು. ಹಿಂದು ಮುಂದೆ ಅಂಜಿ ಅಳುಕಿ ಮಾತನಾಡುವುದನ್ನು ಕಟುವಾಗಿ ಟೀಕಿಸುತ್ತದ್ದ ಬಣಕಾರರು, ಇದ್ದುದನ್ನು ಇದ್ದಂತೆ ಹೇಳುತ್ತಿರುವುದನ್ನು ಕಂಡ ಕೆಲವರು ಇರುಸು ಮುರುಸು ಗೊಳ್ಳುತ್ತಿದ್ದರಂತೆ.

ಸತ್ಯಕ್ಕಾಗಿ ಸರ್ವಸ್ವವನ್ನೇ ತ್ಯಾಗ ಮಾಡಬಹುದು, ಆದರೆ ಸತ್ಯವನ್ನು ಎಂತಹುದಕ್ಕೂ ತ್ಯಾಗ ಮಾಡಬಾರದು ಎಂಬ ಸ್ವಾಮಿವಿವೇಕಾನಂದರ ತತ್ವದಂತೆ ಬಣಕಾರರು ತಮ್ಮ ರಾಜಕೀಯ ಜೀವನವನ್ನು ಗಟ್ಟಿಗೊಳಿಸಿದ ಚೇತನವಾಗಿದ್ದರು. ಆ ಕಾರಣಕ್ಕಾಗಿ ಬಣಕಾರರು ಜನಪ್ರಿಯಗೊಂಡಿದ್ದಾರೆ.

## ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು:

ಮಹದೇವ ಬಣಕಾರರು ತಮ್ಮ 34 ನೇ ವಯಸ್ಸಿನಲ್ಲಿಯೇ ವಿಧಾನ ಸಭೆಯ ಶಾಸಕರಾಗಿ ಆಯ್ಕೆಯಾಗಿದ್ದು ಅವರ ಹೆಗ್ಗಳಿಕೆ. 1967 ರ ಅವಧಿಯಲ್ಲಿ ಅತ್ಯಂತ ಕಿರಿಯ ಸದಸ್ಯರಾಗಿದ್ದರು.

ವಿಧಾನ ಸಭೆಯಲ್ಲಿ ಅತ್ಯಂತ ಚಿಕ್ಕ ವಯಸ್ಸಿನ ಜನ ಪ್ರತಿನಿಧಿಯಾಗಿದ್ದರೂ, ಗಡಿ–ನಾಡು–ನುಡಿ–ಭಾಷೆಗಳ ಬಗ್ಗೆ ಹೆಚ್ಚು ತಿಳಿದುಕೊಂಡ ಸಮರ್ಥ ಶಾಸಕರಾಗಿದ್ದರು. ಕ್ಷೇತ್ರದ ಜನಪರ ಸಮಸ್ಯೆಗಳನ್ನು ನಾಡಿನ ಸಮಸ್ಯೆಗಳನ್ನು ಸದನದಲ್ಲಿ ಎಳೆ ಎಳೆಯಾಗಿ ಬಿಡಿಸಿಟ್ಟು ಬೆಳಕು ಚಲ್ಲುತ್ತಿದ್ದರು. ಇವರ ಮಾತಿನ ಚಾತುರ್ಯವನ್ನು ಕಂಡು ಬೆರಗಾದ ಶಾಸಕರು ಅದೆಷ್ಟೋ ಊಹಿಸಲು ಅಸಾಧ್ಯ.ಅಂತೆಯೇ ಮಾಜಿ ಶಾಸಕರು ಹಾಗೂ ಏಕೀಕರಣದ ಹೋರಾಟಗಾರರು ಆಗಿದ್ದ ಹಾಸನದ ಕೆ.ಎಂ.ರುದ್ರಪ್ಪನವರು ಬಣಕಾರರನ್ನು ಆಗಾಗ ಸ್ಮರಿಸಿಕೊಳ್ಳುತ್ತಿದ್ದರು.

ವಿಧಾನ ಸಭೆಯಲ್ಲಿ ಘಟಾನುಘಟಿ ಶಾಸಕರಿದ್ದರು. ಅಂಥಹ ಎಲ್ಲ ಹಿರಿಯ ತಲೆಮಾರಿನ  ಶಾಸಕರಿಗೆ ಬಣಕಾರರು ಚಳ್ಳೆಹಣ್ಣು ತಿನ್ನಿಸುತ್ತಿದ್ದರು.  ಬಣಕಾರರರು ಜನಪ್ರತಿನಿಧಿಯ ಸ್ವಂತ ಹೊಣೆಗಾರಿಕೆಯನ್ನು ಅತ್ಯಂತ ಸಮರ್ಥ ಹಾಗೂ ಅರ್ಥಪೂರ್ಣವಾಗಿ ನಿರ್ವಹಿಸಿ, ಪರಿಶುದ್ಧ ಹಾಗೂ ನೈತಿಕತೆಯ ರಾಜಕಾರಣದ ಬದುಕಿಗೆ ಹೆಸರಾಗಿದ್ದು ಒಂದು ವಿಶೇಷ.

ಬಣಕಾರರು ಶಾಸಕರಾಗಿದ್ದುಕೊಂಡು, ಕರ್ನಾಟಕದ ರಕ್ಷಣೆಗಾಗಿ ಹೋರಾಟ ಮಾಡಿದರು. ಅಂದಾಜು ಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸಿದರು. ಗಡಿನಾಡಿನ ಬಗ್ಗೆ ದೇಶಾದ್ಯಂತ ಪ್ರವಾಸ ಕೈಗೊಂಡು, ಮಹಾಜನ ವರದಿಯ ಕುರಿತಂತೆ ನಾಡಿನ ಜನತೆಯಲ್ಲಿ ಜಾಗೃತಿ ಮೂಡಿಸುವುದರೊಂದಿಗೆ 'ಮಹಾಜನ ವರದಿ 'ಎಂಬ ಮುಖ್ಯವಾದ ಗ್ರಂಥವನ್ನು ರಚಿಸಿದರು. ಈ ವರದಿಯ ಸಂಕ್ಷಿಪ್ತ ಮಾಹಿತಿಯುಳ್ಳ 'Mahajan x-ray report' ನ್ನು ಅಂದಿನ ಪ್ರಧಾನಮಂತ್ರಿ ಶ್ರೀಮಾನ್ ರಾಜೀವ ಗಾಂಧೀಯವರಿಗೆ ಕಳುಹಿಸಿಕೊಟ್ಟರು.

ಮುಂದೆ 1971 ರಲ್ಲಿ ರಾಜಕೀಯ ಕ್ಷಿಪ್ರ ಬೆಳವಣಿಗೆಗಳ ಹಿನ್ನಲೆಯಲ್ಲಿ  ಬ್ಯಾಡಗಿ ಕ್ಷೇತ್ರವನ್ನು ಏಕಾ ಏಕಿಯಾಗಿ ಮೀಸಲು ಕ್ಷೇತ್ರವೆಂದು ಘೋಷಿಸಲಾಯಿತು. ಬಣಕಾರರನ್ನು ಕಂಡರೆ ಆಗದ ಕೆಲವೊಂದು ಅಧಿಕಾರಸ್ಥರು, ಮತ್ತು ಅವರ ನಿಷ್ಟುರ ರಾಜಕೀಯವನ್ನು ಇಷ್ಟಪಡದ ಕೆಲವು ಕುತಂತ್ರ ರಾಜಕೀಯ ವ್ಯಕ್ತಿಗಳು

ಬಣಕಾರರನ್ನು ರಾಜಕೀಯವಾಗಿ ಹತ್ತಿಕ್ಕುವ ಕುತಂತ್ರಕ್ಕೆ ಕೈ ಹಾಕುವ ಮೂಲಕ ಬ್ಯಾಡಗಿ ಕ್ಷೇತ್ರವನ್ನು ಮೀಸಲು ಕ್ಷೇತ್ರವನ್ನಾಗಿ ಮಾಡಿದರು. ಈ ಒಂದು ಸಂದರ್ಭವನ್ನು ಬಣಕಾರರ ಬಾಯಿಯಿಂದಲೇ ಕೇಳಬೇಕಿತ್ತಂತೆ.

ಒಂದು ಬೇಳೆ ಬ್ಯಾಡಗಿ ಕ್ಷೇತ್ರ ಮೀಸಲು ಕ್ಷೇತ್ರ ಆಗದೇ ಇದ್ದಿದ್ದರೆ, ಬಣಕಾರರ ಜೀವಿತಾವಧಿಯವರೆಗೂ ಮತ್ತೊಬ್ಬರನ್ನು ಆಕ್ಷೇತ್ರ ಚುನಾಯಿಸುತ್ತರಲಿಲ್ಲವೇನೋ? ಹುತಾತ್ಮ ಮೈಲಾರ ಮಹದೇವಪ್ಪನವರ ಧರ್ಮಪತ್ನಿ ಮೈಲಾರ ಸಿದ್ಧಮ್ಮನವರನ್ನು ಹೊರತು ಪಡಿಸಿದರೆ ಧೀಮಂತ ವ್ಯಕ್ತಿತ್ವವನ್ನು ಹೊಂದಿದ ವ್ಯಕ್ತಿಗಳನ್ನು ಕಂಡಿರಲಿಕ್ಕೆ ಸಾಧ್ಯವಿಲ್ಲವೆಂಬುದು ಈಗಲೂ ಜಗಜ್ಜಾಹಿರ.

ಬ್ಯಾಡಗಿ ಮೀಸಲು ಕ್ಷೇತ್ರವಾಗಿದ್ದರಿಂದ ಬಣಕಾರರು ಮತ್ತೆ ಚುನಾವಣೆಗೆ ಸ್ಪರ್ಧಿಸಲಿಲ್ಲ. ಜನಾತದಳದ ರಾಜ್ಯರಾಜಕಾರಣಿ ಸದಸ್ಯರಾಗಿ ಕಾರ್ಯನಿರ್ವಹಿಸಿದರು. ಹೀಗೆ ಬಣಕಾರರು ರಾಜಕೀಯ ಹಲವು ಮಗ್ಗಲುಗಳಲ್ಲಿ ದುಡಿದು ರಾಜಕೀಯ ಕ್ಷೇತ್ರದ ಶಿಖರವನ್ನೇರಿ  ಸೈ ಎನಿಸಿಕೊಂಡರು.

## ವಿಧಾನ ಪರಿಷತ್ತಿಗೆ ಆಯ್ಕೆ :

ಬ್ಯಾಡಗಿ ಕ್ಷೇತ್ರ ಮೀಸಲು ಕ್ಷೇತ್ರವಾದ ಮೇಲೆ ಬಣಕಾರರು ರಾಜಕೀಯದ ಮೇಲಿನ ಆಸಕ್ತಿ ಕಡಿಮೆಯಾಯಿತು. ಆದರೆ ಇದಕ್ಕೆ ಕಾರಣ ಬೇಕಿರಲಿಲ್ಲ, ಪ್ರಾಮಾಣಿಕ ವ್ಯಕ್ತಿಗಳನ್ನು ಯಾವುದೇ ಕ್ಷೇತ್ರದಲ್ಲಿ ಬೆಳೆಯಲಿಕ್ಕೆ ಬಿಡುವುದಿಲ್ಲ ಎಂಬುದಕ್ಕೆ ಬಣಕಾರರ ರಾಜಕೀಯ ಜೀವನದ ಒಂದು ಘಟನೆಯೇ ಸಾಕ್ಷಿ. ಆದರೂ ಈ ಒಂದು ಅನುಭವವನ್ನು ಬಣಕಾರರು ಮರೆಯುವ ಮುನ್ನವೇ, ಆ ಸಂದರ್ಭದಲ್ಲಿ ರಾಜ್ಯದಲ್ಲಿ ಜನತಾದಳ ಸರ್ಕಾರ ಅಸ್ತಿತ್ವಕ್ಕೆ ಬಂದಿತ್ತು. ಈ ಹಿಂದೆ ಬಣಕಾರರು ನಾಡು ನುಡಿಗೆ ಸಲ್ಲಿಸಿದ ಅನುಪಮ ಸೇವೆಯನ್ನು ಮತ್ತು ರಾಜಕೀಯದಲ್ಲಿನ ಗುರುತರ ಹೆಜ್ಜೆಗಳನ್ನು  ಗುರತಿಸಿದ ಜನತಾದಳ ಸರ್ಕಾರ 1995 ರಲ್ಲಿ ಮಹದೇವ ಬಣಕಾರರನ್ನು ವಿಧಾನ ಪರಿಷತ್ತಿಗೆ ನಾಮಕರಣಗೊಳಿಸಿತು. ಇದರಿಂದ ಒಬ್ಬ ಸಮರ್ಥ, ಅನುಭವಿ ಹಾಗೂ ಹಿರಿಯ ರಾಜಕೀಯ ವ್ಯಕ್ತಿಯನ್ನು ವಿಧಾನ ಪರಿಷತ್ತು ಕಂಡಂತಾಗಿತ್ತು.

ಅಪ್ಪಟ ಅತ್ಯುಗ್ರ ಕನ್ನಡ ಅಭಿಮಾನಿಯಾದ ಬಣಕಾರರು ವಿಧಾನ ಪರಿಷತ್ತಿಗೆ ಆಯ್ಕೆಯಾದ ನಂತರದಲ್ಲಿ, ಕನ್ನಡ ಭಾಷೆಯನ್ನು ಆಡಳಿತ ಭಾಷೆಯನ್ನಾಗಿಸುವ ಪ್ರಯತ್ನಕ್ಕೆ ಕೈ ಹಾಕಿದರು. ಕನ್ನಡ ಭಾಷೆಗೆ ಅನುಗುಣವಾಗಿ ವಿಧಾನ ಸೌಧದಲ್ಲಿ

ಕಡತಗಳು ಹಾಗೇ ಧೂಳು ತಿನ್ನುತ್ತಿದ್ದವು. ಸರ್ಕಾರಿ ಆದೇಶಗಳಲ್ಲಿದ್ದರೂ ಸರಿಯಾಗಿ ಕಾರ್ಯರೂಪಕ್ಕೆ ಬರದೇ ಇದ್ದುದು ಬಣಕಾರರ ಮನಸ್ಸನ್ನು ಘಾಸಿಗೊಳಿಸಿತ್ತು.

ಪ್ರಚಾರ, ಪುರಸ್ಕಾರ, ಅಧಿಕಾರದ ಗದ್ದುಗೆಯನ್ನು ಎಂದೂ ಆಸೆಪಡದ ಬಣಕಾರರು ಸಣ್ಣ ಪುಟ್ಟದ್ದಕ್ಕೆಲ್ಲ ಪತ್ರಿಕಾ ಹೇಳಿಕೆ ನೀಡಿದವರಲ್ಲ. ಪತ್ರಿಕಾಗೋಷ್ಠಿಗಳನ್ನು ಕರೆದು ಪ್ರಚಾರ ಪಡೆದವರಂತೂ ಅಲ್ಲವೇ ಅಲ್ಲ. ಅಂತೆಯೇ ಬಣಕಾರರು ಇಂದಿಗೂ ರಾಜಕೀಯ ಬುದ್ಧಿ ಜೀವಿಗಳ ಸಾಲಿನಲ್ಲಿ ಅವಿಸ್ಮರಣೀಯವಾಗಿ ಉಳಿದಿದ್ದಾರೆ.

1996ರರಲ್ಲಿ ಸನ್ಮಾನ್ಯ ಜೆ.ಎಚ್. ಪಟೇಲ್ ಸರ್ಕಾರ ಬಣಕಾರರ ಅತ್ಯುಗ್ರ ಕನ್ನಡ ಅಭಿಮಾನಕ್ಕಾಗಿ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಸ್ಥಾನವನ್ನು ನೀಡಲು ಪ್ರಾಧಿಕಾರವು ತೀರ್ಮಾನಿಸಿತ್ತು.ಆದರೆ ನಾಡುಕಂಡ ಶ್ರೇಷ್ಠ ರಾಜಕಾರಣಿ ರಾಮಕೃಷ್ಣ ಹೆಗಡೆಯವರನ್ನು ಜನತಾದಳದಿಂದ ಕಿತ್ತುಹಾಕಿದಾಗ, ಪರಿಷತ್ತಿನ ಸದಸ್ಯತ್ವವನ್ನೂ ಲೆಕ್ಕಿಸದೇ ಬಣಕಾರರು ರಾಮಕೃಷ್ಣ ಹೆಗಡೆಯವರಿಗೆ ಬೆಂಬಲವಾಗಿ ನಿಂತು ಪರಿಷತ್ತಿನ ಸದಸ್ಯತ್ವದ ರಾಜೀನಾಮೆ ಪತ್ರವನ್ನು ವಿಧಾನ ಪರಿಷತ್ತಿನ ಅಧ್ಯಕ್ಷರಿಗೆ ನೀಡಿದರು.

ಬಣಕಾರರು ಹೆಗಡೆಯವರನ್ನು ಬೆಂಬಲಿಸುವ ಬಗ್ಗೆ ಪತ್ರಿಕಾಗೋಷ್ಠಿ ಕರೆಯುತ್ತಾರೆನ್ನುವ ಸುದ್ದಿ ತಿಳಿದುಕೊಂಡ ಮುಖ್ಯಮಂತ್ರಿ ಜೆ.ಎ.ಚ್. ಪಟೇಲರು ನಸುಕಿನ ಜಾವ 5 ಗಂಟೆಗೆ ಬಣಕಾರರೊಡನೆ ಮಾತನಾಡಲು ಶಾಸಕರ ಭವನಕ್ಕೆ ದೂರವಾಣಿ ಕರೆ ಮಾಡಿದರು. ಬಣಕಾರರಿಗೆ ಹತ್ತಿರವಾಗಿದ್ದ ಬೆನಕನಹಳ್ಳಿ ಶೇಖರಗೌಡರು ದೂರವಾಣಿ ಸ್ವೀಕರಿಸಿ ಆಗ ತಾನೆ ಎದ್ದು ದಿನ ಪತ್ರಿಕೆಗಳನ್ನು ಓದುವುದರಲ್ಲಿ ತಲ್ಲಿನರಾಗಿದ್ದ ಬಣಕಾರರ ಕೈಗೆ ಬಂದ ದೂರವಾಣಿ ಕರೆಯನ್ನು ಕೊಟ್ಟರು, ಆಗ ಪಟೇಲರು ಬಣಕಾರರೇ ನಿನ್ನೆ ರಾತ್ರಿಯೇ ನಿಮ್ಮನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಹುದ್ದೆಗೆ ನೇಮಿಸಿದ್ದೆವೆ. ಇಂದಿನ ದಿವ್ಸವೆ ನೇಮಕಾತಿ ಪತ್ರ ನಿಮ್ಮ ಕೈಗೆ ಸೇರುತ್ತದೆ, ನೀವು ಜನತಾದಳವನ್ನು ಬಿಟ್ಟು ಹೆಗಡೆಯವರನ್ನು ಬೆಂಬಲಿಸುತ್ತಿರೆಂಬ ದಟ್ಟವಾದ ವಿಷಯ ನನ್ನ ಕಿವಿಗೆ ಬಿದ್ದಿದೆ, ಆದ್ದರಿಂದ ನೀವು ನಮ್ಮ ಪರಿವಾರವನ್ನು ಬಿಟ್ಟು ಹೋಗುವ ವಿಚಾರವನ್ನು ಕೈಬಿಡಬೇಕೆಂದು ಹೇಳಿದರಲ್ಲದೆ, ಪ್ರಾಧಿಕಾರದ ಅಧ್ಯಕ್ಷ ಹುದ್ದೆಗೆ ನೀವೆ ಅರ್ಹರು ಸ್ವಲ್ಪ ಯೋಚಿಸಿ ನಿರ್ಧಾರ ಕೈಗೊಳ್ಳಿ ಎಂದು ಬಣಕಾರರಿಗೆ ಹೇಳಿದಾಗ, ಆಗ ಬಣಕಾರರು ನಾನು ಎಲ್ಲವನ್ನು ಯೋಚಿಸಿದ್ದೇನೆ ಸ್ವಾಮಿ ಪ್ರಾಧಿಕಾರದ ಅಧ್ಯಕ್ಷ ಸ್ಥಾನವೇಕೆ? ಪರಿಷತ್ತಿನ

ಅಧ್ಯಕ್ಷ ಸ್ಥಾನ ಬೇಕಾದರೂ ಹೋಗಲಿ, ನಾನೆಂದು ನಂಬಿದ ಸಿದ್ಧಾಂತವನ್ನು ಬಿಟ್ಟು ಹೋಗುವುದಿಲ್ಲ ಎಂದು ತಟ್ಟನೆ ಪಟೇಲರಿಗೆ ಉತ್ತರವನ್ನಿಟ್ಟರು. ಬಣಕಾರರು ತಾವು ನಿಗದಿ ಪಡಿಸಿದ ಅಂದಿನ ದಿನ ಬೆಳಿಗ್ಗೆ 11ಕ್ಕೆ ತಮ್ಮ ಐದು ಜನ ಬೆಂಬಲಿಗರೊಂದಿಗೆ ಪತ್ರಿಕಾಗೋಷ್ಠಿ ನಡೆಸಿ, ರಾಮಕೃಷ್ಣ ಹೆಗಡೆಯವರಿಗೆ ಬೆಂಬಲ ಸೂಚಿಸಿದರು. ಇದಕ್ಕೂ ಪೂರ್ವದಲ್ಲಿ ಎಂ.ಪಿ ಪ್ರಕಾಶರವರು ಸೇರಿದಂತೆ ಹಲವು ಪಕ್ಷದ ಮುಖಂಡರು ಬಣಕಾರರಿಗೆ ಪಕ್ಷ ತ್ಯಜಿಸದಂತೆ ಮನವಿ ಮಾಡಿಕೊಂಡಿದ್ದರಂತೆ.

ಸ್ವ–ಜಾತೀಯವರೆ ಆದ ಮುಖ್ಯ ಮಂತ್ರಿ ಜಿ.ಎಚ್.ಪಟೇಲರ ಮಾತನ್ನು ತಿರಸ್ಕರಿಸಿ ಅಧಿಕಾರದ ಆಸೆಗೆ,ಆಮಿಷಗಳಿಗೆ ಒಳಗಾಗದೆ ಬ್ರಾಹ್ಮಣ ಜ್ಯಾತಿಯವರೇ ಆದ ರಾಜಕೀಯ ತತ್ವ ಸಿದ್ಧಾಂತಗಳನ್ನು ಮೈಗೂಡಿಸಿಕೊಂಡಿದ್ದ ಹೆಗಡೆಯವರಿಗೆ ಬೆಂಬಲವನ್ನು ಸೂಚಿಸಿದ್ದನ್ನು ಕಂಡುಕೊಂಡಾಗ ಬಣಕಾರರು ಮೊದಲಿನಿಂದಿಲೂ ಪಾಲಿಸಿಕೊಂಡು ಬಂದ ತತ್ವ ನೀತಿಗಳೇ ಬಲವಾದ ಸಾಕ್ಷಿಯಾದಂತಿವೆ. ಅಲ್ಲದೆ ಜಾತ್ಯಾತೀತ ನಿಲುವಿಗೆ ಹಿಡಿದ ಕೈಗನ್ನಡಿಯಾಗಿದೆ.

12 ನೇ ಶತಮಾನದಲ್ಲಿನ ಬಸವಣ್ಣನವರ ತತ್ವ ಸಿದ್ಧಾಂತಗಳನ್ನು ತಮ್ಮ ಜೀವನ ಪೂರ್ತಿ ಅಳವಡಿಸಿಕೊಂಡು ಬಂದ ಬಣಕಾರರು ವಿಶ್ವದಲ್ಲಿ ಎರಡೇಎರಡು ಜ್ಯಾತಿ ಒಂದು ಗಂಡು ಇನ್ನೊಂದು ಹೆಣ್ಣು. ದಲಿತ ಕೀಳಲ್ಲ, ಬ್ರಾಹ್ಮಣ ಮೇಲಲ್ಲ ಜಗತ್ತಿನಲ್ಲಿ ಎಲ್ಲರೂ ಸರಿ ಸಮಾನರು ಎಂಬ ತತ್ವವನ್ನು ಪಾಲಿಸಿಕೊಂಡು ಬಂದ ಬಣಕಾರರು ನುಡಿದಂತೆ ನಡೆದವರು.

ಅಲ್ಲದೆ ಮುಖ್ಯಮಂತ್ರಿ ಜೆ.ಎಚ್.ಪಟೇಲರ ಸರ್ಕಾರವನ್ನು ಅವರ ಪಕ್ಷದವರೇ ಕೆಡವಲು ಹವಣಿಸುತ್ತಿದ್ದರು. ಆಸಂದರ್ಭದಲ್ಲಿ ಬಣಕಾರರನ್ನು ಎಷ್ಟು ನೆನೆದರು ಕಡಿಮೆಯೆ. ಜನತಾದಳ ಪಕ್ಷದ ಮೇಲಿಟ್ಟ ಅಭಿಮಾನ ಹಾಗೂ ಅಪಾರ ನಂಬಿಕೆಯನ್ನಿಟ್ಟು ಮತ್ತು ಈ ಪಕ್ಷದಲ್ಲಿದ್ದ ರಾಜಕೀಯ ಮುತ್ಸದ್ದಿಗಳನ್ನು ಗುರುತಿಸಿದ ಈರಾಜ್ಯದ ಪ್ರಜ್ಞಾವಂತ ಮತದಾರರು ಪಕ್ಷವನ್ನು ಅಧಿಕಾರಕ್ಕೆ ತಂದಿದ್ದಾರೆ. ಅದೇ ರೀತಿಯಲ್ಲಿ ಈ ರಾಜ್ಯಕ್ಕೆ ಉತ್ತಮ ಆಡಳಿತವನ್ನು ನೀಡಬೇಕೆಂಬ ಸಂಕಲ್ಪ ಬಣಕಾರರದ್ದಾಗಿತ್ತು. ಒಂದು ವೇಳೆ ಪಕ್ಷದಲ್ಲಿನ ಆಂತರಿಕ ಭಿನ್ನಾಭಿಪ್ರಾಯಕ್ಕೆ ಸರ್ಕಾರವೇ ಬಿದ್ದರೆ ರಾಜ್ಯದ ಜನತೆಗೆ ದ್ರೋಹ ಬಗೆದಂತೆ ಆಗುತ್ತದೆ ಹೀಗಾಗಬಾರದು ಎನ್ನುವುದು ಬಣಕಾರರ ಬಲವಾದ ಆಸೆಯಾಗಿತ್ತು. ಪಕ್ಷದಲ್ಲಿನ ಆಂತರಿಕ ವಿಚಾರಗಳು ಪಕ್ಷದಲ್ಲಿಯೇ ಬಗೆಹರಿಯಬೇಕು, ಅದನ್ನು ಸರ್ಕಾರದ ಮೇಲೆ ಪ್ರಯೋಗಿಸಿದರೆ ಜನತೆಗೆ ದ್ರೋಹ ಬಗೆದಂತೆ ಆಗುತ್ತದೆ ಎಂಬ ಗಟ್ಟಿನಿಲುವಿನೊಂದಿಗೆ ಬಣಕಾರರು

ಹೆಗಡೆಯವರ ಬೆಂಬಲದೊಂದಿಗೆ ಪಟೇಲರ ಸರ್ಕಾರಕ್ಕೆ ನೈತಿಕ ಸ್ಥೈರ್ಯ ತುಂಬಿದ್ದರು. ಈ ಸಂದರ್ಭವನ್ನು ಪಟೇಲರು ಆಗಾಗ ನೆನೆಸಿಕೊಂಡು ಬಣಕಾರರ ಆತ್ಮ ಸ್ಥೈರ್ಯವನ್ನು ಹಾಡಿಹೊಗಳುತ್ತಿದ್ದರಂತೆ ಹಾಗೇನೆ ಕೆಲವೊಂದು ಸಂದರ್ಭದಲ್ಲಿ ವ್ಯಥೆಪಟ್ಟಿದ್ದುಂಟು. ಜಾತಿಯ ಗಡಿ ದಾಟಿ ಬೆಳೆದ ಬಣಕಾರರು, ಸ್ವಜಾತಿಯವರನ್ನು ನಂಬಿಕೊಂಡು ಒಂದೇ ಪಕ್ಷವನ್ನು ಬೆನ್ನಟ್ಟಿ ಹೋಗಿದ್ದರೆ ಬಣಕಾರರು ಏನೆಲ್ಲಾ ಆಗಬಹುದಿತ್ತು. ನಂಬಿದ ಸಿದ್ಧಾಂತಗಳನ್ನು ಮುನ್ನಡೆಸಿಕೊಂಡು ಬಂದವರಾಗಿದ್ದರು ಅದಕ್ಕೆಂದೇ ಬಣಕಾರರನ್ನು ಇಂಥಹ ಪಕ್ಷದವರೆಂದು ಯಾರೂ ಗುರುತಿಸುತ್ತಿರಲಿಲ್ಲ, ಎಲ್ಲ ಪಕ್ಷದವರು ಪ್ರತಿಪಕ್ಷದವರು ವಿರೋಧ ಪಕ್ಷದವರು ಬಣಕಾರರನ್ನು ಅತೀ ಹತ್ತಿರದಿಂದ ಕಾಣುತ್ತಿದ್ದರು.

ಬಣಕಾರರು ಪರಿಷತ್ತಿನ ಸದಸ್ಯರಾಗಿದ್ದ ಇನ್ನೊಂದು ಸಂದರ್ಭವನ್ನು ಮರೆಯುವ ಹಾಗಿಲ್ಲ ಒಂದು ದಿನ ಮಧ್ಯಾಹ್ನ ಶಾಸಕರ ಭವನದಲ್ಲಿನ ಬಣಕಾರರ ಕೊಠಡಿಗೆ ಕೆಪಿಸಿಸಿ ಅಧ್ಯಕ್ಷರಾಗಿದ್ದ ಡಿ.ಕೆ ನಾಯ್ಕರವರು ಜೊತೆಗೆ ಮಾಜಿ ಮಂತ್ರಿ ಎನ್.ಜಿ ಹಾಲಪ್ಪ ಇಬ್ಬರೂ ಬಂದರಂತೆ. ಆ ವೇಳೆಯಲ್ಲಿ ಬಣಕಾರರು ಯಾವುದೋ ಪುಸ್ತಕ ಓದುವುದರಲ್ಲಿ ತಲ್ಲೀನರಾಗಿದ್ದರು. ಕಾಂಗ್ರೆಸ್‌ನ ಇಬ್ಬರು ನಾಯಕರನ್ನು ಬಣಕಾರರು ಕಂಡಾಗ ಏನಯ್ಯಾ, ಇಬ್ಬರೂ ಕಾಂಗ್ರೆಸ್ ನವರು ಬಂದಿದ್ದೀರಿ ನನ್ನನ್ನೇನು ತಮ್ಮ ಪಕ್ಷಕ್ಕೆ ಕರೆದೊಯ್ಯಲು ಬಂದಿದ್ದಿರೇನು? ಎಂದರಂತೆ.

ಆಗ ಬಣಕಾರೊಂದಿಗೆ ಸಲಿಗೆಯಿಂದ ಇದ್ದ ಸ್ನೇಹಿತರಾದ ನಾಯ್ಕರವರು ಸಲಿಗೆಯಿಂದ ಏಕ ವಚನದ ದಾಟಿಯಲ್ಲಿ ನಿನಗೆಲ್ಲಯ್ಯಾ ಪಾರ್ಟಿ, ಪಕ್ಷ ನಿನಗೆ ಪಾರ್ಟಿನೂ ಇಲ್ಲಾ, ಪಕ್ಷನೂ ಇಲ್ಲ ಜಾತಿಕುಲ ಮೊದಲೇ ಗೊತ್ತಿಲ್ಲ  ಈ ಜನತಾದಳ ಸರ್ಕಾರ ವಿಧಾನ ಪರಿಷತ್ ಸ್ಥಾನಕ್ಕೆ ನಾಮಕರಣ ಮಾಡದೇ ಹೋಗಿದ್ದರೆ ಮುಂದಿನ ದಿನಗಳಲ್ಲಿ ಕಾಂಗ್ರೆಸ್ ಅಧಿಕಾರಕ್ಕೆ ಬಂದಮೇಲಂತೂ ನಿನ್ನನ್ನೂ ಕಾಂಗ್ರೆಸ್ ಪಕ್ಷದಲ್ಲಿ ಗುರುತಿಸಿ ವಿಧಾನ ಪರಿಷತ್ತಿಗೆ ಆಯ್ಕೆ ಮಾಡುತ್ತಿದ್ದಿವಿ, ನಿನ್ನನು ಯಾವ ಪಕ್ಷ ಪಾರ್ಟಿಯಿಂದ ಅಳೆಯುವ ಹಾಗಿಲ್ಲ ಈ ನಾಡಿನ ಆಸ್ತಿ ಎಂದರಂತೆ ನಾಯ್ಕರವರು, ಮುಂದುವರೆದು ಹೇಳಿದ ಅವರು ಕನ್ನಡ ಭಾಷೆಯನ್ನು ಉಸಿರಾಗಿಸಿಕೊಂಡು ನೀನು ಬರೆದಿರುವ 'ಆಂಗ್ಲರ ಆಡಳಿತದಲ್ಲಿ ಕನ್ನಡ' ಎಂಬ ಗ್ರಂಥವನ್ನು ನೋಡಿದರೆ ಸಾಕು ನಿನಗೆ ಎಂಥಹ ಸ್ಥಾನಮಾನವನ್ನು ನೀಡಬಹುದು ಎಂದರಂತೆ. ಕನ್ನಡದ ಬಗ್ಗೆ ಅಂಕಿ ಅಂಶಗಳ ಸಮೇತ ಮಾತನಾಡುವ ಎದೆಗಾರಿಕೆ ನಿನಗೊಬ್ಬನಿಗೆ ಇದೆ ಬಣಕಾರ ಎಂದರಂತೆ.

ಇದಕ್ಕೆ ಮಾಜಿ ಮಂತ್ರಿ ಹಾಲಪ್ಪನವರು ಧ್ವನಿ ಗೂಡಿಸಿ, ಬಣಕಾರರಿಗೆ ಅದೃಷ್ಟ ಇದ್ದರೆ ಎನೆಲ್ಲ ಆಗಬಹುದಿತ್ತು ಬಣಕಾರರಿಗೆ ಅಂಥಹ ಸಾಮರ್ಥ್ಯವಿದೆ ಇದೆ ಎಂದರಂತೆ. ಅದಕ್ಕೆ ನಾಯ್ಕರವರು ಅದೃಷ್ಟದ ಮಾತಿರಲಿ ಮುಂದೆ ಕಾಂಗ್ರೆಸ್ ಪಕ್ಷ ಅಧಿಕಾರಕ್ಕೆ ಬಂದ ಮೇಲೆ ಬಣಕಾರರನ್ನು ಸಾಹಿತ್ಯ ಸಾಧಕರ ಪಟ್ಟಿಯಲ್ಲಿ ಸೇರಿಸಿಕೊಂಡು ಮುಂದೆ ರಾಜ್ಯ ಸಭೆಗೆ ನಾಮಕಾರಣ ಮಾಡಬೇಕು ಅಂಥಹ ದೊಡ್ಡ ಸಾಧಕನ ಸಾಮರ್ಥ್ಯವನ್ನು ಯಾರೂ ಅಲ್ಲಗಳೆಯುವಂತಿಲ್ಲ ಎಂದು ನಾಯ್ಕರ ಹೇಳಿದ್ದರಂತೆ. ಹೀಗೆ ಬಣಕಾರರು ಎಲ್ಲ ಪಕ್ಷದ ರಾಜ್ಯ ನಾಯಕರಿಗೆ ಬೇಕಾದವರಾಗಿದ್ದರು ಎಂಬುದು ಇಲ್ಲಿ ಗುರುತಿಸಬೇಕಾದ ಪ್ರಮುಖ ಅಂಶವಾಗಿದೆ.

ನಾಡಿನ ಹಿರಿಯ ರಾಜಕಾರಣಿಗಳಾದ ಎಚ್. ಸಿದ್ಧಯ್ಯ, ವೈಕುಂಠ ಬಾಳಿಗ, ಶಾಂತವೇರಿ ಗೋಪಾಲಗೌಡ, ಸಿದ್ಧವೀರಪ್ಪನವರು ಬಣಕಾರರ ಸಾಧನೆಯನ್ನು ಕಂಡು ಪ್ರಶಂಶೆ ವ್ಯಕ್ತಪಡಿಸಿದ್ದುಂಟು. ಒಟ್ಟಿನಲ್ಲಿ ಬಣಕಾರರು ಯಾವುದೇ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸಿದರೂ ಹೊಗಳಿಕೆ ತೆಗಳಿಕೆ ಪ್ರಶಸ್ತಿ ಪುರಸ್ಕಾರಗಳನ್ನು ಕಣ್ಣೆತ್ತಿ ನೋಡದೆ ನಿಷ್ಠೆಯಿಂದ ದುಡಿದವರಾಗಿದ್ದರು..

## ಹುಟ್ಟೂರಿನ ಕಾಳಜಿ:

ಬಣಕಾರರು ವಿಧಾನ ಪರಿಷತ್ ಮತ್ತು ವಿಧಾನ ಸಭೆ ಎರಡು ಸದನಗಳಲ್ಲಿ ಸದಸ್ಯತ್ವವನ್ನು ಪಡೆದು, ರಾಜಕೀಯ ಕ್ಷೇತ್ರದಲ್ಲಿ ಅಪಾರವಾದ ಬೆಳಕನ್ನು ಚೆಲ್ಲಿ ಮುತ್ಸದ್ದಿ ರಾಜಕೀಯಕ್ಕೆ ಹೆಸರಾಗಿದ್ದರು. ಬಣಕಾರರು ಮೇರು ವ್ಯಕ್ತಿಗಳಾಗಿ ಬೆಳೆದವರು. ಏನಾದರೂ ಆಗು ಮೊದಲು ಮಾನವನಾಗು ಎಂಬ ಕವಿ ವಾಣಿಗೆ ಅಂಟಿಕೊಂಡಿದವರಾಗಿದ್ದರು. ಅಂತೆಯೇ ವಿಧಾನ ಪರಿಷತ್ತಿಗೆ ಸದಸ್ಯರಾಗಿದ್ದಾಗಲೂ ಮೂವತ್ತು ವರ್ಷಗಳ ಹಿಂದೆ ತಾವು ಪ್ರತಿನಿಧಿಸಿದ್ಧನ್ನು ಬ್ಯಾಡಗಿ ಕ್ಷೇತ್ರವನ್ನು ನಿರ್ಲಕ್ಷಿಸಿದವರಲ್ಲ. ಆಕ್ಷೇತ್ರದ ಅಭಿವೃದ್ಧಿಗಾಗಿ ತಮಗೆ ಕೈಲಾದಷ್ಟು ಸಹಾಯ ಮಾಡಿದರು. ತಮ್ಮ ಹುಟ್ಟಾರಾದ ಮೊಟೆಬೆನ್ನೂರ ಗ್ರಾಮದ ರಸ್ತೆಗಳ ಅಭಿವೃದ್ಧಿಗೆ ಹೆಚ್ಚಿನ ಕಾಳಜಿವಹಿಸಿ ಅಭಿವೃದ್ಧಿಪಡಿಸಿದ್ದುಂಟು ಅಂಥಹ ಗ್ರಾಮೀಣ ಪ್ರೇಮಿಯಾಗಿದ್ದರು ಬಣಕಾರರು. ಸಾಹಿತಿಯಾಗಿ, ರಾಜಕಾರಣೀಯಾಗಿ, ಪತ್ರಕರ್ತರಾಗಿ ರೂಪಗೊಂಡಿದ್ದು ಇದೇ ಪರಿಸರದಲ್ಲಿ ಹೀಗಾಗಿ ಹುಟ್ಟೂರಿನ ಬಗ್ಗೆ ಅಪಾರವಾದ ಕಾಳಜಿ ಹೊಂದಿದ್ದರು. ತಮ್ಮ ಕ್ಷೇತ್ರದ ಜ್ವಲಂತ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಬಣಕಾರರ ಪ್ರಾಮಾಣಿಕ ಪ್ರಯತ್ನ ಮೆಚ್ಚುವಂತಹದ್ದಾಗಿದೆ.

ಬಣಕಾರರು ತುಂಬಾ ಸರಳ ಜೀವಿ ಅಷ್ಟೇ ನಿರ್ಮಲವಾದ ಮನಸ್ಸುಳ್ಳವರು. ವಿಧಾನಸಭೆ, ವಿಧಾನ ಪರಿಷತ್ತು ಹೀಗೆ ಎರಡು ಸದನಗಳಲ್ಲಿ ಉತ್ತಮ ಸಂಸದೀಯ ಪಟುಗಳಾಗಿ ಮೆರೆದರೂ ಆಡಂಬರದ ಜೀವನಕ್ಕೆ ಎಂದು ಮಾರು ಹೋದವರಲ್ಲ ಬಣಕಾರರ ಉಡುಗೆ ತೊಡಿಗೆಗಳು ಅಷ್ಟೇ ಸರಳ ಅಷ್ಟೇ ಸರಳ ಮತ್ತು ಸಂಪ್ರದಾಯಬದ್ಧಹುಗಳಾಗಿವೆ. ಖಾದಿ ಜುಬ್ಬಾ, ಲುಂಗಿ, ಹೆಗಲ ಮೇಲೆ ಶಾಲು ಕಣ್ಣಿಗೆ ದಪ್ಪಾದ ಗಾಜಿನ ಕನ್ನಡಕ ಕೈಯಲ್ಲಿ ಬೀಡಿ.

ಬೀಡಿ ಚಟವಂತೂ ಹೇಳ ತೀರದು ಎನೇ ಬಿಟ್ಟರೂ ಬೀಡಿ ಬಿಡದ ಹಟವಾದಿಯಾಗಿದ್ದರು. ತರಳು ಬಾಳು ಜಗದ್ಗುರುಗಳಿಗೂ ಬಣಕಾರರಿಂದ ಬೀಡಿ ಚಟವನ್ನು ಬಿಡಿಸಲು ಸಾಧ್ಯವಾಗಲಿಲ್ಲ. ಅಲ್ಲದೆ ಆತ್ಮೀಯ ಸ್ನೇಹಿತರಾಗಿದ್ದ ನಾಡೋಜ ಪಾಟೀಲ ಪುಟ್ಟನವರಿಗೂ ಸಾಧ್ಯವಾಗಲಿಲ್ಲವಂತೆ.

ಆಗಾಗ ಅನಾರೋಗ್ಯಕ್ಕೆ ತುತ್ತಾಗಿ ಬಣಕಾರರು ಆಸ್ಪತ್ರೆಗೆ ಸೇರಿದಾಗ ತಲೆ ದಿಂಬಿನಲ್ಲಿ ಬೀಡಿ ಕಡ್ಡಿಪೊಟ್ಟಣ ಇರಲೇಬೇಕು ಎಷ್ಟೊ ಸಲ ವೈದ್ಯರು ಬಣಕಾರರೇ ಬೀಡಿ ಸೇದುವುದನ್ನು ನಿಲ್ಲಿಸಿ ಎಂದರೆ ಅದನ್ನು ಹೇಳಲಿಕ್ಕೆ ನೀವೆ ಬೇಕೆ, ಬೀಡಿ ಬಿಡುವುದಾದರೆ ಆಸ್ಪತ್ರೆಗೆ ಏಕೆ ಬರಬೇಕು ಎಂದು ಹಾಸ್ಯವಾಗಿ ಮಾತನಾಡುತ್ತಿದ್ದರಂತೆ. ಬಣಕಾರರ ಇಂಥಹ ಹಾಸ್ಯ ಮಾತುಗಳನ್ನು ಕೇಳಬೇಕೆಂದರೆ ವೈದ್ಯರು ಆಗಾಗ ಇಂತಹ ಪ್ರಶ್ನೆಗಳನ್ನು ಕೇಳುತ್ತಿದ್ದರಂತೆ. ಈ ನಾಡಿನ ಭಾಷೆ, ಜಲ, ನೆಲದ ಬಗ್ಗೆ ಇದ್ದ ಅಭಿಮಾನದ ನಂಟು ಎಷ್ಟಿತ್ತೋ ಅಷ್ಟೇ ನಂಟು ಬೀಡಿ ಸೇದುವುದರೊಂದಿಗೆ ಇದ್ದದ್ದುಂಟು ಎಂದರೆ ತಪ್ಪಾಗಲಿಕ್ಕಿಲ್ಲ ಸೀಗೆಕಾಯಿ ಸಂಬಂಧವನ್ನೇ ಹೋಲುವ ಸಾಹಿತ್ಯ ಮತ್ತು ರಾಜಕೀಯ ಬಣಕಾರರಿಗೆ ಎಷ್ಟು ಜೊತೆಯಾಗಿದ್ದವೋ ಅಷ್ಟೇ ಬೆಂಕಿ ಪೊಟ್ಟಣ ಬೀಡಿ ಅಷ್ಟೇ ಜೋತೆಯಾಗಿರಿಸಿಕೊಂಡು ಬಣಕಾರರು ಬದುಕಿದವರಾಗಿದ್ದರು.

## ಬಣಕಾರರ ಕಾವ್ಯಮಯ ಜೀವನ:

ವಿಧಾನ ಮಂಡಲದ ಎರಡು ಸದನಗಳಲ್ಲಿ ಸದಸ್ಯರಾಗಿ ಸೇವೆ ಸಲ್ಲಿಸಿದ್ದ ಮಹದೇವ ಬಣಕಾರರು ವಿಧಾನ ಮಂಡಳದಲ್ಲಿ ಮಾಡಿದ ಅವರ ಭಾಷಣಗಳಲ್ಲಿ ಮತ್ತು ಸುಧೀರ್ಗ ಚರ್ಚೆಗಳಲ್ಲಿ ಹೆಚ್ಚಾಗಿ ನಾಡಿನ ಜನತೆಯ ಜ್ವಲಂತ ಸಮಸ್ಯೆಗಳ ಮತ್ತು ಗಡಿ ನಾಡಿನ ಅನೇಕ ಸಮಸ್ಯೆಗಳ ಬಗ್ಗೆಯೇ ಹೆಚ್ಚು ತಲೆಕೆಡಿಸಿಕೊಳ್ಳುತ್ತಿದ್ದರು.

ವಿಧಾನ ಮಂಡಲದ ಎರಡೂ ಸದನಗಳ ಕಾರ್ಯ ಕಲಾಪಗಳಲ್ಲಿ ದಾಖಲಾಗಿರುವ ಅವರ ಮಾತುಗಳು ಅವರ ಕಾವ್ಯ ಪ್ರತಿಭೆಗೆ ಸಾಕ್ಷಿಯಾಗಿವೆ ಸದನದ ಕಾರ್ಯಕಲಾಪಗಳಲ್ಲಿ ಚರ್ಚಿಸುವಾಗ ಕಾವ್ಯವನ್ನು ನಿಸ್ಸಂದೇಹವಾಗಿ ಬಳಸಿಕೊಂಡು ಇನ್ನೊಬ್ಬರನ್ನು ಇಕ್ಕಟ್ಟಿಗೆ ಸಿಲುಕಿಸುತ್ತಿದ್ದರು ಇದರಿಂದ ಇತರ ಸಂಸದೀಯ ಪಟುಗಳು ಕಾವ್ಯ ಕೃಷಿಯಲ್ಲಿ ಅಪಾರ ಪಾಂಡಿತ್ಯವನ್ನು ಪಡೆದುಕೊಂಡ ಬಣಕಾರರನ್ನು ಸದನದಲ್ಲಿ ಮಾತನಾಡಿಸುವುದೇ ತಪ್ಪಾಗುತ್ತಿತ್ತು. ಅಪ್ಪಿ ತಪ್ಪಿ ಇವರ ಜೊತೆಗೆ ಯಾವುದೇ ವಿಷಯದ ಬಗ್ಗೆ ಯಾರಾದರು ಪೂರ್ವ ತಯಾರಿ ಇಲ್ಲದನೇ ಚರ್ಚೆಗೆ  ಇಳಿದರೆ ಅವರನ್ನು ಮಾತಿನ ಮೂಲಕ ಅಂಕಿ ಅಂಶಗಳ ಸಮೇತ ಅವರನ್ನು ಹಣ್ಣುಗಾಯಿ ನೀರುಗಾಯಿ ಆಗುವ ಹಾಗೆ ಮಾಡಿ ಬಿಡುತ್ತಿದ್ದರು.

1967 ರಲ್ಲಿ ಬಣಕಾರರು ವಿಧಾನ ಸಭೆಯಲ್ಲಿ ಬ್ಯಾಡಗಿ ಮತಕ್ಷೇತ್ರವನ್ನು ಪ್ರತಿನಿಧಿಸಿದ್ದ ಸಮಯ, ರಾಮಕೃಷ್ಣ ಹೆಗಡೆಯವರು ಎಸ್. ನಿಜಲಿಂಗಪ್ಪನವರ ಮಂತ್ರಿ ಮಂಡಲದಲ್ಲಿ ಹಣಕಾಸು ಮಂತ್ರಿಯಾಗಿದ್ದರು. ರಾಮಕೃಷ್ಣ ಹೆಗಡೆಯವರು ಕಾರ್ಯ ನಿಮಿತ್ತ ವಿದೇಶಕ್ಕೆ ಹೋಗಿದ್ದರು. ಹೆಗಡೆಯವರು ಬಂದ ನಂತರವೇ ವಿಧಾನ ಸಭೆಯ ಅಧಿವೇಶನ ಮಾಡಬೇಕೆನ್ನುವುದು ಎಸ್ ನಿಜಲಿಂಗಪ್ಪನವರ ಮತ್ತು ಕೆಲವೊಂದು ಸಚಿವರ ಅಭಿಪ್ರಾಯವಾಗಿತ್ತು. ಆದರೆ ಬಣಕಾರರಿಗೆ ಇದು ಕಸಿವಿಸಿ ಉಂಟು ಮಾಡಿತ್ತು. ಹೆಗಡೆಯವರು ಬಂದ ನಂತರವೇ ಅಧಿವೇಶನವೇ? ಇದು ಸಮಂಜಸವಾದುದಲ್ಲ, ಹೆಗಡೆಯವರು ವಿದೇಶಕ್ಕೆ ಹೋದರೇನಂತೆ ಅಧಿವೇಶನ ನಡೆಯಲೇ ಬೇಕು ಎನ್ನುವುದು ಬಣಕಾರರ ವಾದವಾಗಿತ್ತು. ಬಣಕಾರರ ಮತ್ತು ಹೆಗಡೆಯವರ ಸ್ನೇಹ ಸಂಬಂಧ ಹಳಸಿತ್ತು ಅಂತಲ್ಲ, ಸ್ನೇಹಿತರೇ ಇರಲಿ ತಮ್ಮ ಮನೆಯವರೇ ಆಗಿರಲಿ ಯಾರಾದರೂ ಆಗಲಿ ಒಟ್ಟಿನಲ್ಲಿ ಯಾವ ಸಮಯಕ್ಕೆ ಎನು ಆಗಬೇಕೋ ಅದು ಆಗಬೇಕು, ಅದರಲ್ಲಿ ಸರ್ಕಾರದ ಈ ಮಹತ್ವದ ಅಧಿವೇಶನದಲ್ಲಿ ಹೆಗಡೆಯವರು ಬಂದ ಮೇಲೆ ಅಧಿವೇಶನ ನಡೆಸುವುದು ಎಷ್ಟೊಂದು ಸೂಕ್ತವಾದದ್ದು, ಯಾರು ಇಲ್ಲವಾದರೇನು ಇದ್ದರೇನು ಅಧಿವೇಶನ ನಡಸಬೇಕೆನ್ನುವುದು ಬಣಕಾರರ ವಾದವಾಗಿತ್ತು.

ಹೆಗಡೆಯವರು ಬಂದ ನಂತರವೇ ಅಧಿವೇಶನ ಪ್ರಾರಂಭವಾಗಿತ್ತು. ಅಧಿವೇಶನದಲ್ಲಿ ಹೆಗಡೆಯವರು ಹಾಜರಿದ್ದರು, ಇವರು ಬಂದ ಮೇಲೆ ಅಧಿವೇಶನ ಪ್ರಾರಂಭ ಮಾಡಿದನ್ನು ಮನಸ್ಸಿನಲ್ಲಿಟ್ಟುಕೊಂಡಿದ್ದ ಬಣಕಾರರು ಅಧಿವೇಶನದಲ್ಲಿ ಹೆಗಡೆಯವರ ಮೇಲಿದ್ದ ಸ್ನೇಹ,ಪ್ರೀತಿ ಎಲ್ಲವನ್ನೂ ಮರೆತ ಬಣಕಾರರು, ಹೆಗಡೆಯವರ ಮೇಲೆ ನಡೆಸಿದ ಗದಾ ಪ್ರಹಾರ ಅತ್ಯಂತ ಕಾವ್ಯಮಯವಾಗಿತ್ತು. ಅನೇಕ ಲೇಖಕರು

ಬಣಕಾರರ ಕುರಿತು ರಚಿಸಿದ ಪುಸ್ತಕದಲ್ಲಿ ಈ ಕಾವ್ಯಮಯ ಪ್ರಸಂಗವನ್ನು ಸೆರೆಹಿಡಿದಿದ್ದಾರೆ.

ರೋಚಕ ಕಾವ್ಯವವನ್ನು ಬಣಕಾರರೇ ರಚಿಸಿ ಸದನದಲ್ಲಿ ಹೆಗಡೆಯವರನ್ನು ಟೀಕೆಗೆ ಗುರಿಯಾಗಿಸಿದ್ದರು. ಸದನದಲ್ಲಿನ ಬಣಕಾರರ ಈ ಕಾವ್ಯ ಗದಾ ಪ್ರಹಾರಕ್ಕೆ ಹೆಗಡೆಯವರು ಸಂಕಷ್ಟಕ್ಕೆ ಸಿಲುಕಿ ಸೋತುಹೋಗಿದ್ದರು. ಕವಿತೆಯ ಕಾವ್ಯ ಗುಣವನ್ನಷ್ಟೇ ಈ ಕಾವ್ಯದಲ್ಲಿ ಪ್ರತಿಯೊಬ್ಬರು ಕಾಣುವ ಹಾಗೆ ಬಣಕಾರರು ರಚಿಸಿ ಸದನದಲ್ಲಿ ಈ ಕೆಳಗಿನಂತೆ ಹೇಳಿದ್ದುಂಟು,

ಹೊನಲೂಲ ಹೊನ್ನ ಹೊಗೆಯ ಹಡಗಿನಲಿ ಪಯಣಿಸುತ
ದಿಕ್ಕೆನ್ನೆಯರ ರನ್ನಗೆನ್ನೆಯೊಳವಿತ ಮಧುಪಾನ ಸೇವಿಸುತ
ಸೂರ್ಯ ರಸ್ಮಿಯ ಆನಂದವ ಕಂಡ
ಓ ಅರ್ಥ ಮಂತ್ರಿ ! ನೀ ಬರಿಯ ಕಂತ್ರಿ !
ಮುದ್ದಾದ ಮೂಖದಲ್ಲಿ ಮುಗುಳು ನಗೆಸೂಸಿ
ಹಾಳು ಮಾಡಿದಿ ನಮ್ಮ ಹಣದ ರಾಶಿ!
ಬರುವಾಗ ನಮಗೆಂದು ಏನೇನು ತಂದಿ
ಏನಿತ್ತು ಅದನ್ನೆಲ್ಲ ಒಬ್ಬನೇ ತಿಂದಿ

ಇಂತಹ ಕಾವ್ಯ ಟೀಕೆಗೆ ಗುರಿಯಾದ ಸಚಿವರಾದ ಹೆಗಡೆಯವರು, ಶಾಸಕರಾಗಿದ್ದ ಬಣಕಾರರ ಮನಸ್ಸು ಕೆಡಿಸಿರಲಿಲ್ಲ ಎಂಬುದು ಇಲ್ಲಿ ಸ್ಪಷ್ಟವಾದದ್ದು. ಅವರಿಬ್ಬರ ಸ್ನೇಹ ಸಂಬಂಧಕ್ಕೆ ಎಂದೂ ಧಕ್ಕೆ ಬಂದಿರಲಿಲ್ಲ. ಮುಂದೆ ಈ ಇಬ್ಬರೂ ನಾಯಕರು ಒಂದೇ ಪಕ್ಷದಲ್ಲಿದ್ದರೂ ಬಣಕಾರರು ಹೆಗಡೆಯವರ ನಾಯಕತ್ವ ಗುಣವನ್ನು ಒಪ್ಪಕೊಂಡಿದ್ದಾರೆ. ಅಷ್ಟೇ ಹೆಗಡೆಯವರು ಬಣಕಾರರ ಅತೀ ಆಭಿಮಾನಿಯಾಗಿದ್ದರು ಎಂಬುದರಲ್ಲಿ ಎರಡು ಮಾತಿಲ್ಲ.

ಮಹದೇವ ಬಣಕಾರರಿಗೆ ಹೆಗಡೆಯವರ ಬಗ್ಗೆ ಅಪಾರ ಗೌರವ ಹೊಂದಿದ್ದರು. ಒಂದೇ ಪಕ್ಷದಲ್ಲಿದ್ದರೂ ಹೆಗಡೆಯವರ ತಪ್ಪು ನಿರ್ಧಾರಕ್ಕೆ ಬಣಕಾರರು ಎಂದು ಸೇರುತ್ತಿರಲಿಲ್ಲ ತಕ್ಷಣವೇ ಅವರನ್ನು ತರಾಟೆಗೆ ತೆಗೆದಕೊಳ್ಳುತ್ತಿದ್ದರು.ಹೀಗಾದರೂ ಹೆಗಡೆಯವರು ಬಣಕಾರರ ಮೇಲೆ ಎಳ್ಳಷ್ಟು ಬೇಜಾರವಾಗಿ ಸ್ನೇಹವನ್ನು ಕಳೆದುಕೊಳ್ಳುತ್ತಿರಲಿಲ್ಲ. ಎಕೆಂದರೆ ಬಣಕಾರರ ಸಾಮರ್ಥ್ಯದ ಬಗ್ಗೆ ಹೆಗಡೆಯರು ಸಮರ್ಥಿಸಿಕೊಂಡಿದ್ದರು.

ಮುಂದೆ ಹೆಗಡೆಯವರು ಜನತಾದಳವನ್ನು ಬಿಟ್ಟು ಲೋಕಶಕ್ತಿ ಪಕ್ಷಕ್ಕೆ ಸೇರಿಕೊಂಡು ಕರ್ನಾಟಕ ರಾಜ್ಯದ ರಾಜ್ಯಾಧ್ಯಕ್ಷರಾದರು. ಹೆಗಡೆಯವರ ಮೇಲಿನ

ಅಭಿಮಾನಕ್ಕಾಗಿ ಬಣಕಾರರು ಲೋಕ ಶಕ್ತಿ ಪಕ್ಷದಲ್ಲಿ ಗುರುತಿಸಿಕೊಂಡರು. ಮುಂದಿನ ವಿಧಾನ ಸಭೆಯ ಚುನಾವಣೆಯಲ್ಲಿ ಲೋಕಶಕ್ತಿ ಪಕ್ಷ ಅಧಿಕಾರಕ್ಕೆ ಬಂದರೆ ಲಿಂಗಾಯಿತರನ್ನೇ ಮುಖ್ಯಮಂತ್ರಿ ಅಭ್ಯರ್ಥಿಯನ್ನಾಗಿ ಬಿಂಬಿಸಬೇಕೆಂಬ ವಿಷಯ ದೆಹಲಿಯಲ್ಲಿ ನಡೆದ ಚರ್ಚೆಯಲ್ಲಿ ಪ್ರಮುಖವಾಗಿತ್ತು.

ಪಕ್ಷದ ರಾಜ್ಯಾಧ್ಯಕ್ಷರಾಗಿದ್ದ ಹೆಗಡೆಯವರು ಲಿಂಗಾಯಿತರನ್ನೇ ಮುಖ್ಯ ಮಂತ್ರಿ ಗಾದೆಗೆ ಆಯ್ಕೆ ಮಾಡುವುದಾದರೆ ಮಹದೇವ ಬಣಕಾರರೇ ಮುಖ್ಯಮಂತ್ರಿ ಅಭ್ಯರ್ಥಿ ಎಂದು ಘೋಸಿಸಿ ಬಿಟ್ಟರು. ದೆಹಲಿಯ ಸ್ಥಳೀಯ ಪತ್ರಿಕೆಗಳು ಸೇರಿದಂತೆ ಎಲ್ಲ ಪತ್ರಿಕೆಗಳು ಈ ವಿಷಯವನ್ನು ಪ್ರಕಟಿಸಿದ್ದವು.

ಮುಂದೆ ಬಣಕಾರರ ನಿಷ್ಠುರತೆಯನ್ನು, ನಿರ್ಮಲವಾದ ಮನಸ್ಸು ಕೈಗೊಂಡ ಕೆಲಸದಲ್ಲಿನ ಪ್ರಾಮಾಣಿಕತೆ, ಜನಪ್ರಿಯತೆಗೆ ಅನುಗುಣವಾಗಿ ಹೆಗಡೆಯವರು ಅವರಿಗೆ ಲೋಕ ಶಕ್ತಿ ಪಕ್ಷದ ದಕ್ಷಿಣ ಭಾಗದ ರಾಜ್ಯಗಳ ಉಸ್ತುವಾರಿಯನ್ನು ನೀಡಿದರು. ಆ ಕಾರಣಕ್ಕಾಗಿ ರಾಮಕೃಷ್ಣ ಹೆಗಡೆಯವರು ಮತ್ತು ತರಳುಬಾಳು ಜಗದ್ಗುರು ಶ್ರೀ ಶಿವವಕುಮಾರ ಸ್ವಾಮಿಗಳು ನನ್ನ ಎರಡು ಕಣ್ಣುಗಳಿದ್ದಂತೆ, ಎಂದು ಮಹದೇವ ಬಣಕಾರರು ತಮ್ಮ ಸ್ನೇಹಿತ ಬಳಗದಲ್ಲಿ ಆಗಾಗ ಹೇಳಿಕೊಳ್ಳುತ್ತಿದ್ದರಂತೆ.

## ಸಾಂಸ್ಕೃತಿಕ ರಾಯಭಾರಿಯ ಅಂತಿಮ ಯಾತ್ರೆ :

ಬಹಳ ದಿನದಿಂದ ಸಕ್ಕರೆ ಖಾಯಿಲೆಯಿಂದ ಬಳಲುತ್ತಿದ್ದ ಬಣಕಾರರಿಗೆ ಒಂದು ಕಾಲಿಗೆ ಗ್ಯಾಂಗ್ರೀನ್ ಆಯಿತು. ಓಡಾಡಲು ಬಹಳ ತೊಂದರೆಯಾಯಿತು. ನಂತರ ಬಣಕಾರರನ್ನು ಬೆಂಗಳೂರಿನ ಮಣಿಪಾಲ್ ಆಸ್ಪತ್ರೆಗೆ ಸೇರಿಸಲಾಯಿತು. ವೈದ್ಯರು ಬಣಕಾರರನ್ನು ಕೂಲಂಕೂಶವಾಗಿ ವೈದ್ಯಕೀಯ ಪರೀಕ್ಷೆಗೆ ಒಳಪಡಿಸಲಾಯಿತು. ವೈದ್ಯರು ಬಣಕಾರರ ಗ್ಯಾಂಗ್ರಿನ್ ಆದ ಕಾಲನ್ನು ಕತ್ತರಿಸಬೇಕೆಂದರು. ಆದರೆ ಬಣಕಾರರು ಕಾಲು ಹೋಗುತ್ತದೆ ಎಂದು ಧೃತಿಗೆಡಲಿಲ್ಲ. ಬಣಕಾರರ ಮತ್ತು ಅವರ ಕುಟುಂಬದ ಒಪ್ಪಿಗೆಯ ಮೇರೆಗೆ ಬಣಕಾರರ ಕಾಲನ್ನು ಮಣಿಪಾಲ್ ಆಸ್ಪತ್ರೆಯ ವೈದ್ಯರು ಶಸ್ತ್ರ ಚಿಕಿತ್ಸೆಗೊಳಪಡಿಸಿ ಕತ್ತರಿಸಿದರು. ಅಂದಿನಿಂದ ಬಣಕಾರರು ರೆಕ್ಕೆ ಇಲ್ಲದ ಹಕ್ಕಿಯಂತಾದರು. ಇನ್ನೊಬ್ಬರ ಕೈಯಲ್ಲಿನ ಕೂಸಾದರು.

ಗ್ಯಾಂಗ್ರೀನ್ ನಿಂದ ಒಂದು ಕಾಲು ಕತ್ತರಿಸಿದಾಗ ಹಾವೇರಿ ತಾಲೂಕಿನ ಯತ್ತಿನಹಳ್ಳಿ ಗ್ರಾಮದ ಅಬ್ದುಲ್ ಹುಬ್ಬಳ್ಳಿ ತಂದೆಗಿಂತ ಹೆಚ್ಚಾಗಿ ಬಣಕಾರರನ್ನು ಆರೈಕೆ ಮಾಡಿದರು.ಅಬ್ದುಲ್‌ನ ಸೇವೆ ಅವತ್ತಿನದಲ್ಲ. ಬಣಕಾರರು ಸಾಯುವವರೆಗೂ

ಅವರ ಜೊತೆಗೆಯಿದ್ದು ಸೇವೆ ಮಾಡಿದರು. ಬಣಕಾರರ ಧರ್ಮಪತ್ನಿ ಪಾರ್ವತಮ್ಮನವರು ಅಬ್ದುಲ್‌ನನ್ನು ಮಗನಂತೆ ಕಾಣುತ್ತಿದ್ದರು. ಅಬ್ದುಲ್ ಮುಸ್ಲಿಂ ಜಾತಿಯವನಾದರೂ ಬಣಕಾರರ ಕರ್ತವ್ಯ ನಿಷ್ಠೆಯನ್ನು ಕಂಡು, ಅವರಲ್ಲಿನ ಪ್ರೀತಿ ವಾತ್ಸಲ್ಯವನ್ನು ಕಂಡು ಬಣಕಾರರ ಮಗನಂತೆ ಅವರ ಜೊತೆಯಲ್ಲಿದ್ದುಕೊಂಡು ಸ್ವತ: ಮಕ್ಕಳು ಮಾಡದ ಆರೈಕೆಯನ್ನು ಮಾಡಿದ್ದರು. ಅಬ್ದುಲ್ ಬಾಲ್ಯದವನಾಗಿದ್ದಾಗಲೇ ಬಣಕಾರರು ಅವನ ಮಾತಿನ ಚಾತುರ್ಯವನ್ನು ಕಂಡು ತಮ್ಮ ತೆಕ್ಕೆಗೆ ತೆಗೆದುಕೊಂಡರು.ತಮ್ಮ ಕ್ಷೇತ್ರದ ಜನತೆ ಬಣಕಾರರ ಹತ್ತಿರ ಬೆಂಗಳೂರಿಗೆ ಬಂದರೆ ಅವರ ಕೆಲಸವನ್ನು ಮಾಡಿಕೊಡಲು ಸರ್ಕಾರಿ ಕಚೇರಿಗಳಿಗೆ ಅಬ್ದಲ್‌ನನ್ನು ಕಳಿಸಿಕೊಡುತ್ತಿದ್ದರು. ಬಣಕಾರರ ಶಿಫಾರಸ್ಸು ಪತ್ರವನ್ನು ಹಿಡಿದುಕೊಂಡು ಸರ್ಕಾರಿ ಕಚೇರಿಗಳಿಗಳಿಗೆ ಅಲೆದಾಡಿ ಬೇಸರ ಮಾಡಿಕೊಳ್ಳದೇ ನಿಷ್ಠೆಯಿಂದ ಸಾರ್ವಜನಿಕರ ಕೆಲಸ ಮಾಡಿ ಬಣಕಾರರ ಪ್ರೀತಿಗೆ ಪಾತ್ರರಾಗಿದ್ದರು ಅಬ್ದುಲ್. ತನ್ನ ಹೆತ್ತ ತಂದೆ ತಾಯಿಗಳನ್ನು ಮರೆತ ಅಬ್ದುಲ್ ಬಣಕಾರರೇ ನನ್ನ ತಂದೆ ಪಾರ್ವತಮ್ಮನವರೇ ನನ್ನ ತಾಯಿ ಅಂತಾ ತಿಳಿದು ಸೇವೆ ಮಾಡುತ್ತಿದ್ದರು. ಸಣ್ಣವನಿರುವಾಗಲೇ ಅಬ್ದುಲ್‌ನನ್ನು ಬಣಕಾರರು ತಮ್ಮ ತೆಕ್ಕೆಗೆ ತೆಗೆದುಕೊಂಡಿದ್ದರು. ಅಬ್ದುಲ್‌ನನ್ನು ಬಣಕಾರರು ತಮ್ಮ ಮಕ್ಕಳಿಗಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದರು. ಅಷ್ಟೇ ಅಲ್ಲದೆ ಕೆಲವೊಂದು ವಿಚಾರದಲ್ಲಿ ಹಣಕಾಸಿನ ವ್ಯವಹಾರಗಳನ್ನು ಬಣಕಾರರು ತಮ್ಮ ಮಕ್ಕಳಿಗಿಂತ ಅಬ್ದುಲ್‌ನ ಕೈಯ್ಯಲ್ಲಿ ಕೊಡುತ್ತಿದ್ದರು. ಅಬ್ದುಲ್‌ನ ನಿಷ್ಠೆ ಬಣಕಾರರಿಗೆ ಹಿಡಿಸಿತ್ತು. ಆ ನಿಟ್ಟಿನಲ್ಲಿ ಅಬ್ದುಲ್ ತಮ್ಮ ತಂದೆಗಿಂತ ಹೆಚ್ಚಾಗಿ ಬಣಕಾರರ ಕೈಯಲ್ಲಿ ಬೆಳೆದು ಬಣಕಾರರ ಸೇವೆಯಲ್ಲಿ ತೊಡಗುತ್ತಿದ್ದರು.

ಬಣಕಾರರು ಬೌರಿಂಗ್ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾಗ ಅಬ್ದುಲ್ ಹುಬ್ಬಳ್ಳಿ ಮತ್ತು ಇನ್ನೊಬ್ಬ ಶಿಷ್ಯ ಮಹೇಶ ಬಡಿಗೇರ ಜಾಗರೂಕತೆಯಿಂದ ಮನೆಯವರಿಗಿಂತ ಹೆಚ್ಚಾಗಿ ಆರೈಕೆ ಮಾಡಿದರು. ನಿಸ್ವಾರ್ಥದಿಂದ ಮಾಡಿದ ಸೇವೆಗೆ ಈ ಇಬ್ಬರೂ ಶಿಷ್ಯರು ಬಣಕಾರರ ಕುಟುಂಬದ ಬಳಗದವರಿಂದ ಸೈ ಎನಿಸಿಕೊಂಡರು. ಬಣಕಾರರ ಧರ್ಮ ಪತ್ನಿ ಪಾರ್ವತಮ್ಮನವರಂತೂ ಈ ಶಿಷ್ಯರನ್ನು ಈಗಲೂ ಮಕ್ಕಳಂತೆ ನೋಡಿಕೊಳ್ಳುತ್ತಿದ್ದಾರೆ.

ಬೌರಿಂಗ್ ಆಸ್ಪತ್ರೆಯಲ್ಲಿದ್ದ ಬಣಕಾರರನ್ನು ಕಾಣಲು ಮತ್ತು ಅವರ ಆರೋಗ್ಯ ವಿಚಾರಿಸಲು ರಾಜಕೀಯ ಮುಖಂಡರು, ಶಾಸಕರು, ಗಣ್ಯಾತಿ ಗಣ್ಯರು ಬಂಧು ಬಾಂಧವರು ಬಂದು ಹೋಗಿದ್ದರು. ಬಣಕಾರರು ಬೇಗನೆ ಗುಣಮುಖರಾಗಿ ಮತ್ತೆ ಸಾಹಿತ್ಯದ ಹಾಗೂ ರಾಜಕೀಯ ಚಟುವಟಿಕೆಗಳು ನಿರಂತರವಾಗಿ ಸಾಗುವಂತಾಗಲಿ ಎಂದು ಹಾರೈಸಿ ಬರುತ್ತಿದ್ದರು.

ಎಷ್ಟೋ ಮಂದಿ ಬಂದು ಕಾಲಿಲ್ಲದೇ ಇರುವ ಬಣಕಾರರ ಜೀವನದ ಬಗ್ಗೆ ಬಂದವರಲ್ಲಿ ಕೆಲವರು ಮರುಕ ಹುಟ್ಟಿಸುತ್ತಿದ್ದರೆ, ಅದನ್ನು ಬಣಕಾರರು ಆತ್ಮ ಸಂತೋಷದಿಂದಲೇ ಸ್ವೀಕರಿಸಿ ಆಗಲೂ ಹಾಸ್ಯದ ಚಟಾಕಿಯನ್ನು ಹಾರಿಸುತ್ತಿದ್ದರು. ಮನುಷ್ಯನಿಗೆ ಕಾಲಿಲ್ಲವಾದರೇನಂತೆ ಕಾಲಿಗಿಂತ ತಲೆ ಮುಖ್ಯ ಎಂದು ಹೇಳಿ ಅವರನ್ನು ಸಮಾಧಾನ ಮಾಡುತ್ತಿದ್ದರಂತೆ.

ಕಾಲು ಕತ್ತರಿಸಿದನಂತರ ದಿನದಿಂದ ದಿನಕ್ಕೆ ಬಣಕಾರರ ಆರೋಗ್ಯ ಮತ್ತಷ್ಟು ಕೈಕೊಡುತ್ತಾ ಬಂತು ವೈದ್ಯರು ಶತಗತ ಪ್ರಯತ್ನಿಸುತ್ತಿದ್ದರು. ಆದರೆ ಫಲಕಾರಿಯಾಗಲಿಲ್ಲ ಜೀವನದಲ್ಲಿ ಬಂದ ಕಷ್ಟ ಸುಖಗಳನ್ನು ಸಮಾನವಾಗಿ ಸ್ವೀಕರಿಸಿದ ಬಣಕಾರರು 2001 ನವ್ಹಂಬರ್ 17 ರಂದು ಮಧ್ಯಾಹ್ನ 1ಗಂಟೆಗೆ ಬೌರಿಂಗ್ ಆಸ್ಪತ್ರೆಯಲ್ಲಿಯೇ ಚಿರ ನಿದ್ರೆಗೆ ಜಾರಿದರು.

ಸಮಾಜವಾದಿಯಾಗಿ, ಜಾತ್ಯತೀತ ವ್ಯಕ್ತಿಯಾಗಿ, ಮುತ್ಸದ್ದಿ ನಾಯಕತ್ವಕ್ಕೆ ಹೆಸರಾದ ಬಣಕಾರರು ಈಹಲೋಕದ ಪಯಣವನ್ನು ಹಿಡಿದಾಗ ಕನ್ನಡ ಮಾತೆಯ ಭವ್ಯ ದೇಗುಲದ ನಿನಾದದ ಗಂಟೆ ಒಮ್ಮಿಂದೊಮ್ಮೆಲೇ ಕಳಚಿ ಬಿದ್ದಂತಾಯಿತು. ಇದರಿಂದ ಕನ್ನಡದ ಅಭಿಮಾನಿಗಳಿಗೆ ಕೆಲವೊಂದು ನಿಷ್ಠಾವಂತ ರಾಜಕಾರಣಿಗಳಿಗೆ ದಿಗಿಲುಬಡಿದಂತೆ ಆಯ್ತು.

ಕನ್ನಡದ ಏಳಿಗೆಗಾಗಿ ಸದಾ ಶ್ರಮಿಸಿ ತಮ್ಮದೆಲ್ಲವನ್ನು ಕನ್ನಡ ನಾಡಿಗೆ ಸಮರ್ಪಿಸಿದ ಬಣಕಾರರು ಜೀವನವನ್ನೇ ಕನ್ನಡಕ್ಕಾಗಿ ತೇಯ್ದರು. ಕವಿಯಾಗಿ, ಶ್ರೇಷ್ಠ ಪತ್ರಕರ್ತರಾಗಿ, ಆಧುನಿಕ ವಚನಕಾರರಾಗಿ, ಖ್ಯಾತ ಭಾಷಣಕಾರರಾಗಿ , ಅತ್ಯುಗ್ರ ಕನ್ನಡ ಅಭಿಮಾನಿಯಾಗಿ, ಉತ್ತಮ ಸಂಸದೀಯ ಪಟುವಾಗಿ ಬಾಳಿದ ಬಣಕಾರರನ್ನು ಆ ದೇವರು ತನಗಾಗಿ ತನ್ನ ಕ್ಷೇತ್ರಕ್ಕೆ ಕರೆದೊಯ್ದನೇ? ಎಂದಿನಿಸದೆ ಇರದು.

ಬಣಕಾರರ ಸಾವಿನ ಸುದ್ದಿ ಕಾಡ್ಗಿಚ್ಚಿನಂತೆ ಹಬ್ಬಿತು. ಆಕಾಶವಾಣಿ ಮತ್ತು ದೂರದರ್ಶನದಲ್ಲಿ ಬಣಕಾರರ ಸಾವಿನ ಸುದ್ದಿ ಆಗಾಗ ಬಿತ್ತರಗೊಳ್ಳುತ್ತಿತ್ತು. ಸುದ್ದಿ ತಿಳಿಯುತ್ತಿದ್ದಂತೆ ಕನ್ನಡದ ಅಭಿಮಾನಿಗಳ, ಹಿತೈಷಿಗಳ, ಸ್ನೇಹಿತ ಬಳಗದ ಹೃದಯಕ್ಕೆ ಕಲ್ಲು ಬಡೆದಂತಾಗಿತ್ತು. ಅವರೆಲ್ಲ ಮೂಕ ವಿಸ್ಮಿತರಾದರು. ಆಕಾಶವಾಣಿ ಮತ್ತು ದೂರ ದರ್ಶನ ಮಾಧ್ಯಮದವರು ಬಣಕಾರರ ಸಾವಿನ ಸುದ್ದಿಯ ಜೊತೆಗೆ ಬಣಕಾರರ ಆದರ್ಶಮಯ ಜೀವನದ ಕುರಿತು ವಿಶೇಷ ಸುದ್ದಿಗಳನ್ನು ಬಿತ್ತರಿಸಿದರು.

ಬೌರಿಂಗ್ ಆಸ್ಪತ್ರೆಯಿಂದ ಬೆಂಗಳೂರಿನ ಮನೆಗೆ ಬಣಕಾರರ ಪಾರ್ಥಿವ ಶರೀರ ಬರುವಷ್ಠರಲ್ಲಿಯೇ ರಾಜಕೀಯ ನಾಯಕರದಂಡು, ಸಮಾಜದ ಎಲ್ಲ ವರ್ಗದ ಜನ ಮತ್ತು ಸಾಹಿತ್ಯಾಸಕ್ತರು ತಂಡೋಪ ತಂಡವಾಗಿ ಬಂದು ಅಲ್ಲಿ ಸೇರಿದ್ದರು. ಪಾರ್ಥೀವ ಶರೀರ ಮನೆಗೆ ತಲುಪುವಷ್ಟರಲ್ಲಿಯೇ ನೆರೆದ ಜನರ ರೋಧನ ಮುಗಿಲು ಮುಟ್ಟಿತ್ತು. ಸಾರ್ವಜನಿಕರ ನಿಯಂತ್ರಣಕ್ಕಾಗಿ ಮತ್ತು ಅಗಲಿದ ಬಣಕಾರರ ಪಾರ್ಥಿವಶರೀರದ ಅಂತಿಮ ದರ್ಶನಕ್ಕೆ ಸಾರ್ವಜನಿಕರ ನಿಯಂತ್ರಣಕ್ಕಾಗಿ ಪೊಲೀಸ್‌ರು ಶಾಂತಿಗಾಗಿ ಕ್ರಮಕೈಗೊಂಡಿದ್ದರು.

ಸ್ವಲ್ಪ ಹೊತ್ತಿನಲ್ಲೇ ಮಾಜಿ ಪ್ರಧಾನಿ ಎಚ್.ಡಿ ದೇವೆಗೌಡರು ಸೇರಿದಂತೆ ರಾಜ್ಯದ ಮುಖ್ಯ ಮಂತ್ರಿಗಳು, ಸಂಪುಟ ದರ್ಜೆಯ ಸಚಿವರು, ಗಣ್ಯರು ಬಂದು ಅಗಲಿದ ನಾಡಿನ ಚೇತನ,ಹೆಮ್ಮೆಯ ಸಾಂಸ್ಕೃತಿಕ ರಾಯಭಾರಿಯ ಅಂತೀಮ ದರ್ಶನ ಪಡೆದು ಗೌರವ ಸಲ್ಲಿಸಿದರು. ಬಣಕಾರರು ನಿಧನರಾದಾಗ ಹೆಗಡೆಯವರು ದೆಹಲಿಗೆ ಹೋಗಿದ್ದರು. ಬಣಕಾರರ ಸಾವಿನ ಸುದ್ದಿ ತಿಳಿಯುತ್ತಿದ್ದಂತೆ ಹೆಗಡೆಯವರಿಗೆ ವಾತೇ ಹೊರಡಲಿಲ್ಲವಂತೆ ಬಣಕಾರರ ಪಾರ್ಥೀವ ಶರೀರ ಮನೆ ತಲುಪವಷ್ಟರಲ್ಲಿಯೇ ಹೆಗಡೆಯವರು ಬಣಕಾರರ ಮನೆಗೆ ದೂರವಾಣಿ ಕರೆ ಮಾಡಿ ಕುಟುಂಬಕ್ಕೆ ಸಾಂತ್ವಾನ ಹೇಳಿದರಂತೆ. ಹೆಗಡೆಯವರ ಪರವಾಗಿ ಅವರ ಅಪ್ತ ಸಹಾಯಕರು ಬಣಕಾರರ ಪಾರ್ಥೀವ ಶರೀರಕ್ಕೆ ಪುಷ್ಪಗುಚ್ಚವಿರಿಸಿ ನಮನ ಸಲ್ಲಿಸಿದರಂತೆ.

ರಾತ್ರಿ 10.30ಕ್ಕೆ ಬಣಕಾರರ ಪಾರ್ಥೀವ ಶರೀರ ಬೆಂಗಳೂರಿನಿಂದ ಅವರ ಹುಟ್ಟೂರಾದ ಮೊಟೆಬೆನ್ನೂರಿಗೆ ಹೊರಟಿತು. ದಾರಿ ಉದ್ದಕ್ಕೂ ಬಣಕಾರರ ಅಭಿಮಾನಿಗಳು, ಸಾಹಿತ್ಯಾಸಕ್ತರು ಪಾರ್ಥೀವ ಶರೀರಕ್ಕೆ ಅಂತೀಮ ನಮನ ಸಲ್ಲಿಸಿದರು.ತುಮಕೂರು ಚಿತ್ರದುರ್ಗದ ಮೂಲಕ ಪಾರ್ಥೀವ ಶರೀರವನ್ನು ಕೊಂಡೈಯ್ಯುವಾಗ ಬಣಕಾರರ ಪರಮಾಧ್ಯ ಗುರುಪೀಠ ಸಿರಿಗೇರಿ ಮಠಕ್ಕೆ ಪಾರ್ಥೀವ ಶರೀರವನ್ನು ತೆಗೆದುಕೊಂಡು ಹೋಗಲಾಯಿತು. ಬಣಕಾರರ ಪರಮಾಧ್ಯ ಗುರು ಶಿವಕುಮಾರ ಸ್ವಾಮಿಗಳ ಮಹಾ ಗದ್ದುಗೆಯ ಮುಂದೆ ಇಟ್ಟು ಪೂಜೆ ನೆರವೇರಿಸಲಾಯಿತು. ಆ ಸಂದರ್ಭ ಮತ್ತೆ ಗುರು ಶಿಷ್ಯನ ಭೇಟಿಯಾದಂತಿತ್ತು. ಸಿರಿಗೆರಿಮಠಕ್ಕೂ ಬಣಕಾರರಿಗೂ ಇದ್ದ ಅವಿನಾಭಾವ ಸಂಬಂಧವನ್ನು ಅಲ್ಲಿ ನೆರೆದಿದ್ದ ಶಿವಮೂರ್ತಿ ಶಿವಾಚಾರ್ಯ ಸ್ವಾಮಿಜಿ, ಮಲ್ಲಿಕಾರ್ಜುನ ಸ್ವಾಮಿಜಿ ಸೇರಿದಂತೆ ಸುತ್ತಮುತ್ತಲಿನ ಗ್ರಾಮಸ್ತರು ಸ್ಮರಿಸಿದರು. ನಂತರ ದಾವಣಗೇರಿ ಅನುಭವ ಮಂಟಪದಲ್ಲಿ ಗೌರವ ಸಲ್ಲಿಸಲಾಯಿತು. ಹರಿಹರ– ರಾಣೆಬೆನ್ನೂರ ಮಾರ್ಗವಾಗಿ

ರಾಷ್ಟ್ರೀಯ ಹೆದ್ದಾರಿಯಲ್ಲಿರುವ ಬಣಕಾರರ ಹುಟ್ಟೂರು ಮೊಟೆಬೆನ್ನೂರಿಗೆ ಪಾರ್ಥೀವ ಶರೀರ ತಲುಪಿದಾಗ ಸುರ್ಯ ಉದಯವಾಗುತ್ತಿದ್ದ.

ರಾಜ್ಯದ ವಿವಿಧ ಭಾಗಗಳಿಂದ ಬಣಕಾರರ ಅಭಿಮಾನಿಗಳು ಆಗಲೇ ಸಹಸ್ರಾರು ಸಂಖ್ಯೆಯಲ್ಲಿ ಮೊಟೆಬೆನ್ನೂರಿಗೆ ಜಮಾಯಿಸಿದ್ದರು. ಮೊಟೆಬೆನ್ನೂರ ಗ್ರಾಮಸ್ತರು, ಶಾಲೆಯ ಮಕ್ಕಳು ಹಿತೈಷಿಗಳು ಪುಣ್ಯ ಪುರುಷನ ಪಾರ್ಥೀವ ಶರೀರರದ ದರ್ಶನ ಪಡೆಯಲು ರಾತ್ರಿವಿಡಿ ಕಾಯುತ್ತಿದ್ದರು. ಅವರಲ್ಲಿ ದು:ಖ ಮಡುಗಟ್ಟಿತ್ತು. ಗ್ರಾಮಕ್ಕೆ ಬರುತ್ತಿದ್ದಂತೆ ಅವರ ದು:ಖದ ಗೋಡೆ ಒಡೆದಿತ್ತು. ಊರಿನ ಜನರೆಲ್ಲ ಅಳುವುದನ್ನು ಕಂಡರೆ ಎಂಥವರ ಕರುಳು ಕಿತ್ತು ಬರುವಂತಾಗಿತ್ತು.

ಪಾರ್ಥೀವ ಶರೀರವನ್ನು ಬಣಕಾರರ ಹಳೆಯ ಮನೆಯ ಕಟ್ಟೆಯ ಮೇಲಿರಿಸಿ ಎಲ್ಲರೂ ಪೂಜೆ ಸಲ್ಲಿಸಿದರು. ನಂತರದಲ್ಲಿ ಹುಬ್ಬಳ್ಳಿಯ ಮೂರು ಸಾವಿರ ಮಠದ ಗಂಗಾಧರ ರಾಜಯೋಗಿಂದ್ರ ಸ್ವಾಮಿಜಿ, ಡಾ. ತೋಂಟದಸಿದ್ಧಲಿಂಗ ಸ್ವಾಮಿಜಿ, ಬಣಕಾರರ ಆತ್ಮೀಯ ಸ್ನೇಹಿತರಾಗಿದ್ದ ಡಾ. ಪಾಟೀಲ ಪುಟ್ಟಪ್ಪ ಮತ್ತಿತರ ಗಣ್ಯರು ಆಗಮಿಸಿ ಅಂತೀಮ ನಮನ ಸಲ್ಲಿಸಿದರು.ಮೊಟೆಬೆನ್ನೂರ ಸೇರಿದಂತೆ ಸುತ್ತಮುತ್ತಲಿನ ಗ್ರಾಮದ ಶಾಲಾಗಳಿಗೆ ಅಂದು ರಜೆ ಘೋಷಿಸಲಾಗಿತ್ತು.

ನೂರಾರು ಸಂಖ್ಯೆಯ ಶಾಸಕರು, ಮಾಜಿ ಶಾಸಕರು, ಸಂಸದರು, ಮಾಜಿ ಸಂಸದರು, ಮಾಜಿಮಂತ್ರಿಗಳ, ಹಾಗೂ ಸಹಸ್ರಾರು ಸಾಹಿತ್ಯಾಸಕ್ತರ ಮತ್ತು ಗ್ರಾಮಸ್ತರ ಮಧ್ಯದಲ್ಲಿ ರಾಜ್ಯ ಸರ್ಕಾರದ ಪರವಾಗಿ ಗೌರವ ಸಲ್ಲಿಸಲಾಯಿತು.

ನಂತರದಲ್ಲಿ ಶ್ರದ್ಧಾಂಜಲಿ ಸಭೆ ಮನೆಯ ಎದುರುಗಡೆ ಜರುಗಿತು. ಸಭೆಯಲ್ಲಿ ಪಾಟೀಲ ಪುಟ್ಟಪ್ಪನವರು ಬಣಕಾರರ ಹೋರಾಟದ ಬದುಕಿನ ಕ್ಷಣಗಳನ್ನು ಎಳೆಯಳೆಯಾಗಿ ಬಿಚ್ಚಿಟ್ಟರು. ಬಣಕಾರರ ಸಾವಿನಿಂದ ಸಾಹಿತ್ಯ ಬಡವಾಗಿದೆ ಎಂದು ಹೇಳುತ್ತಿದ್ದಂತೆ ಪುಟ್ಟಪ್ಪನವರ ದು:ಖ ಉಕ್ಕಿ ಬಂದಿತ್ತು. ಪುಟ್ಟಪ್ಪನವರ ಮಾತು ಮಾತಿಗೆ ನೆರೆದಿದ್ದ ಜನಸ್ತೋಮ ಬಿಕ್ಕಿಬಿಕ್ಕಿ ಅಳುತ್ತಿದ್ದರು.

ಸಂಜೆ ವೇಳೆಗೆ ರಾಷ್ಟ್ರೀಯ ಹೆದ್ದಾರಿಗೆ ಹೊಂದಿಕೊಂಡ ಬಣಕಾರರ ಸ್ವಂತ ಜಮೀನನಲ್ಲಿ 50 ಸಾವಿರಕ್ಕೂ ಹೆಚ್ಚಾಗಿ ಸೇರಿದ್ದ ಅಭಿಮಾನಿಗಳ ಅಶ್ರುತರ್ಪಣದೊಂದಿಗೆ ಬಣಕಾರರ ಅಂತೀಮ ಸಂಸ್ಕಾರ ಸಕಲ ಸರ್ಕಾರಿ ಗೌರವಗಳೊಂದಿಗೆ ನಡೆಯಿತು.

ಈ ದೇಹದಿಂದ ದೂರವಾದೆ... ಏಕೆ ಆತ್ಮನೇ... ಈ ಸಾವು ನ್ಯಾಯವೇ... ಅಂದ ಹಾಗೆ ಚಿನ್ಮಯದ ಬದುಕಿನಲ್ಲಿ ಲೀನರಾದ ಬಣಕಾರರು ನಾಡಿಗಾಗಿ ಎಷ್ಟು

ದುಡಿದರು,ಎಷ್ಟು ಸಾಧಿಸಿದರು ಅದು ಕಡಿಮೆಯೇ ಎಂಬ ಸಂದೇಶ ಮಾತ್ರ ಬಿಟ್ಟು ಹೋಗಿದ್ದಾರೆ.

ಪ್ರತಿಯೊಬ್ಬ ಕನ್ನಡಿಗನ ಮನಸ್ಸಿನಲ್ಲಿ ಬಣಕಾರರು ಅಜರಾಮರಾಗಿ ಉಳಿದಿದ್ದಾರೆ. ಶಾಶ್ವತವಾದ ಬದುಕು ಇಲ್ಲ, ಆದರೆ ಶಾಶ್ವತವಾದ ಬದುಕನಲ್ಲಿ ಬದುಕಲು ಬರುತ್ತದೆ. ಅಂತೆಯೇ ಬಣಕಾರರು ಶಾಶ್ವತವಾದ ಬದುಕಿನಲ್ಲಿ ಮಿಂದವರಾಗಿದ್ದಾರೆ.

ಮಣ್ಣಿನಲ್ಲಿ ಹುಟ್ಟಿ, ಮಣ್ಣಿಗಾಗಿ ಬದುಕಿ, ಮಣ್ಣಿಗಾಗಿ ದುಡಿದು ಮಣ್ಣಿನಲ್ಲಿ ಮಡಿದ ಬಣಕಾರರು ಅಮರ, ಎಂದಿಗೂ ಅಮರ, ಬಣಕಾರರ ನಿಷ್ಠುರತೆ, ಹಿಡಿದ ಕಾರ್ಯದಲ್ಲಿನ ಛಲ ಮತ್ತು ಆದರ್ಶದ ಬದುಕು ಪ್ರತಿಯೊಬ್ಬ ಕನ್ನಡಿಗನಿಗೆ ಆದರ್ಶಪ್ರಾಯವಾಗಲಿಎಂಬುದೇ ನಮ್ಮೆಲ್ಲರ ಆಸೆ.

----\\\\\\----

# ಮೈಸೂರ ವಿಧಾನ ಸಭೆಯ ಅಧಿವೇಶನದಲ್ಲಿ ಸ್ಪೀಕರ್ ಚುನಾವಣೆಯ ಕುರಿತು 15ನೇ ಮಾರ್ಚ್ 1967

**ಶ್ರೀ ಟಿ.ಆರ್ ಶ್ಯಾಮಣ್ಣ (ಬೆಂಗಳೂರ ಕೋಟೆ):** ಮಾನ್ಯ ಸಭಾಪತಿಗಳೇ, ತಾವು ವಯೋವೃದ್ಧರು, ಜ್ಞಾನ ವೃದ್ಧರೂ, ನ್ಯಾಯವಾದಿಗಳು, ನ್ಯಾಯ ಪಕ್ಷ ಪಾತಿಗಳೂ ಆಗಿದ್ದೀರಿ. ತಮ್ಮಂತಹವರು ಸಭಾಪತಿಗಳಾಗಿರುವುದು ನಮಗೆ ಹೆಮ್ಮೆ. ನಾವು ತಮ್ಮನ್ನು ಆದರದಿಂದ ಸ್ವಾಗತಿಸುತ್ತೇವೆ. ನಮ್ಮ ಮಿತ್ರರನೇಕರು ತಮ್ಮ ಸಹಾಯ ಸಹಕಾರವನ್ನು ಅನೇಕ ವಿಷಯಗಳ ಬಗ್ಗೆ ಕೋರಿದ್ದಾರೆ. ನಾನು ಬೆಂಗಳೂರ ಪಟ್ಟಣದ ವಾಸಿ, ಬೆಂಗಳೂರ ಪಟ್ಟಣದ ಜನರು ಬಹಳ ಕಷ್ಟಪಡುತ್ತಿದ್ದಾರೆ. ಬೆಂಗಳೂರ ಪಟ್ಟಣದ ಜನರು ಹೆಚ್ಚು ತೆರಿಗೆಯನ್ನು ಕೊಟ್ಟರೂ ಸಹ ಅವರು ಯಾರಿಗೂ ಬೇಡದ ಕೂಸಾಗಿದ್ದಾರೆ. ಬಹಳ ಹಿಂದಿನಿಂದಲೂ ನಡೆದುಕೊಂಡು ಬಂದಿರುವ ಸ್ಥಳೀಯ ಸಂಸ್ಥೆಯಾದ ಕಾರ್ಪೋರೇಷನ್ ಇಂದು ಅನಾಥವಾಗಿದೆ. ಮತ್ತು ಎರಡು ವರ್ಷಗಳಿಂದಲೂ ನೀರಿನ ಸಮಸ್ಯೆಯ ಬಗ್ಗೆ ನಾವು ಹೋರಾಡುತ್ತಿದ್ದರೂ ಸಹ. ಜನರಿಗೆ ಅನುಕೂಲವಾಗಿಲ್ಲ. ಆದ್ದರಿಂದ ಈ ಸಭೆಯಲ್ಲಿ ಬೆಂಗಳೂರ ಸಮಸ್ಯೆಗಳು ಬಂದಾಗ ನಾವು ಮಾತನಾಡುವುದಕ್ಕೆ ಹೆಚ್ಚು ಕಾಲಾವಾಕಾಶವನ್ನು ಮತ್ತು ಸಹಕಾರವನ್ನು ಕೊಡಬೇಕೆಂದು ಕೇಳಿಕೊಂಡು ಈ ದಿವಸ ತಾವು ಅಧ್ಯಕ್ಷ ಸ್ಥಾನಕ್ಕೆ ಆಯ್ಕೆಯಾಗುವುದಕ್ಕೆ ನಮ್ಮೆಲ್ಲರ ಅಭಿನಂದನೆಗೆ ಪಾತ್ರರಾಗಿದ್ದೀರಿ ಎಂದು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

**ಶ್ರೀ ಎಸ್.ಆರ್.ಬೊಮ್ಮಾಯಿ (ಕುಂದಗೋಳ):** ಮಾನ್ಯ ಸಭಾಪತಿಗಳೇ, ಈ ಪಕ್ಷಾತೀತ ಪ್ರಜಾಪ್ರಭುತ್ವದಲ್ಲಿ ನಂಬಿಕೆಯುಳ್ಳ ನಾನು ಮತ್ತು ತಾವು ಎಲ್ಲ ಪಕ್ಷದವರಿಗೂ ಸರಿಯಾದ ಸಹಕಾರವನ್ನು ಕೊಡಬೇಕೆಂದು ನನ್ನ ವತಿಯಿಂದ ಲೋಕ ಸೇವಾ ಸಂಘದ ಪರವಾಗಿ ತಮ್ಮನ್ನು ಸ್ವಾಗತಿಸಿ ಅಭಿನಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

**ಶ್ರೀ ಹಂಜಿ ಶಿವಣ್ಣ (ತರೀಕೆರೆ):** ಮಾನ್ಯ ಅಧ್ಯಕ್ಷರೇ, ತಾವು ಈ ದಿವಸ ಚುನಾಯಿತರಾಗಿರುವುದು ನಮಗೆ ಹೆಮ್ಮೆಯ ವಿಚಾರವೆಂದು ತಮ್ಮ ಗಮನಕ್ಕೆ ತರಲು ಬಯಸುತ್ತೇನೆ. ತಾವು ವಿರೋಧ ಪಕ್ಷದವರಿಗೆ ಹೆಚ್ಚಿನ ನೆರವನ್ನು ಕೊಡಬೇಕು. ತಮ್ಮ ನೆರವು ಹೆಚ್ಚು ಇರಬೇಕೆಂದು ಮತ್ತೊಮ್ಮೆ ತಮ್ಮ ಗಮನಕ್ಕೆ ತಂದು ಸ್ವಾಗತಿಸುತ್ತಾ, ನನ್ನ ಮಾತನ್ನು ಮುಗಿಸುತ್ತೇನೆ.

**ಶ್ರೀ ಎಸ್.ಗೋಪಾಲಗೌಡ (ತೀರ್ಥಹಳ್ಳಿ):** ಮಾನ್ಯ ಅಧ್ಯಕ್ಷರೇ, ತಾವು ಪುನ; ಈ ಸದನದ ಅಧ್ಯಕ್ಷರಾಗಿ ಆಯ್ಕೆಯಾಗುತ್ತಾರೆ ಎನ್ನುವ ವಿಷಯ ನಮಗೆ ಗೊತ್ತಿತ್ತು.

ಆದರೂ ಆಡಳಿತ ಪಕ್ಷದವರು ಕೊನೆಯ ಪಕ್ಷ ವಿರೋಧ ಪಕ್ಷದವರೊಂದಿಗೆ ಸಮಾಲೋಚನೆ ಮಾಡಿಯಾರು ಮತ್ತು ಈ ಸ್ಪರ್ಧೆಯನ್ನು ತಪ್ಪಿಸಬೇಕು ಎನ್ನುವ ವಿಷಯವೂ ಇತ್ತು. ಆದರೆ ಅದು ಯಶಸ್ವಿಯಾಗಲಿಲ್ಲ. ನಾವು ಅದರಿಂದ ಇಲ್ಲಿ ವಿರೋಧಿಸಬೇಕಾಯಿತು. ಮತ್ತು ನಮ್ಮ ಕಡೆಯಿಂದ ಒಬ್ಬರನ್ನು ಸ್ಪರ್ಧೆಗೆ ನಿಲ್ಲಿಸಬೇಕಾಯಿತು,ಅದರಂತೆ ವಿರೋಧ ಪಕ್ಷದವರು ವೋಟನ್ನು ಮಾಡಬೇಕಾಯಿತು. ತಾವು ಈ ಸದನದ ಅಧ್ಯಕ್ಷರಾಗಿರುವುದಕ್ಕೆ ಎಲ್ಲ ಅರ್ಹತೆಗಳನ್ನು ಪಡೆದಿದ್ದೀರಿ ಎನ್ನುವುದರ ಬಗ್ಗೆ ಯಾವ ಸಂದೇಹವೂ ಉಳಿದಿಲ್ಲ. ನಮ್ಮಲ್ಲಿ ಈ ಸಭೆಗೆ ಹೊಸದಾಗಿ ಬಂದಿರುವ ಕೆಲವು ಸದಸ್ಯರು ಸಹಜವಾಗಿ ವ್ಯಕ್ತಪಡಿಸತಕ್ಕ ಒಂದು ಭಾವನೆಯೇನು ಎಂದರೆ, ಆಳುವ ಪಕ್ಷಕ್ಕೆ ಸೇರಿರತಕ್ಕವರನ್ನೇ ಅವರು ಸದನದ ಅಧ್ಯಕ್ಷರನ್ನಾಗಿ ಮಾಡುವುದರಿಂದ ವಿರೋಧ ಪಕ್ಷಕ್ಕೆ ಎಲ್ಲಿಯಾದರೂ ಪಕ್ಷಪಾತವಾಗುತ್ತೋ ಏನೋ ಎನ್ನುವ ಸಂದೇಹ ಉಂಟಾಗಿದೆ ಎಂದು ಅವರು ವ್ಯಕ್ತಪಡಿಸುತ್ತಾರೆ. ಅಲ್ಲದೆ ವಿರೋಧ ಪಕ್ಷದ ಎಲ್ಲ ಸದಸ್ಯರು ಈ ಸಭೆಯ ಎಲ್ಲ ಗೌರವ ಹಕ್ಕು ಬಾಧ್ಯತೆಗಳನ್ನು ಎತ್ತಿ ಹಿಡಿಯುವುದರಲ್ಲಿ ತಮ್ಮ ಎಲ್ಲ ಸಹಕಾರಗಳು ದೊರೆಯುತ್ತವೆ. ಎನ್ನುವುದರ ಬಗ್ಗೆ ಈ ಸಂದರ್ಭದಲ್ಲಿ, ತಮಗೆ ಗೊತ್ತಿರುವ ಹಾಗೆ ಅಧ್ಯಕ್ಷರಿಂದ ವಿರೋಧ ಪಕ್ಷದವರಿಗೆ ಎಷ್ಟು ಸೌಲಭ್ಯಗಳು ದೊರೆಯಬೇಕು ಎನ್ನುವುದರ ಬಗ್ಗೆ ತಮ್ಮ ಆಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಅಲ್ಲದೆ ಈ ನಾಲ್ಕನೇ ಚುನಾವಣೆಯ ನಂತರ ಈಗಾಗಲೇ ರಚನೆಯಾಗಿರತಕ್ಕ ವಿರೋದ ಪಕ್ಷದಲ್ಲಿ ಒಟ್ಟಿನ ಸಂಖ್ಯೆ ಸ್ವಲ್ಪ ಹೆಚ್ಚಾಗಿದೆ ಎನ್ನುವುದನ್ನೂ ತಾವು ತಮ್ಮ ಗಮನಕ್ಕೆ ತೆಗೆದುಕೊಳ್ಳುತ್ತೀರಿ ಎಂದು ನಾನು ಭಾವಿಸಿರುತ್ತೇನೆ.ಮತ್ತು ನಾನು ಈ ಸಂದರ್ಭದಲ್ಲಿ ವಿನಂತಿ ಮಾಡುವುದು, ಇಷ್ಟು ವರ್ಷಗಳಾದರೂ ಈ ಸಭೆಯ ನಡುವಳಿಕೆಗಳು ಹಾಗೂ ನಿಭಂದನೆಗಳು ಕನ್ನಡದಲ್ಲಿ ಅಚ್ಚು ಹಾಕಿಸುವ ಒಂದು ಸಾಂಪ್ರದಾಯವನ್ನು ತಮ್ಮ ಅಧಿಕಾರವಧಿಯಲ್ಲಿ ಏರ್ಪಾಡು ಮಾಡಲು ಪ್ರಾರಂಭ ಮಾಡಬೇಕು. ಎಂದು ನಾನು ತಮ್ಮಲ್ಲಿ ಪ್ರಾರ್ಥಿಸಿಕೊಳ್ಳುತ್ತೇನೆ. ಮತ್ತು ಈಗಿರುವ ನಿಭಂದನೆಗಳನ್ನು ತಿದ್ದುಪಡಿಮಾಡುವುದು ಒಳ್ಳೆಯದು, ಅಲ್ಲದೆ ಇದರಲ್ಲಿರುವ ಒಂದು ವಿಧಿಯಲ್ಲಿ ಅಡ್‌ಜರ್ನ್‌ಮೆಂಟ್ ಮೋಷನ್ ಅಥವಾ ಒಂದು ನಿಲುವಳಿ ಸೂಚನೆ ಎಂದು ಹಿಂದೆ ಬಹಳ ಕಾಲದಿಂದ ಏನೋ ಇತ್ತು. ಅಂಥಹ ಒಂದು ವಿಧಿಯನ್ನು ಇಲ್ಲಿ ತಾವು ಪುನ: ವಿಚಾರಮಾಡಬೇಕಾಗಿದೆ. ಹಾಗೂ ಪ್ರಶ್ನೆಗಳು ಮತ್ತು ಷಾರ್ಟ್‌ನೋಟಿಸ್ ಪ್ರಶ್ನೆಗಳು ಇಲ್ಲಿ ಬಂದಾಗ ಅದಕ್ಕೆ ಸರ್ಕಾರದವರು ಸರಿಯಾಗಿ ಉತ್ತರ ಕೊಡುವುದಕ್ಕೆ ಆಗುವುದಿಲ್ಲ ಎನ್ನುವಂತಹ ಸಂದರ್ಭಗಳೂ ಇದರಲ್ಲಿವೆ. ಇದಲ್ಲದೆ ಇನ್ನೂ ಅನೇಕ ವಿಚಾರಗಳೂ ಇರುವುದರಿಂದ ಇದನ್ನು

ಸರಿಪಡಿಸುವ ಅಗತ್ಯ ಈ ಮಾನ್ಯ ಸಭೆಗೆ ಇದೆ, ಇದನ್ನೆಲ್ಲ ತಾವು ಗಮನಕ್ಕೆ ತೆಗೆದುಕೊಳ್ಳಬೇಕೆಂದು ತಮಗೆ ಸಲಹೆ ಮಾಡುತ್ತಿದ್ದೇನೆ. ಒಟ್ಟಿನಲ್ಲಿ ಈ ಸದನದ ಅಧ್ಯಕ್ಷರಾಗಿ ತಮ್ಮನ್ನು ಚುನಾಯಿಸಿರುವುದಕ್ಕಾಗಿ ನನ್ನ ಪರವಾಗಿ ಹಾಗೂ ವಿರೋಧ ಪಕ್ಷದ ಪರವಾಗಿ ತಮ್ಮನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

**ಶ್ರೀ ಸಿ.ಕೆ. ರಾಜಯ್ಯ ಶೆಟ್ಟಿ (ಚಿಕ್ಕನಾಯಕನಹಳ್ಳಿ):** ಸ್ವಾಮಿ, ತಾವು ಈ ಸಭೆಯ ಆಧ್ಯಕ್ಷರಾಗಿ ಚುನಾಯಿತರಾಗಿ ಹಿಂದೆ ಬಂದಾಗಲೂ ಕೂಡ ನಾನು ವಿರೋಧ ಪಕ್ಷದ ಪರವಾಗಿ ತಮ್ಮನ್ನು ಅಭಿನಂದಿಸಿದ್ದೆ. ಈಗಲೂ ಸಹ ತಾವು ಇಲ್ಲಿ ಪುನ: ಅಧ್ಯಕ್ಷರಾಗಿ ಆಯ್ಕೆಯಾಗಿರುವುದಕ್ಕಾಗಿ ತಮ್ಮನ್ನು ಅಭಿನಂದಿಸುತ್ತೇನೆ. ಮತ್ತು ತಾವು ಯಾವ ರೀತಿ ಕೆಲಸಗಳನ್ನು ಮಾಡಿದ್ದೀರಿ ಎನ್ನುವುದನ್ನು ಎಲ್ಲರೂ ಮನಗಂಡಿದ್ದಾರೆ. ತಮ್ಮ ಮನಸ್ಸಿನ ಭಾವನೆಯು ಯಾವಾಗಲೂ ಒಂದು ತಕ್ಕಡಿಯಂತೆ ಸರಿಯಾಗಿದ್ದ ಪಕ್ಷದಲ್ಲಿ ನಮ್ಮೆಲ್ಲರ ಆಶೆ ಆಕಾಂಕ್ಷೆಗಳು ಈಡೇರುತ್ತವೆ ಎಂದು ನಾನಾದರೂ ಭಾವಿಸಿರುತ್ತೇನೆ. ತಾವು ಒಂದು ಗುರುತರವಾದ ಕಿರೀಟವನ್ನು ಹೊತ್ತಿರುವಾಗ ಯಾವ ರೀತಿ ಇರಬೇಕು ಎನ್ನುವುದಕ್ಕೆ ಬಸವಣ್ಣನವರು ಒಂದು ವಚನದಲ್ಲಿ ಹೀಗೆ ಹೇಳಿದ್ದಾರೆ.

"ಎನ್ನ ಹೊಗಳಿ ಹೊಗಳಿ ಹೊನ್ನ ಶೂಲಕ್ಕೇರಿಸಿದರಯ್ಯಾ" ಈ ರೀತಿಯಾಗಿ ಯಾವ ಪಕ್ಷಪಾತವೂ ಇಲ್ಲದಂತೆ ಕೆಲಸ ಮಾಡಿದರೆ ಎಲ್ಲಾ ಕೆಲಸಗಳು ಒಂದು ತಕ್ಕಡಿಯಂತೆ ಸರಿಯಾಗಿ ಕೆಲಸ ಮಾಡಲು ಸಹಾಯಕವಾಗುತ್ತದೆ. ಮತ್ತು ಯಾವ ಪಕ್ಷದ ಅಭಿಮಾನವೂ ಇಲ್ಲದಂತೆ ಸರ್ವಪಕ್ಷಗಳ ಸಮನ್ವಯವನ್ನು ಮಾಡುತ್ತೀರೆಂದು ಆಶಿಸಿ ತಮ್ಮನ್ನು ಅಭಿನಂದಿಸಿ ನನ್ನ ಎರಡು ಮಾತುಗಳನ್ನು ಮುಗಿಸುತ್ತೇನೆ.

**ಶ್ರೀ ಎಂ.ಜಿ.ಬಣಕಾರ್ (ಬ್ಯಾಡಗಿ):** ಮಾನ್ಯ ಅಧ್ಯಕ್ಷರೇ, ತಮ್ಮನ್ನು ಈ ಸಭೆಯ ಅಧ್ಯಕ್ಷರಾಗಿ ಆರಿಸಿದುದಕ್ಕಾಗಿ ತಮ್ಮನ್ನು ಅಭಿನಂದಿಸಿ ಎರಡು ಮಾತುಗಳನ್ನು ಹೇಳುವುದು ಅಗತ್ಯ ಎಂದು ನಾನು ಭಾವಿಸುತ್ತೇನೆ. ಇಂದಿನ ಸಭೆಯಲ್ಲಿ ಸ್ಪೀಕರ್‌ರವರ ಚುನಾವಣೆಯು ಅವಿರೋಧವಾಗಿ ನಡೆದಿದ್ದರೆ ಇನ್ನೂ ಚನ್ನಾಗಿ ಹೆಚ್ಚು ಗೌರವ ಈ ಸಭೆಗೆ ದೊರೆಯುತ್ತಿತ್ತು. ಅಲ್ಲದೇ ತಾವೇ ಈ ಸಭೆಯ ಸ್ಪೀಕರ್ ಆಗಬೇಕೆಂದೂ ಕೂಡ ಇತ್ತು. ಆದರೆ ಆಡಳಿತ ಪಕ್ಷದವರು ತಳೆದ ಅಸಂಗತ ಧೋರಣೆಯಿಂದಾಗಿ ಇಲ್ಲಿ ವಿರೋಧ ಮಾಡಬೇಕೆಂದು ವಿರೋಧ ಪಕ್ಷದವರು ತೀರ್ಮಾನಿಸಿದ್ದರು. ಆಡಳಿತ ಪಕ್ಷದ ವತಿಯಿಂದ ವಿರೋಧ ಪಕ್ಷಗಳವರ ಕಡೆಗೆ ಯಾವ ಒಂದು ರೀತಿಯ ಸಮಾಲೋಚನೆಗಳೂ ನಡೆಯಲಿಲ್ಲ. ಇದರಿಂದಾಗಿ ವಿರೋಧ ಪಕ್ಷಗಳವರು ಚುನಾವಣೆಯ ಕಣಕ್ಕೆ ಅನಿವಾರ್ಯವಾಗಿ ಇಳಿಯಬೇಕಾಗಿ ಬಂತು. ನಿಷ್ಪಕ್ಷಪಾತವಾದ

ದೃಷ್ಠಿಯ ತಾವು ವಿರೋಧ ಪಕ್ಷದವರನ್ನು ಸುಖಾಂತದ ದೃಷ್ಠಿಯಿಂದ ಕಾಣುವಂತೆ ಆಡಳಿತ ಪಕ್ಷದವರಿಗೆ ಬಹಿರಂಗವಾಗಿ ಆಗದಿದ್ದರೂ ಅಂತರಂಗದಲ್ಲಿ ನಿರ್ದೇಶನ ನೀಡಬೇಕಾಗಿ ಪ್ರಾರ್ಥನೆ. ಅದರಂತೆ ನಾನು ತಮ್ಮನ್ನು ಅಭಿನಂದಿಸಿ ಕೇಳಿಕೊಳ್ಳುವುದು ನಮ್ಮೆಲ್ಲರನ್ನು ಸಮಾನ ದೃಷ್ಠಿಯಿಂದ ನೋಡಿಕೊಳ್ಳಬೇಕಾದುದು ತಮ್ಮ ಆದ್ಯ ಕರ್ತ್ಯವ್ಯ ಎಂದು ಹೇಳಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

**ಶ್ರೀ ಎನ್. ಲೋಕಯ್ಯ ನಾಯಕ್ (ವಿರಾಜಪೇಟೆ):** ಮಾನ್ಯ ಅಧ್ಯಕ್ಷರೇ, ಈ ದಿನ ಈ ಸಭೆಯ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿದುದಕ್ಕಾಗಿ ತಮ್ಮನ್ನು ಅಭಿನಂದಿಸುವುದರ ಮೂಲಕ ಈಗಾಗಲೇ ನಮ್ಮ ವಿರೋಧ ಪಕ್ಷಗಳವರು ಅನೇಕರು ತಮ್ಮ ಸೇವೆಯ ಬಗ್ಗೆ ಹೇಳಿ ಕೆಲವು ಸಲಹೆಗಳನ್ನು ಕೊಟ್ಟಿದ್ದಾರೆ. ಆದರೆ ಆಡಳಿತ ಪಕ್ಷದವರು ವಿರೋಧ ಪಕ್ಷದವರ ಸಲಹೆಗಳನ್ನು ಕೇಳದೆ ಇಂತಹ ಒಂದು ಚುನಾವಣೆಯನ್ನು ನಡೆಸಬೇಕಾಗಿಬಂತು. ಆಡಳಿತ ಪಕ್ಷದವರು ಸಮಾಲೋಚನೆ ಮಾಡಿದ್ದರೆ, ಇದಕ್ಕೆ ಅವಕಾಶವಿಲ್ಲದೆ ಇರುತ್ತಿತ್ತು. ಇನ್ನು ಮುಂದಾದರೂ ನಮ್ಮ ಮುಖ್ಯ ಮಂತ್ರಿಗಳು ಯಾವುದಾದರೂ ವಿಚಾರಗಳು ಬಂದಾಗ ವಿರೋಧ ಪಕ್ಷದವರೊಡನೆ ಸಮಾಲೋಚನೆ ಮಾಡಿ ಒಂದು ನಿರ್ಣಯ ಮಾಡುತ್ತಾರೆಂದು ನಾನು ನಂಬುತ್ತೇನೆ.. ಒಂದು ಅವಕಾಶವಿಲ್ಲದೆ ಇದ್ದರೂ ತಾವು ನ್ಯಾಯದಿಂದ ನಿಷ್ಠೆಯಿಂದ ನಡೆಯುವವರೆಗೆ ತಮ್ಮ ಸಹಾಯ ಸಹಕಾರವನ್ನು ಕೊಡುತ್ತೀರೆಂದು ಭಾವಿಸುತ್ತೇನೆ. ಮತ್ತು ಆಡಳಿತ ಪಕ್ಷದವರೊಡನೆ ಸಹಕರಿಸಿ ನಮ್ಮ ಸೂಚನೆಗಳಿಗೆ ಸರಿಯಾದ ನ್ಯಾಯ ಸಿಗುವಂತೆ ತಮ್ಮ ಅಧಿಕಾರವನ್ನು ಚಲಾಯಿಸುವ ಒಂದು ಮೇಲ್ಪಂಕ್ತಿಯನ್ನು ತಾವು ಹಾಕಬೇಕೆಂದು ಹೇಳಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

**ಶ್ರೀ ಮಹದೇವ ಗದಿಗೆಪ್ಪ ಬಣಕಾರ (ಬ್ಯಾಡಗಿ):** ಮಾನ್ಯ ಸಭಾಪತಿಗಳೇ, ಈ ರಾಜ್ಯಪಾಲರ ವಂದನಾ ನಿರ್ಣಯದ ವಿಷಯದಲ್ಲಿ ನಿನ್ನೆಯ ದಿವಸ ಕಾಂಗ್ರೆಸ್ ಸದಸ್ಯರೊಬ್ಬರು ತಮಗೆ ಅನ್ವಯಿಸುವಂತಹ ಹಾಗೂ ಕವಿ ಹೃದಯಕ್ಕೆ ಅಪಚಾರವೆಸಗುವಂತಹ ಒಂದು ಪದ್ಯವನ್ನು ಹೇಳಿದರು. ಅದೇ ಪ್ರಕಾರ ನಾನು ಈ ದಿವಸ ನೇರವಾಗಿ ಆಡಳಿತ ಪಕ್ಷಕ್ಕೆ ಅನ್ವಯಿಸುವಂತಹ ಒಂದು ಪದ್ಯವನ್ನು ರಚಸಿದ್ದೇನೆ. ಅದನ್ನು ಈ ಸಭೆಯಲ್ಲಿ ಓದಲು ಇಚ್ಛೆ ಪಡುತ್ತೇನೆ. ಇದನ್ನು ಸ್ವತ: ನಾನೇ ರಚಿಸಿದ್ದೇನೆ.

ಯಾರು ಬಂದರು ಏನು ತಂದರು
ದಿನ ದಲಿತರ ಕೊಂದರು
ಬಡವ ಬಲ್ಲಿದಗೆಂದು ತೋರಿಸಿ

ತಾವೇ ಎಲ್ಲವ ತಿಂದರು
ಸ್ವರ್ಗವನ್ನು ಇಳಿಗಿಳಿಸುವಂತಹ
ಸೋಗಿನಲಿ 'ಜನರ' ಸುಲಿದರು
ಪರರ ಹಂಗನು ಹರಿದೆವೆನ್ನುತ
ಹಮ್ಮು ಬಿಮ್ಮಗೆ ನಿಂತರು!
ನಾಡ ತೃಪ್ತಿಗೆ ದುಡಿವ ನೆಪದಲಿ
ಎಲ್ಲರೊಳು ಮುಂದಾದರು
ಸ್ವಾರ್ಥಸಿದ್ಧಿಯ ದುರುಳ ಬುದ್ಧಿಯ
ಕಾರ್ಯದಲಿ ಒಂದಾದರು.
ಆಶೆ ಆಮಿಷ ಹುಸಿ ಅಸೂಯಕೆ
ಆತ್ಮವನೆ ಬಲಿಕೊಟ್ಟರು
ತಲೆ ತಲಾಂತರ ಜನತೆ ನರಳುವ –
ಹಾಗೆ ಬಲಿಯನು ಕೊಟ್ಟರು.
ಭಾಷಣದ ಬಲೆ ಬೀಸಿ ಮೋಸದ
ಖೆಡ್ಡಕ್ಕೆಲ್ಲದ ತಳ್ಳುತ
ಕ್ಷಾಮವಿದ್ದರು ಕ್ಷೇಮವೆನ್ನುತ
ವಾಮ ಮಾರ್ಗದಿ ನಡೆಯುತ
ಇಂದು ನಡೆದಿದೆ ನಾದ ನಾಯಕರಿಂದ
ಮೋಸದ ನಾಟಕ
ಎಂದಿಗೋ ಇದು ಕಳೆವುದೆಂದಿಗೋ
ಇದು ಪಾಪದ ಸೂತಕ

**ಶ್ರೀ ಪಿ. ಅಗ್ನಿಹೋತ್ರಿ (ಧಾರವಾಡ):** ಕೊನೆಯಲ್ಲಿ ಹರಹರ ಮಹಾದೇವ ಬಣಕಾರ ಎಂದು ಇರಬೇಕಲ್ಲವೇ?

**ಶ್ರೀ ಮಹದೇವ ಗದಿಗೆಪ್ಪ ಬಣಕಾರ:** ಕೆಳಗಡೆ ಮಹದೇವ ಬಣಕಾರ ಎಂಬುದಷ್ಟೇ ಇದೆ "ಹರ ಹರಾ" ಇಲ್ಲಾ

ಇದು ರಾಜ್ಯದ ಯಥಾವತ್ತಾದ ಸ್ಥಿತಿ. ನಾನು ಸಭೆಯ ಹೆಚ್ಚು ಕಾಲವನ್ನು ಕಳೆಯದೆ ಕೆಲವು ಮಾತುಗಳನ್ನು ಹೇಳುತ್ತೇನೆ. ಮಹಾರಾಷ್ಟ್ರದ ರಾಜ್ಯಪಾಲರು ಗಡಿ ವಿಷಯವನ್ನೇ ಪ್ರಾಮುಖ್ಯವಾಗಿ ತಮ್ಮ ಭಾಷಣದಲ್ಲಿ ಹೇಳಿದ್ದಾರೆ. ನಮ್ಮ ರಾಜ್ಯಪಾಲರ ಭಾಷಣದಲ್ಲಿ ಆ ವಿಷಯದ ಬಗ್ಗೆ ಏನೂ ಹೇಳಿಲ್ಲ. ರಾಜ್ಯದ ಗಡಿ

ವಿಷಯದ ಬಗ್ಗೆ 'ಕರ್ನಾಟಕ' ಎಂಬ ಹೆಸರಿನ ಬಗ್ಗೆ ಶಾಸನ ಸಭೆಯಲ್ಲಿ ಆಗಿಂದಾಗ್ಗೆ ಪ್ರಸ್ತಾಪವಾಗಿದ್ದರೂ ಕೂಡ, ನಮ್ಮ ರಾಜ್ಯ ಸರ್ಕಾರ ಯಾವುದೇ ರೀತಿಯ ಪರಿಹಾರವನ್ನೂ ಇಲ್ಲಿ ಸೂಚಿಸದೇ ಇರುವುದು ಬಹಳ ವಿಷಾದನೀಯ. ಮಾನ್ಯ ಮುಖ್ಯ ಮಂತ್ರಿಗಳು ಉತ್ತರ ಕರ್ನಾಟಕ ಶಾಸಕರ ಬೆಂಬಲವನ್ನು ಪಡೆದು ಬಂದಿರುವುದಲ್ಲದೆ ಕರ್ನಾಟಕ ರಾಜ್ಯ ರಚನೆ ಮಾಡುತ್ತೇವೆ ಎನ್ನುವ ಆಶ್ವಾಸನೆಯನ್ನು ಕೊಟ್ಟು ಬಂದಿದ್ದಾರೆ. ಒಂದು ಮಾತನ್ನು ಅವರಲ್ಲಿ ಅರಿಕೆ ಮಾಡಿಕೊಳ್ಳಬೇಕಾಗಿದೆ. ಹಳ್ಳಿಯ ಕಡೆ ಒಂದು ಗಾದೆ ಮಾತು ಹೇಳುತ್ತಾರೆ. 'ನಿಮ್ಮ ಅಪ್ಪನನ್ನು ತೋರಿಸು ,ಇಲ್ಲವೆ ಶ್ರಾದ್ಧ ಮಾಡು' ಎಂದು, ನಿಮ್ಮಪ್ಪ ಜೀವಂತವಾಗಿದ್ದರೆ ಕರೆದುಕೊಂಡು ಬಂದು ತೋರಿಸು, ಇಲ್ಲ ಎಂದು ಒಪ್ಪಿಕೊಳ್ಳುವುದಾದರೆ ಶ್ರಾದ್ಧ ಮಾಡು ಎಂದು, ಕರ್ನಾಟಕ ಎಂಬ ಹೆಸರನ್ನು ನಿಜವಾಗಿ ಇಡಬೇಕೆನ್ನುವ ಉದ್ದೇಶವಿದ್ದರೆ ಅದನ್ನು ಯಾರು ಒಪ್ಪಲಿ, ಒಪ್ಪದೆ ಇರಲಿ ಅದರ ಬಗ್ಗೆ ಒಂದು ದಿಟ್ಟವಾದ ಹೆಜ್ಜೆಯನ್ನು ತೆಗೆದುಕೊಳ್ಳಬೇಕು. ಕೆಲವು ಮೈಸೂರು ವಾದಿಗಳ ಆ ಪ್ರೀತಿಗೆ ಪಾತ್ರರಾಗುತ್ತೇವೆ ಎನ್ನುವ ದೃಷ್ಟಿಯಿಂದ ಆ ವಿಷಯವನ್ನು ಹಾಗೆಯೇ ತಳ್ಳಿಕೊಂಡು ಗೊಂದಲಮಯ ವಾತಾವರಣವನ್ನುಂಟುಮಾಡಿ ರಾಷ್ಟ್ರಕ್ಕೆ ಹಾಗೂ ಜನತೆಗೆ ದ್ರೋಹ ಮಾಡತಕ್ಕ ಕಾರ್ಯವನ್ನು ಮಾಡಿದ್ದೀರಿ ಎನ್ನುವುದನ್ನು ಮಾನ್ಯ ಮುಖ್ಯ ಮಂತ್ರಿಯವರಲ್ಲಿ ಅರಿಕೆ ಮಾಡಿಕೊಳ್ಳುತ್ತೇನೆ. ಆ ಬಗ್ಗೆ ಏನು ಪರಿಹಾರವನ್ನೂ ಇದರಲ್ಲಿ ಸೂಚಿಸಿಲ್ಲ.

ಗಡಿ ವಿಷಯದಲ್ಲಿ ಅಖಿಲ ಭಾರತ ಕಾಂಗ್ರೆಸ್ ವರ್ಕಿಂಗ್ ಕಮೀಟಿಯಲ್ಲಿ ಒಪ್ಪಿಕೊಂಡು ಬಂದು, ವಾದ ಗ್ರಸ್ತವಲ್ಲದ ವಿಷಯನ್ನು ವಾದಗ್ರಸ್ತವಾಗಿನ್ನಾಗಿ ಮಾಡಿ ಅಲ್ಲಿ ಯಾವುದನ್ನೂ ಹೇಳದೆ ಅವರು ಬೆಂಗಳೂರಿಗೆ ಬಂದ ಮೇಲೆ ಗಡಿಬಡಿಯಲ್ಲಿ ರುಜು ಎಂದು ಪ್ರಾಯ್ಮರಿ ಸ್ಕೂಲ್ ಹುಡುಗರು ಹೇಳುವ ಹಾಗೆ ಒಂದು ಉತ್ತರವನ್ನು ಹೇಳಿದರು. ಇದಕ್ಕೆ ನಾಚಿಕೆ ಪಡಬೇಕಾಗಿದೆ. ಕನ್ನಡಿಗರು ಕನ್ನಡ ನಾಡಿನ ಮೂಲಭೂತವಾದ ಸಮಸ್ಯೆಗೆ ಪರಿಹಾರವನ್ನು ಇದರಲ್ಲಿ ಸೂಚಿಸಿಲ್ಲ. ಈಗಾಗಲೇ ಮಹಾಜನ ಕಮೀಟಿಯವರು ಬೆಳಗಾಂವನಲ್ಲಿ ತಮ್ಮ ಕಾರ್ಯವನ್ನು ನಡೆಸಿದ್ದಾರೆ. ಮುಂದಿನ ತಿಂಗಳು 21 ನೇ ತಾರೀಖು ಬೆಂಗಳೂರಿಗೆ ಬರುವವರಿದ್ದಾರೆ. ಆಸಂದರ್ಭದಲ್ಲಿ ಸನ್ನಿವೇಶಕ್ಕೆ ತಕ್ಕಂತೆ ನುಣುಚಿಕೊಳ್ಳುವಂಥ ರೀತಿಯಲ್ಲಿ ವರ್ತಿಸದೇ ಗಡಿ ಬಗ್ಗೆ ರಾಜ್ಯದ ನಿರ್ಧಿಷ್ಟವಾದ ನಿಲುವು ಏನು ಎನ್ನುವುದನ್ನು ಈ ಸಭೆಯ ಮುಂದಿಟ್ಟು ನಮಗೆ ಮನವರಿಕೆ ಮಾಡಿಕೊಡಬೇಕು. ಈ ಸಂದರ್ಭದಲ್ಲಿ ಬಸವಣ್ಣನವರ ಒಂದು ವಚನವನ್ನು ಹೇಳುತ್ತೇನೆ. 'ನುಡಿದಂತೆ ನಡೆಯದಿರ್ದೊಡೆ ಅವನ ಕೆಡಹಿ ಮೂಗ ಕೊಯ್ಯದೆ ಮಾಣ್ಬನೆ ಕೂಡಲಸಂಗಮದೇವ' ಯಾವುದನ್ನು ಜನತೆಗೆ ಮಾತು ಕೊಟ್ಟಿದ್ದಾರೆ, ಯಾವ ಆಶ್ವಾಸನೆಯ ಮೇರೆಗೆ ಅಧಿಕಾರಕ್ಕೆ ಬಂದಿದ್ದಾರೆ ಆ

ಆಶ್ವಾಸನೆಯನ್ನು ಅವರು ಪಾಲಿಸದೇ ಹೋದರೆ ಜನತೆಯ ಅಪ್ರೀತಿಗೆ ಪಾತ್ರರಾಗುತ್ತಾರೆ ಎನ್ನುವ ಮಾತನ್ನು ಅವರ ಮುಂದೆ ಇಡಬಯಸುತ್ತೇನೆ.

ಇನ್ನೊಂದು ಮೂಲವಾದ ವಿಷಯ, ಬಾಗಲಕೋಟೆ ಸಿಮೆಂಟ್ ಕಂಪನಿಯ ಮ್ಯಾನೇಜಿಂಗ್ ಡೈರೆಕ್ಟರ್‌ನ ಮೇಲೆ 29 ಕೇಸುಗಳನ್ನು ಹಾಕಿದ್ದರು. ಆ ಕೇಸುಗಳು ಕಮೀಟಿ ಆಗಿದ್ದರೂ ಕೂಡ ಯಾವ ಕಾರಣಕ್ಕಾಗಿ ಹಣ ದುರುಪಯೋಗವಾಗಿದೆ ಎನ್ನುವುದು ಗೊತ್ತಿದ್ದರೂ ಕೂಡ, ಆನ್ ಕಂಡಿಷನಲ್ ಆಗಿ ಕೇಸುಗಳನ್ನು ವಾಪಸು ಪಡೆದುಕೊಂಡರು, ಆ ಕೆಲಸವನ್ನು ಏಕೆ ಮಾಡಿದರು? ಎನ್ನುವುದು ನಮಗೆ ಅರ್ಥವಾಗುತ್ತಿಲ್ಲ. ಪ್ರಾಯಶ: ಕಾಂಗ್ರೆಸ್ಸಿನ ಚುನಾವಣೆಗಳಿಗೋಸ್ಕರ ಅವರಿಂದ ತೆಗೆದುಕೊಂಡಿದ್ದಾರೆ ಎಂದು ನಾನು ಕೇಳಿದ್ದೇನೆ. ಇದರಲ್ಲಿ ಎಷ್ಟರ ಮಟ್ಟಿಗೆ ಸತ್ಯವಿದೆಯೋ ಅದಕ್ಕೆ ಅವರು ಉತ್ತರ ಕೊಡಬೇಕು.

**ಅಧ್ಯಕ್ಷರು:** ಗೊತ್ತಿಲ್ಲದೆ ಇದ್ದ ವಿಷಯಗಳಲ್ಲಿ ಅಪಾದನೆಗಳನ್ನು ಮಾಡಬಾರದು. ಮಾನ್ಯ ಸದಸ್ಯರು ಹೇಳುವುದನ್ನು ಸಮರ್ಥನೆ ಮಾಡುವುದಾಗಿದ್ದರೆ ಮಾತ್ರ ಹೇಳಬಹುದು. ಯಾರೋ ಹೇಳಿದರು ಎಂದು ಅದನ್ನೆಲ್ಲ ಸಭೆಯಲ್ಲಿ ಹೇಳಬಾರದು.

**ಶ್ರೀ ಮಹದೇವ ಗದಿಗೆಪ್ಪ ಬಣಕಾರ್:** ಯಾವ ಕಾರಣಕ್ಕಾಗಿ ಕೇಸುಗಳನ್ನು ಹಾಕಿದರು ಕಮೀಟಿ ಆಗಿದ್ದರೂ ಕೂಡ ಯಾವ ಕಾರಣಕ್ಕಾಗಿ ವಾಪಸ್ಸು ತೆಗೆದುಕೊಂಡರು ಎನ್ನುವುದನ್ನು ಜನತೆಗೆ ಸ್ಪಷ್ಟಪಡಿಸಬೇಕು.

ಲೆವಿ ವಸೂಲಿ ಸಂಬಂಧದಲ್ಲಿ 46–50 ರೂಪಾಯಿಗಳ ಪ್ರಕಾರ ಬೆಲೆ ನಿಗದಿ ಮಾಡಿ ಬೆಲೆ ವಸೂಲಿ ಮಾಡುತ್ತಿದ್ದಾರೆ. ಆದರೆ ಅದೇ ಜೋಳದ ಬೆಲೆ ಪೇಟೆಯಲ್ಲಿ 70 ರೂಪಾಯಿವರೆಗೂ ಇದೆ. ಕಳೆದ ಸಾರಿ 46 ರೂಪಾಯಿ ಪ್ರಕಾರ ತೆಗೆದುಕೊಂಡ ಜೋಳವನ್ನು 70–79 ರೂಪಾಯಿಗಳವರೆಗೂ ಸರ್ಕಾರ ಮಾರಾಟ ಮಾಡಿ ಕ್ವಿಂಟಾಲ್‌ಗೆ 25 ರೂಪಾಯಿ ವೆಚ್ಚ ಎಂದು ಹೆಸರಿಟ್ಟು ಲಾಭ ಪಡೆಯತಕ್ಕ ಒಂದು ಉದ್ಯಮವನ್ನು ಲೆವಿಯಿಂದ ಪರಿವರ್ತನೆ ಮಾಡಿಕೊಂಡಿದೆ. ಬೆಳೆದವರು, ಈ ಲೆವಿಗಾಗಿ ಕೊಡುವ ಮುಂದೆ ಸಾಮಾನ್ಯ ಜನತೆಗೆ ಅದರ ಉಪಯೋಗವಾಗಲಿ ಎನ್ನುವ ಉದಾತ್ತ ಧ್ಯೇಯವನ್ನು ಇಟ್ಟುಕೊಂಡು ಪೇಟೆಯ ಧಾರಣೆಗಿಂತಲೂ ಕಡಿಮೆ ಧಾರಣೆಗೆ ಕೊಡುವ ಉದ್ದೇಶದಿಂದ ಕೊಡುತ್ತಾರೆ. ಆದರೆ ಲೇವಿಯಲ್ಲಿ ಸರ್ಕಾರದವರಿಗೆ 46 ರೂಪಾಯಿಗಳಿಗೆ ಮಾರಾಟ ಮಾಡಿ, 25–30 ರೂಪಾಯಿ ಲಾಭ ಸಂಪಾದಿಸುವ ಉದ್ಯಮವನ್ನಾಗಿ ಪರಿವರ್ತಿಸಿದ್ದಾರೆ. ಇದು ನಿಜವಾಗಿಯೂ ಖಂಡನೀಯವಾದದ್ದು. ಯಾವ ರೇಟಿನ ಮೇಲೆ ಮಾರಾಟ ಮಾಡುತ್ತಾರೆ ಎನ್ನುವುದನ್ನು ಲೆವಿ ಎತ್ತುವಾಗಲೇ ಸ್ಪಷ್ಟಪಡಿಸುವುದು ಉತ್ತಮವೆಂದು ಹೇಳುತ್ತೇನೆ.

ಯೋಜನೆಗಳು ಸರಿಯಾಗಿ ಕಾರ್ಯಗತ ಆಗಲಿಲ್ಲ ಸ್ವಲ್ಪ ತೊದರೆಯಾಯಿತು, ಗಡಿ ಪ್ರದೇಶದಲ್ಲಿ ನಡೆದಂತ ಚೈನಾ ದುರಾಕ್ರಮಣದಿಂದ ಈ ಕಾರ್ಯ ಕುಂಠಿತವಾಯಿತು ಎನ್ನುವ ಮಾತನ್ನು ರಾಜ್ಯಪಾಲರ ಭಾಷಣದಲ್ಲಿ ಹೇಳಿದ್ದಾರೆ. ಒಂದು ಮಾತನ್ನು ನಾನು ವಿಷಾದದಿಂದ ಹೇಳುತ್ತೇನೆ. ನಾಡಿನ ರಕ್ಷಣೆಗೆ ಬೇಕೆಂದು ವಿಜಾಪೂರ ಜಿಲ್ಲೆಯಲ್ಲಿ ಮುಖ್ಯಮಂತ್ರಿಯವರು ತಮ್ಮ ತೂಕದಷ್ಟು ಬಂಗಾರವನ್ನು ತೆಗೆದುಕೊಂಡಿದ್ದಾರೆ. ಈ ಸಂದರ್ಭದಲ್ಲಿ 36 ಸಾವಿರ ರೂಪಾಯಿಗಳನ್ನು ಖರ್ಚುಮಾಡಿ ಡಾಕುಮೆಂಟರಿ ಫಿಲಂ ತೆಗೆಸಲಿಕ್ಕೆ ಅಗತ್ಯವೆನಿತ್ತು? ಎಂದು ಈ ಸಭೆಯಲ್ಲಿ ಸವಾಲಾಗಿ ಕೇಳುತ್ತಿದ್ದೇನೆ. ಒಂದು ಕಡೆ ರಾಜ್ಯದ ಜನತೆ ಸಂಕಷ್ಟದಲ್ಲಿದ್ದಾಗ ಗಡಿ ನಾಡಿನಲ್ಲಿ ಹೋರಾಟ ನಡೆದು ರಾಜ್ಯದ ಜನತೆಗೆ ರಕ್ಷಣೆ ಇಲ್ಲದೆ ಇದ್ದಾಗ ರಕ್ಷಣೆ ನೀಡುವ ಭರವಸೆಯಿಂದ ತೆಗೆದುಕೊಂಡ ಹಣದಲ್ಲಿ 36 ಸಾವಿರ ರೂಪಾಯಿ ಹಣವನ್ನು ಏತಕ್ಕೆ ಖರ್ಚು ಮಾಡಿದಿರಿ? ನನಗೆ ತಿಳಿದ ಮಟ್ಟಿಗೆ ಜಯಚಾಮರಾಜ ಪಾಲಿಟೆಕ್ನಿಕ್ ಇನ್‌ಸ್ಟಿಟ್ಯೂಟ್‌ನವರು ಕಚ್ಚಾ ಮಾಲನ್ನು ಒದಗಿಸಿಕೊಟ್ಟರು. ಹಣವನ್ನು ಕಂಟ್ರಾಕ್ಟರೊಬ್ಬರಿಗೆ ನಿಜಲಿಂಗಪ್ಪನವರ ನೇರವಾದ ಸಂಬಂಧಿಗಳೊಬ್ಬರ ಹೆಸರಿಗೆ ಕೊಟ್ಟು ಸರ್ಕಾರದ ಸಲಕರಣೆಗಳನ್ನು ಉಪಯೋಗಿಸಿಕೊಂಡು ಮೆರವಣಿಗೆಯ ಚಿತ್ರವನ್ನು ತೆಗೆಸುವ ಅಗತ್ಯವೇನಿತ್ತು? ಇತ್ತಕಡೆ ಅವರ ಗಮನ ಹರಿದಿದೆಯೇ? ಈ ಮಾತನ್ನು ನಾನು ಬಹಳ ವಿಷಾದದಿಂದ ಹೇಳುತ್ತಿದ್ದೇನೆ ಹಾಗೂ ಖಂಡಿಸುತ್ತೇನೆ.

ರಾಜ್ಯಪಾಲರ ಭಾಷಣದಲ್ಲಿ ವಿಜಿಲೆನ್ಸ್ ಕಮಿಷನ್ ಕಾರ್‍ಯದ ಬಗ್ಗೆ ಯಾವ ಮಾತನ್ನೂ ಹೇಳಿಲ್ಲ.ಬಹುಷ್ಯ ವಿಜಿಲೆನ್ಸ್ ಕಮಿಷನ್‌ರವರು ಮಾಡಿದ ಕಾರ್‍ಯದಿಂದ ಅವರಿಗೆ ಬೇಕಾದವರಿಗೆ ನಿಜಲಿಂಗಪ್ಪನವರಿಗೆ ತೊಂದರೆಯಾಗಬಹುದು, ಅಥವಾ ಅವರ ಪಕ್ಷದವರಿಗೆ ತೊಂದರೆಯಾಗಬಹುದು. ಆ ಕಾರಣದಿಂದ ಅವರಿಗೆ ಸಂಬಂಧಪಟ್ಟ ವಿಚಾರಗಳನ್ನು ತನಿಖೆ ಮಾಡಿದರೆಂಬ ವಿಷಯವನ್ನು ಸಭೆಗೆ ತಿಳಿಸುವುದು ಹೇಗೆ ಎಂದೋ ಏನೋ ವಿಜಿಲೆನ್ಸ್ ಕಮಿಷನ್ ವಿಚಾರವನ್ನು ರಾಜ್ಯಪಾಲರ ಭಾಷಣದಲ್ಲಿ ಸೇರಿಸಲಿಲ್ಲವೆಂಬ ಮಾತನ್ನು ಹೇಳುತ್ತೇನೆ. ಆಡ್ಮಿನಿಸ್ಟ್ರೇಟಿವ್ ರಿಫಾರ್ಮ್ಸ್ ಕಮಿಟಿಗೆ ಶ್ರೀ ಮೊರಾರ್ಜಿದೇಸಯಿಯವರು ಅಧ್ಯಕ್ಷರಾಗಿದ್ದರು. ಈಗ ಅದಕ್ಕೆ ಶ್ರೀ ಕೆ, ಹನುಮಂತಯ್ಯನವರು ಅಧ್ಯಕ್ಷರಾಗಿದ್ದಾರೆ. ಈ ಕಮಿಟಿಯು ಕೇಂದ್ರ ಸರ್ಕಾರಕ್ಕೆ ಒಂದು ಮಧ್ಯವರ್ತಿ ರಿಪೋರ್ಟನ್ನು ಒಪ್ಪಿಸಿದೆ. ಆ ವರದಿಯಲ್ಲಿ ರಾಜ್ಯ ಸರ್ಕಾರಕ್ಕೆ ಸಂಬಂಧಿಸಿದ ಆಡಳಿತ ಸುಧಾರಣೆಗಳ ಅನೇಕ ಸಲಹೆ ಸೂಚನೆಗಳನ್ನು ಕಾರ್ಯಗತಗೊಳಿಸುವ ಬಗ್ಗೆ ರಾಜ್ಯಪಾಲರ ಭಾಷಣದಲ್ಲಿ ಯಾವುದನ್ನು ಹೇಳದೇ ಇರುವುದರಿಂದ ಅತ್ಯಂತ ವಿಷಾದವಾಗುತ್ತದೆ. ಮಾನ್ಯ ಮುಖ್ಯ ಮಂತ್ರಿಗಳು ಎಲ್ಲವನ್ನು ನನಗೆ ಬಿಟ್ಟು ಬಿಡಿ ಎಂದು ಹೇಳುತ್ತಾರೆ. ಆದರೆ

ಇನ್ನು ಮುಂದೆ ಅವರಿಗೆ ಏನನ್ನು ಬಿಡಲಾಗುವುದಿಲ್ಲ . ಇದಲ್ಲದೆ ಅವರನ್ನೂ ಸಹ ಬಿಟ್ಟು ಬಿಡುವುದಕ್ಕಾಗುವುದಿಲ್ಲ ಎಂದು ಹೇಳುತ್ತೇನೆ.

**12 Noon**

ಇಂದು ಜನ ಕೂಳು ಇಲ್ಲದೆ ಸಾಯುತ್ತಿದ್ದಾರೆ ಎಂದಾಗಲೂ ಅವರು ನಗುತ್ತಾರೆ ಸ್ವಾಮಿ, ತಮಗೆ ದೇವರು ಕಲ್ಯಾಣ ಮಾಡಲಿ ಎಂದಾಗಲೂ ನಗುತ್ತಾರೆ. ಇದರ ಅರ್ಥ ಏನು? ಶ್ರೀ ರಾಜಗೋಪಾಲಾಚಾರಿಯವರ ಕರಿ ಕನ್ನಡಕದ ನೋಟ ಹಾಗೂ ಶ್ರೀ ಮಾನ್ ನಿಜಲಿಂಗಪ್ಪನವರ ಹುಸಿ ನಗು ಇವೆರಡು ನನಗೆ ಅರ್ಥವಾಗುವುದಿಲ್ಲ. ಚುನಾವಣೆಯಲ್ಲಿ ಜನತೆ ಕೊಡತಕ್ಕಂತಹ ಅಭಿಪ್ರಾಯಕ್ಕೆ, ನಿರ್ಣಯಕ್ಕೆ ಮನ್ನಣೆ ಕೊಡುವುದನ್ನು ಕಲಿಯಬೇಕು. ಹಿಂದಕ್ಕೆ ಡಿ.ಡಿ.ಟಿ ಯನ್ನೇ ತಿಂದು ಬದುಕುವಂತಹ ಸೊಳ್ಳೆಗಳು ನಿರ್ಮಾಣವಾಗಿವೆ. ಅಂತೆಯೇ ನಮ್ಮ ರಾಜ್ಯದ ಮಂತ್ರಿಗಳಾಗಿದ್ದಾರೆ. ಮಾನ್ಯ ಮುಖ್ಯ ಮಂತ್ರಿಗಳು ಟೀಕೆ ಟಿಪ್ಪಣೆಗಳಿಗೆ ಮನ್ನಣೆಕೊಡುವ ಹಾಗೂ ಅವುಗಳನ್ನು ಸರಿಪಡಿಸಿಕೊಳ್ಳುವ ಸತ್ ಸಂಪ್ರದಾಯುವನ್ನಿಟ್ಟು ಕೊಳ್ಳಬೇಕು.ಕೊನೆಯದಾಗಿ ದೇಶದ ಜನತೆಯ ಕಲ್ಯಾಣಕ್ಕಾಗಿ ಜನತೆಯ ಪ್ರಗತಿಗಾಗಿ ಎಲ್ಲರೂ ಪ್ರಯತ್ನ ಪಡಬೇಕು ಎಂದು ಹೇಳುತ್ತೇನೆ. ರಾಜ್ಯಪಾಲರ ಭಾಷಣಕ್ಕೆ ವಂದನಾರ್ಪಣೆ ಸಲ್ಲಿಸುವ ಈ ಚರ್ಚೆಯಲ್ಲಿ ನನಗೆ ಮಾತಾನಾಡುವುದಕ್ಕೆ ಅವಕಾಶಕೊಟ್ಟು ಆಡಳಿತ ಪಕ್ಷದ ಲೋಪದೋಷಗಳನ್ನು ಎತ್ತಿ ತೋರಿಸುವುದಕ್ಕೆ ಅವಕಾಶ ಮಾಡಿಕೊಟ್ಟಿರುವುದಕ್ಕಾಗಿ ಮಾನ್ಯ ಸಭಾಧ್ಯಕ್ಷರಿಗೆ ಆಭಿನಂದನೆಗಳನ್ನು ಸಲ್ಲಿಸಿ, ನನ್ನ ಮಾತು ಮುಕ್ತಾಯಗೊಳಿಸುತ್ತೇನೆ.

**Mr. SPEAKER:** If every member exceeds his time, It will be very difficult for me to conduct the business .

The House adjourn now and reassemble at 3 p.m

**2nd may 1967 to 6th may 1967**

## ಪ್ರಶ್ನೋತ್ತರ ಕಾಲವನ್ನು ಮುಂದೂಡುವ ಕುರಿತು

**ಶ್ರೀ ಮಹದೇವಪ್ಪ ಗದಿಗೆಪ್ಪ ಬಣಕಾರ (ಬ್ಯಾಡಗಿ):** ಸಭಾಧ್ಯಕ್ಷರೇ, ಪ್ರಶ್ನೋತ್ತರ ಕಾಲವನ್ನು ಮುಂದೂಡಬೇಕು ಎಂಬ ವಿಚಾರವನ್ನು ಸಭೆಯ ಮುಂದೆ ಇಟ್ಟಿದ್ದೇವೆ. ಇದು ಕಬ್ಬಿಣದ ಅಂಗಡಿಗೆ ನೊಣವು ಹೋದ ಹಾಗೆ ಆಗಿದೆ. ಪ್ರಶ್ನೋತ್ತರ ಕಾಲವನ್ನು ತೆಗೆದುಕೊಳ್ಳುವುದರಿಂದ ಯಾವ ಪ್ರಯೋಜನವು ಆಗುವುದಿಲ್ಲ. ಏಕೆಂದರೆ

ಆಡಳಿತ ಪಕ್ಷದವರು ಒಂದು ಮಾತನ್ನು ಖಚಿತಪಡಿಸಿಕೊಂಡಿದ್ದಾರೆ, ಯಾವ ಎಲ್ಲೆಯನ್ನಾದರೂ ದಾಟಿ ಹೋಗಬಹುದು, ಯಾವುದಕ್ಕೂ ಯಾರಿಗೂ ಭಯ ಪಡಬೇಕಾದ್ದಿಲ್ಲ ಯಾವ ಸನ್ನಿವೇಶದಲ್ಲೂ ನಮಗೆ ಸಾವು ಇಲ್ಲ ಎಂಬ ವಿಚಾರವನ್ನು ಮನದಟ್ಟು ಮಾಡಿಕೊಂಡಿದ್ದಾರೆ. ಅಧ್ಯಕ್ಷರೇ ಈ ಸಭೆಯ ಗೌರವಕ್ಕೆ ಧಕ್ಕೆ ತರಬೇಕು ಆಥವಾ ತಮ್ಮ ಗೌರವ ಸ್ಥಾನವನ್ನು ಕಡಿಮೆ ಮಾಡಬೇಕು ಇಲ್ಲವೇ ಸರ್ಕಾರದ ಯೋಗ್ಯತೆಯನ್ನು ಜನತೆಯ ಮುಂದೆ ಕಡಿಮೆ ಮಾಡಬೇಕು, ಇಲ್ಲವೇ ಸರ್ಕಾರದ ಯೋಗ್ಯತೆಯನ್ನು ಜನತೆಯ ಮುಂದೆ ಕಡಿಮೆ ಮಾಡಿ ಸರ್ಕಾರ ಬೀಳುವಂತೆ ಮಾಡಬೇಕೆಂಬ ಉದ್ದೇಶ ವಿರೋಧ ಪಕ್ಷದವರಿಗೆ ಇಲ್ಲ. ಒಂದು ಮಾತನ್ನು ಇಲ್ಲಿ ಸ್ಪಷ್ಟಪಡಿಸುತ್ತೇನೆ. ಬಸವಣ್ಣನವರು ಒಂದು ಮಾತನ್ನು ಹೇಳಿದ್ದಾರೆ ಅದೇನೆಂದರೆ,

'ಕಿಚ್ಚು ದೇವರೆಂದು ಹವಿಯ ನಿಕ್ಕುವ ಹಾರುವವನ ಮನೆಗೆ ಕಿಚ್ಚೆದ್ದು ಸುಡುವಾಗ ಬಚ್ಚಲು ನೀರು, ಬೀದಿಯ ಧೂಳು ಗತಿಯಾಗಿತ್ತು, ನೋಡಾ.ಎಂಬ ವಚನ ಜ್ಞಾಪಕಕ್ಕೆ ಬರುತ್ತದೆ. "ಅಗ್ನಿ ದೇವೋಭವ" ಯಾವ ಅಗ್ನಿಯನ್ನು ದೇವರು ಎಂದು ಭಾವಿಸಿ, ಪೂಜಾರ್ಹ ಎಂದು ಪೂಜೆ ಮಾಡುತ್ತೇವೆಯೋ ಅದೇ ಅಗ್ನಿಯು ಮನೆಗೆ ಬೆಂಕಿ ಹತ್ತಿ ಸುಡುತ್ತಾ ಇರುವಾಗ ದೇವರು ಸುಡುತಾನೆಂದು ಸುಮ್ಮನಿರುತ್ತೇವೆಯೇ? ಆಗ ಅದಕ್ಕೆ ಬಚ್ಚಲು ನೀರನ್ನು ತಂದು ಹಾಕುತ್ತೇವೆ, ಬೀದಿಯ ಧೂಳನ್ನು ಎರಚುತ್ತೇವೆ, ಹಾಗೆಯೇ ಈ ದಿನ ನಮಗೆ ಸರ್ಕಾರದ ಬಗ್ಗೆ ಗೌರವ ಇದ್ದರೂ ಕೂಡ ಅವರು ಮಾಡುತ್ತಾ ಇರತಕ್ಕ ಕೆಲಸಗಳು ಯಾವ ರೀತಿ ಇವೆ ಎಂದರೆ ಏನು ಮಾಡುವುದಕ್ಕೂ ಅವರು ಹಿಂದು ಮಂದು ನೋಡುವುದಿಲ್ಲ. ಯಾರೂ ನಮ್ಮನ್ನೂ ಕೆಳಕ್ಕೆ ಇಳಿಸಲಾರರು, ನಮಗೆ ಸಾವೇ ಬರುವುದಿಲ್ಲ ಎಂಬ ಭಾವನೆಯನ್ನು ತಾಳಿದ್ದಾರೆ ಅದಕ್ಕಾಗಿ ನಾವು ಈ ಒಂದು ಧೋರಣೆಯನ್ನು ತಾಳಬೇಕಾಗಿದೆ ದಿಟ್ಟ ಹೆಜ್ಜೆಯನ್ನಿಡಬೇಕಾಗಿದೆ.

**ಅಧ್ಯಕ್ಷರು:** ಪ್ರಶ್ನೋತ್ತರ ಕಾಲವನ್ನು ಅದಕ್ಕೋಸ್ಕರ ಮಂದುವರೆಸಬೇಕೇ?

**ಶ್ರೀ ಮಹದೇವ ಗದಿಗೆಪ್ಪ ಬಣಕಾರ್:** ಮೊದಲಿನ ಕಾರ್ಯಕ್ರಮದ ಪ್ರಕಾರ ಸಭೆ 40 ದಿವಸ ನಡೆಯಬೇಕು ಎಂದು ತೀರ್ಮಾನವಾಗಿದ್ದುದನ್ನು ಬದಲಾವಣೆ ಮಾಡಲು ಕಾರಣವೇನು ಎಂಬುದನ್ನು ತಿಳಿಸಿಲ್ಲ. ಮಂತ್ರಿ ಮಂಡಲದ ಪತನಕ್ಕೆ ಒಳಗೊಳಗೇ ನಡೆಯುತ್ತಾ ಇರತಕ್ಕ ಸನ್ನಾಹದ ರಭಸವನ್ನು ಕಡಿಮೆ ಮಾಡಬೇಕು ಎಂಬ ಉದ್ದೇಶದಿಂದಲೇ ಈ ರೀತಿ ಮಾಡಿದ್ದಾರೆ ಎಂದು ನಾನು ಹೇಳುತ್ತೇನೆ. "This is the postponement of the death sentence" 40 ದಿವಸದ ಕಾರ್ಯಕಲಾಪ ನಡೆಸುತ್ತೇವೆ ಎಂದು ಹೇಳಿ ಜನತೆಗೆ ಮಾತು ಕೊಟ್ಟ ಪ್ರಕಾರ,

ಈ ಸರ್ಕಾರದಿಂದ ಆಗತಕ್ಕ ಸಹಾಯ ಜನತೆಗೆ ಮುಟ್ಟಬೇಕು, ಜನತೆಗೆ ಸುಖವಾಗಬೇಕು ಎಂದು ಹೇಳಿ ನಿರೀಕ್ಷೆ ಮಾಡುತ್ತಾ ಇದ್ದ ಸಂದರ್ಭದಲ್ಲಿ ಈ ರೀತಿ ಐದು ದಿವಸಗಳವರೆಗೆ ಇಳಿಸಿರುವುದು ಆಶ್ಚರ್ಯ ಈ ಮಂತ್ರಿ ಮಂಡಲ ಉಳಿಯುತ್ತದೆ ಎನ್ನತಕ್ಕ ಭರವಸೆ ಅವರಿಗಿಲ್ಲ. ತಾವು ಸ್ಪೀಕರ ಆಗಿ ಚುನಾಯಿತರಾದ ದಿವಸ ತಮ್ಮ ಮುಂದೆ ಬಹಳ ಉದಾತ್ತವಾದ ವಿಚಾರಗಳನ್ನು ನಾವು ಇಟ್ಟೆವು. ತಾವೂ ಕೂಡ ತುಲನಾತ್ಮಕ ದೃಷ್ಠಿಯಿಂದ ವಿಚಾರಗಳನ್ನು ಪರೀಶಿಲನೆ ಮಾಡುತ್ತೇವೆ ಎಂಬ ಮಾತನ್ನು ಕೊಟ್ಟಿದ್ದೀರಿ. ಆದರೆ ಈ ದಿವಸ ಬಹಳ ದುಖ;ದಿಂದ ಹೇಳುತ್ತಾ ಇದ್ದೇನೆ ಆಳುವ ಪಕ್ಷವನ್ನು ಉಳಿಸುವುದಕ್ಕೆ ತಾವು ಸ್ವಲ್ಪ ಮನಸ್ಸು ಮಾಡಿದ್ದೀರೋ ಏನೋ ಎಂದು ನನ್ನ ಮನಸ್ಸಿಗೆ ಬರುತ್ತಾ ಇದೆ.

**Mr. speaker:** Order, Order

**ಶ್ರೀ ಮಹದೇವ ಗದಿಗೆಪ್ಪ ಬಣಕಾರ್:** ಅದರಲ್ಲಿ ಯಾವ ರೀತಿ ತಪ್ಪು ಇದೆ ಎಂಬುದನ್ನು ತಿಳಿಸಬೇಕು.

**Mr. speaker:** Does the member continue and stick to the statement that he has made?

**ಶ್ರೀ ಮಹದೇವ ಗದಿಗೆಪ್ಪ ಬಣಕಾರ:** ನಮ್ಮ ಭಾವನೆ ಆರೀತಿ ಇದೆ, ಅದು ಸರಿಯಲ್ಲ ಎಂದರೆ ಒಪ್ಪಿಕೊಳ್ಳುತ್ತೇನೆ.

**Mr. speaker:** He may kindly make it clear to the House; if he entertains such doubt, let him say it plainly and take the consequences.

**ಶ್ರೀ ಮಹದೇವ ಗದಿಗೆಪ್ಪ ಬಣಕಾರ್:** ಸ್ವಾಮಿ, ನಾನು ತಮ್ಮ ವೈಯಕ್ತಿಕವಾದ ವಿಷಯದ ಬಗ್ಗೆ ಅಥವಾ ಸಭೆಯ ಬಗ್ಗೆ ಪ್ರಸ್ಥಾಪ ಮಾಡುತ್ತಾ ಇಲ್ಲ.

**ಅಧ್ಯಕ್ಷರು:** ನನ್ನ ವಯಕ್ತಿಕ ವಿಷಯ ಇಲ್ಲಿ ಬರುವುದಿಲ್ಲ. ನಾನು ಅಧ್ಯಕ್ಷನಾಗಿ ಮಾಡುವಂಥಹದ್ದರಲ್ಲಿ ಸಂಶಯ ಉಂಟೇ ಅನ್ನುವುದನ್ನು ತಾವು ಸಭೆಗೆ ಹೇಳಬೇಕು.

**ಶ್ರೀ ಮಹದೇವ ಗದಿಗೆಪ್ಪ ಬಣಕಾರ:** ಅಧ್ಯಕ್ಷರಾಗಿ ಸಂಶಯ ಬರುವ ರೀತಿಯಲ್ಲಿ ಏನೂ ಮಾಡಿಲ್ಲ ಎಂದು ಹೇಳಿದರೆ ನಾನು ಒಪ್ಪಿಕೊಳ್ಳುತ್ತೇನೆ. ಆದರೆ ನೀವು ಆರೀತಿ ಮಾಡಿದ್ದೀರಿ ಅಂತಾ ಹೇಳಿ ನಾನು ಚಾರ್ಜ ಮಾಡುತ್ತಾ ಇಲ್ಲ.

**ಅಧ್ಯಕ್ಷರು:** ನಿಮ್ಮ ಅಭಿಪ್ರಾಯವನ್ನು ಸ್ಪಷ್ಟಪಡಿಸಿ

**ಶ್ರೀ ಮಹದೇವ ಗದಿಗೆಪ್ಪ ಬಣಕಾರ್:** ಯಾವ ಒಂದು ಕಾರಣವೂ ಇಲ್ಲದೇ ಸುಮಾರು 10 ದಿವಸಗಳವರೆಗೆ ನಡೆಯಬೇಕಾಗಿದ್ದ ಈ ಸಭೆಯ ಕಾರ್ಯ ಕಲಾಪಗಳನ್ನು ಏಕಾಏಕಿ ಆಡಳಿತ ಪಕ್ಷದವರು 5 ದಿನಗಳಿಗೆ ಮೊಟುಕು ಮಾಡಿರುವುದರಿಂದ, ಸದ್ಯದಲ್ಲಿಯೇ ಆಡಳಿತ ಪಕ್ಷವು ಪತನವಾಗುತ್ತದೆ ಎಂಬ ಮಾತುಗಳನ್ನು ನಾವು ಸ್ಪಷ್ಟವಾಗಿ ಕೇಳುತ್ತೀದ್ದೇವೆ. ಬಹುಶ್ಯ ಅಂಥ ಒಂದು ದುರ್ದೈವ ಆಡಳಿತ ಪಕ್ಷಕ್ಕೆ ಬಂದಿರುವ ಕಾರಣ ಆ ಒಂದು ಒತ್ತಡದಿಂದ ಅವರು ಬಂದು ತಮ್ಮ ಮೊರೆ ಹೊಕ್ಕಿರಬಹುದು. 10 ದಿನಗಳ ಈ ಅಧಿವೇಶನವನ್ನು 5 ದಿನಕ್ಕೆ ಇಳಿಸಬೇಕೆಂದು ತಮ್ಮಲ್ಲಿ ಅರಿಕೆಮಾಡಿಕೊಡಿರಬೇಕೆಂಬ ಒಂದು ಸಂಶಯ ನನ್ನ ಮನಸ್ಸಿನಲ್ಲಿ ಮೂಡಿದೆ. ಅದನ್ನು ತಮ್ಮ ಮುಂದೆ ತಿಳಿಸಿದೆನು........

**Mr. speaker:** Then he may state it plainly and take the consequences of it.

## 2.30 p.m

**ಶ್ರೀ ಎಸ್. ಶಿವಪ್ಪ:** ಆ ಮಾನ್ಯ ಸದದ್ಯರಲ್ಲಿ ತಮ್ಮ ಬಗ್ಗೆ ಅಂಥ ಭಾವನೆಯಿಲ್ಲ......

**ಅಧ್ಯಕ್ಷರು:** ಆ ರೀತಿಯ ಭಾವನೆ ಅಥವಾ ಅನುಮಾನ ಅವರಲ್ಲಿಲ್ಲ ಎಂದು ತಾವು ಹೇಳುವುದು ಬೇಡ. If the Member persists I want to know whether that is the opinion of anybody else. Iam prepared to give one more chance. If they do not have confidence, they must say that Iam partial. " ಅವರ ಒತ್ತಡಕ್ಕೆ ಅವರನ್ನು ಕಾಪಾಡುವುದಕ್ಕೆ" ಎಂದು ಅವರು ಹೇಳಿದ್ದು ಸರಿಯಲ್ಲ.

**ಶ್ರೀ ಮಹದೇವ ಗದಿಗೆಪ್ಪ ಬಣಕಾರ್:** ಸರ್ಕಾರದವರು ತಮಗೆ ಬಂದಿರುವ ವಿಪತ್ತನ್ನು ಪರಿಹರಿಸಿಕೊಳ್ಳುವುದಕ್ಕೋಸ್ಕರವಾಗಿ 40 ದಿನಗಳಕಾಲ ನಡೆಬೇಕಾಗಿದ್ದ ಕಾರ್ಯಕ್ರಮಗಳನ್ನು 5ದಿನಗಳವರೆಗೆ ಇಳಿಸಿಕೊಂಡಿದ್ದಾರೆ ಎಂಬುದು ನನ್ನ ಅಭಿಪ್ರಾಯ, ಹಾಗೂ ನನ್ನ ಭಾವನೆ. ಇದರ ವಿನಾ ನಾನು ತಮ್ಮ ಬಗ್ಗೆ ಏನನ್ನೂ ಹೇಳಲಿಲ್ಲ. ತಮ್ಮ ಬಗ್ಗೆ ನನ್ನ ಅಭಿಪ್ರಾಯ ಆ ರೀತಿಯಾಗಿಲ್ಲ.

**Mr. speaker:** I want to give fair treatment to all the members. If any member has got any grievances against me, let him not hesitate to say it. I like this Hon'ble member saying this so courageously.

**ಶ್ರೀ ಮಹದೇವ ಗದಿಗೆಪ್ಪ ಬಣಕಾರ:** ತಮ್ಮ ಬಗ್ಗೆ ನನಗೆ ಅಂತ ಅಭಿಪ್ರಾಯವಿಲ್ಲ ಎಂದು ಇನ್ನೊಮ್ಮೆ ಹೇಳುತ್ತೇನೆ.

### Monday 26th june 1967

## ಮುಂಗಡ ಪತ್ರದ ಮೇಲೆ

**ಶ್ರೀ ಮಹದೇಪ್ಪ ಬಣಕಾರ (ಬ್ಯಾಡಗಿ):** ಮಾನ್ಯ ಸಭಾಪತಿಗಳೇ 1967–68 ನೇ ಸಾಲಿನ ಮುಂಗಡ ಪತ್ರವನ್ನು ನಮ್ಮ ಅರ್ಥಸಚಿವರು ಈ ಸಭೆಗೆ ಒಪ್ಪಿಸತಕ್ಕ ಕಾಲದಲ್ಲಿ ಅವರು ಅಪ್ಪಣೆ ಕೊಡಿಸಿದ ಭಾಷಣದಲ್ಲಿ ಮೊದಲು ಅವರಿಗಿದ್ದ ಉತ್ಸಾಹ ಈಗ ಅವರು ಮಾತನಾಡಿದ್ದರಲ್ಲಿ ಇರುವುದಿಲ್ಲ. ಅವರು ಕಳೆದ ಮಾರ್ಚ 5ನೇ ತಾರೀಖಿನ ದಿವಸ ಕೇಂದ್ರ ಸರ್ಕಾರದಿಂದ ನಾವು ನೀರಿಕ್ಷಿಸಿದಷ್ಟು ಹಣದ ನೆರವು ನಮಗೆ ಸಿಕ್ಕುವುದಿಲ್ಲ, ಆ ನೆರವು ಕುಂಟಿತವಾಗುತ್ತದೆಂದು ಆ ದಿವಸ ಅವರು ಹೇಳಿದ್ದು ಅವರ ಅಪ್ರುಬುದ್ಧತನವನ್ನು ಸಾಕಷ್ಟು ಸಮರ್ಥನೆ ಮಾಡುವ ರೀತಿಯಲ್ಲಿ ಈ ಮುಂಗಡ ಪತ್ರವನ್ನು ಮಂಡಿಸಿದ್ದಾರೆ. ಈ ಮುಂಗಡ ಪತ್ರವು ಕೇವಲ ಶುಷ್ಕ ಅಂಕಿ ಅಂಶಗಳನ್ನೊಳಗೊಂಡಿದೆ. ಇದೊಂದು ಹೊಂದಾಣಿಕೆಯ ಮುಂಗಡ ಪತ್ರವಾಗಿದೆ ಎಂದು ನಾನು ಸ್ಪಷ್ಟವಾಗಿ ಹೇಳುತ್ತೇನೆ.

ಇದು ಪ್ರಕಟವಾದ ಮೇಲೆ ನನಗೆ ತಿಳಿದು ಬಂದಿರುವ ಹಾಗೆ ಈ ಮೊದಲು ಸರ್ಕಾರದವರು ಸಾಕಷ್ಟು ಹೊಸ ಹೊಸ ಸಾಲದ ಸೌಲಭ್ಯಗಳನ್ನಿಟ್ಟುಕೊಂಡು– ಬ್ಯಾಂಕುಗಳಲ್ಲೂ, ಶ್ರೀಮಂತರಲ್ಲೂ ಕೇಂದ್ರ ಸರ್ಕಾರದವರಿಂದಲೂ ಮತ್ತು ಪರದೇಶಗಳಿಂದಲೂ ಹೀಗೆ ಎಲ್ಲೆಲ್ಲಿ ಸಾಲವು ಯಾರು ಯಾರಿಂದ ಸಿಕ್ಕುತ್ತದೆಯೋ ಅದನ್ನೆಲ್ಲ ಪಡೆದುಕೊಂಡ ಮೇಲೂ ದೇಶಾಭಿವೃದ್ಧಿಯನ್ನು ಸಾಧಿಸದ ಈ ಸರ್ಕಾರ ಈದಿವಸ ದೇಶದಲ್ಲಿ ಹೆಚ್ಚಿನ ಪ್ರಗತಿಯನ್ನು ಸಾಧಿಸಬಹುದೇ ಎಂಬುದು ಒಂದು ಮೂಲ ಭೂತ ಪ್ರಶ್ನೆಯಾಗಿದೆ. ಇವರು ಹೇಳುತ್ತಿರುವ ಪ್ರಗತಿಯ ಸ್ವರೂಪ ಹೇಗಿದೆ ಎಂದರೆ– ಕರೆಯತಕ್ಕ ಹಿಂಡುವ ಆಕಳು ಮನೆಯಲ್ಲಿ ಇದ್ದಾಗಲೇ ಮಜ್ಜಿಗೆ ಇಲ್ಲವೆಂದು ಹೇಳುತ್ತಿರುವಾಗ ಇನ್ನು ಆ ಆಕಳನ್ನು ಕಟುಕನ ಮನೆಗೆ ಕಳುಹಿಸಿದ ಮೇಲೆ ಆ ಮನೆಯಲ್ಲಿದ್ದ ಜನರು ಬೆಣ್ಣೆ ತಿನ್ನತಕ್ಕ ಆಸೆಯನ್ನಿಟ್ಟುಕೊಂಡಂತಾಗಿದೆ. ಯಾರಾದರೂ ಇಂಥ ಆಸೆಯನ್ನಿಟ್ಟುಕೊಂಡಿದ್ದರೆ ಅದು ಸಾಧ್ಯವಾದಿತೇ? ಮಾನ್ಯ ಸಚಿವರು ಕೊಟ್ಟಿರತಕ್ಕ ಬಡ್ಜೆಟ್ ಬಾಷಣದಲ್ಲಿ ಒಂದು ಕಡೆ ದೇಶದ ಒಟ್ಟು ಸಾಲದ ಮೊತ್ತ 313.36 ಕೋಟಿ ಎಂದು ಹೇಳಿದ್ದಾರೆ. ಆದರೆ ಈ ಸಾಲದ ಮೊತ್ತ ವರ್ಷಾಖೈರಿಗೆ 330.85 ಕೋಟಿ ಹಣವನ್ನು ಹೆಂಡದ ಮಾರಾಟ ಮಾಡುವುದರಿಂದ, ಅಂದರೆ ಪೂಜ್ಯ ಗಾಂಧೀಜಿಯ ಪಾನ ನಿರೋಧ ತತ್ವವನ್ನು ಕೊಲೆ ಮಾಡಿ, ಕುಡಿತವನ್ನು

ಮುಂದುವರೆಸುವುದರ ಮೂಲಕ ಅಷ್ಟು ಹಣವನ್ನು ಗಳಿಸಬೇಕೆಂದು ಹೇಳಿದ್ದಾರೆ. ಹಾಗೆ ಬರತಕ್ಕ ಮೂರೂವರೆ ಕೋಟಿಯನ್ನು ಸೇರಿಸಿ ಒಟ್ಟು ನಮ್ಮಲ್ಲಿ 55 ಲಕ್ಷ ರೂಪಾಯಿಗಳ ಉಳಿತಾಯ ಬಡ್ಜೆಟ್ಟಿದೆ ಎಂದು ಹೇಳಿದ್ದಾರೆ. ಅಂದರೆ ಈಗಿರತಕ್ಕಂತಹ ಜನಸಾಮಾನ್ಯರೆಲ್ಲರೂ ನಿರ್ನಾಮವಾದ ಮೇಲೆ ಅಷ್ಟು ಹಣ ನಮ್ಮಲ್ಲಿ ಉಳಿತಾಯ ಆಗುತ್ತದೆ ಎಂದು ವ್ಯಾಪಾರಸ್ಥರ ಹತ್ತಿರ ಹೋದರೆ ಅಲ್ಲಿ ಟ್ಯಾಕ್ಸಿನ ಕಳವಳ, ರೈತರಲ್ಲಿ ಹೋದರೆ ಅವರಲ್ಲಿ ಬಿತ್ತನೆ ಬೀಜ, ಗೊಬ್ಬರ ಮತ್ತು ಅವರಿಗೆ ಬೇಕಾದ ಇನ್ನಿತರ ಸಾಧನ ಸಂಪತ್ತುಗಳಿಗೆಲ್ಲಾ ತೊಂದರೆ ಇದೆಯಂದೂ, ವಿದ್ಯಾರ್ಥಿಗಳ ಹತ್ತಿರ ಹೋದರೆ ಅವರು ಹೆಚ್ಚಿನ ಶುಲ್ಕಗಳನ್ನು ವಿಧಿಸಿದ್ದಾರೆಂಬ ಕಳವಳ, ಅಧಿಕಾರಿಗಳ ಹತ್ತಿರ ಹೋದರೆ ಅವರಿಗೆ ಸರಿಯಾಗಿ ಭಡ್ತಿ ಸಿಕ್ಕಲಿಲ್ಲ, ಸೀನಿಯಾರಿಟಿ ಹೋಗಿದೆ ಎಂದು ಕೆಲವರು ಹೇಳಿದರೆ ಮತ್ತೆ ಕೆಲವರು ರಿಟ್ರೆಂಚ್‌ಮೆಂಟ್‌ನಿಂದ ತೊಂದರೆಯಾಗಿದೆ ಎಂದು ಕೆಲವರೂ, ಇನ್ನೊಂದು ಕಡೆ ನಿರುದ್ಯೋಗ ಹೀಗೆ ಎಲ್ಲಿ ನೋಡಿದರೂ ಹಾಹಾಕಾರವೆದ್ದಿರತಕ್ಕದ್ದು ಕಂಡು ಬರುತ್ತಿದೆ. ಇಂದು ದೇಶ ಅಶಾಂತಿ ಪರ್ವವಾಗಿದೆ. ದೇಶದಲ್ಲಿ ಯಾವ ಮೂಲೆಯಲ್ಲಿ ಯಾವ ಜನತೆಯನ್ನು ಕಂಡರೂ ಅತೃಪ್ತಿ ತಲೆದೋರುತ್ತಾ ಇದೆ. ನಮ್ಮ ದೇಶದ ಉತ್ಪತ್ತಿಯನ್ನು ಹೆಚ್ಚು ಮಾಡತಕ್ಕಂಥಾದ್ದು ಸರ್ಕಾರದ ಕರ್ತವ್ಯ. ನಮ್ಮ ಅರ್ಥ ಮಂತ್ರಿಗಳು ಇನ್ನು ಸ್ವಲ್ಪ ಕಾಲದಲ್ಲಿಯೇ ಅಮೇರಿಕಾಕ್ಕೆ ಪ್ರಯಾಣ ಮಾಡುವವರಿದ್ದಾರೆ ಎಂದು ಪತ್ರಿಕೆಗಳಲ್ಲಿ ಓದಿದ್ದೇನೆ. ಅವರ ಉದ್ದೇಶ ಏನೆಂದರೆ, ಕೈಗಾರಿಕೆಯಲ್ಲಿ ಹೆಚ್ಚಿನ ಪ್ರಗತಿಯನ್ನು ಸಾಧಿಸಬೇಕು ಎಂದು. ಆದರೆ ಇಲ್ಲಿರತಕ್ಕಂಥ ಕೈಗಾರಿಕೆಗಳು ಎಷ್ಟರಮಟ್ಟಿಗೆ ಪ್ರಗತಿ ಸಾಧನೆಯನ್ನು ಪಡೆಯುತ್ತಲಿವೆ ಎಂಬುದನ್ನು ತಿಳಿಸಿದರೆ ಒಳ್ಳೆಯದು. ಈಗ ರಾಜ್ಯದಲ್ಲಿ ಇರತಕ್ಕಂಥಹ ಫ್ಯಾಕ್ಟರಿಗಳಲ್ಲಿರುವ ಪ್ರಗತಿ ನೋಡಲಿ, ಸ್ಯಾಂಡಲ್‌ವುಡ್ ಆಯಿಲ್ ಫ್ಯಾಕ್ಟರಿಯು ಪ್ರಗತಿ ಸಾಧಿಸಿರುವುದನ್ನು ನೋಡಿದರೆ ಗೊತ್ತಾಗುತ್ತದೆ. ಅದು ಅಂದು ಅಂದರೆ 1964–65 ರಲ್ಲಿ 1 ಕೋಟಿ 33 ಲಕ್ಷ 74 ಸಾವಿರ ರೂಪಾಯಿಯ ಸಾಮಾನು ತಯಾರಿಸುತ್ತಿದ್ದರೆ ಇಂದು ಕೇವಲ 85 ಲಕ್ಷ 60 ಸಾವಿರ ರೂಪಾಯಿಯ ಹುಟ್ಟುವಳಿಗೆ ಇಳಿದಿದೆ. ಅದರಂತೆ ಸೋಪ್ ಫ್ಯಾಕ್ಟರಿ 1964–65ರಲ್ಲಿ 118 ಲಕ್ಷ 14 ಸಾವಿರ ರೂಪಾಯಿಯ ಉತ್ಪತ್ತಿಯನ್ನು ಹೊಂದಿದ್ದು ಇಂದು ಕೇವಲ 82 ಲಕ್ಷಕ್ಕೆ ಇಳಿದಿದೆ. ಹಾಗೆ ಮೈಸೂರ ಇಪ್ಲಿಮೆಂಟ್ ಫ್ಯಾಕ್ಟರಿ ಉತ್ಪತ್ತಿ 1964–65 ರಲ್ಲಿ 36 ಲಕ್ಷ ರೂಪಾಯಿ ಇದ್ದದ್ದು ಇವೊತ್ತು 18 ಲಕ್ಷ ರೂಪಾಯಿಗಿಳಿದಿದೆ. ಈ ಎಲ್ಲಾ ಕೈಗಾರಿಕೆಗಳು ದಿನೇ ದಿನೇ ಅಧೋಗತಿಗೆ ಇಳಿಯುತ್ತಲಿವೆ. ಹೀಗಿರುವ ದು:ಸ್ತಿಯನ್ನು ಉತ್ತಮ ಪಡಿಸುವುದನ್ನು ಬಿಟ್ಟು ಅಮೇರಿಕಾಕ್ಕೆ ಹೋಗಿ ಅರ್ಥಸಚಿವರು ಏನು ಸಾಧಿಸಬಲ್ಲರು? ಅವರ ಸ್ವಂತ ಖರ್ಚಿನಲ್ಲಿ ಹೋಗುವುದಾದರೆ ಎಲ್ಲಿ ಬೇಕಾದರೂ ಹೋಗಲಿ,

ಸರ್ಕಾರದ ಖರ್ಚಿನಲ್ಲಿ ಅಮೇರಿಕಾಕ್ಕೆ ಹೋಗುವ ಪ್ರಮೇಯವೇ ಇಲ್ಲವೆಂದು ಹೇಳ ಬಯಸುತ್ತೇನೆ. ಆಹಾರದ ವಿಷಯವಾಗಿ ಕೇಳಿದರೆ ಮಳೆ ಅಭಾವದಿಂದ ಆಗಿದೆ ಎಂದು ಮಂತ್ರಿಗಳು ಹೇಳುತ್ತಾರೆ. ದ್ವಿದಳ ಧಾನ್ಯದ ಉತ್ಪತ್ತಿ 44 ಪರ್ಸೆಂಟ್ ಇದ್ದದ್ದು 28 ಪರ್ಸೆಂಟ್ ಕಡಿಮೆಯಾಗಿದೆ. ಈ ರೀತಿ ಆಹಾರ ಧಾನ್ಯವನ್ನು ಭೂಮಿಯಿಂದ ಬೆಳೆಯುವುದಕ್ಕೆ ಮಳೆ ಬೇಕಾಗಿದೆಯೇ ಎಂದು ಕೇಳುತ್ತೇನೆ. ಇನ್ನು ಫ್ಯಾಕ್ಟರೀಸ್ ವಿಷಯದಲ್ಲಿ ಒಂದು ಮಾತು ಹೇಳ ಬಯಸುತ್ತೇನೆ. ತುಂಗಭದ್ರ ಸ್ಟೀಲ್ ಪ್ರಾಜೆಕ್ಟ್ ಲಿಮಿಟೆಡ್‌ನವರು ಎಂಟು ಗೇಟುಗಳನ್ನು ಫ್ಯಾಬ್ರಿಕೇಟ್ ಮಾಡುವ ಎರಡು ಆರ್ಡರ್‌ಗಳನ್ನು ಖಾಸಗಿಯವರಿಂದ ತೆಗೆದುಕೊಂಡರು. ಅದರಲ್ಲಿ 98 ಸಾವಿರ ರೂಪಾಯಿ ಲುಕ್ಸಾನ ಆಗಿದೆ ಎಂದು ಆಡಿಟ್ ರಿಪೋರ್ಟಿನಲ್ಲಿ ವರದಿಯಾಗಿದೆ. 1962 ರಲ್ಲಿ 98 ಸಾವಿರ ರೂಪಾಯಿ ಗಳ ಈ ಎರಡು ಆರ್ಡರ್‌ಗಳನ್ನು ತೆಗೆದುಕೊಂಡು 1963 ರಲ್ಲಿ ಈ ಕೆಲಸವನ್ನು ಪೂರೈಸಿದರು. ಆ ಕೆಲಸ ತೆಗೆದುಕೊಂಡಾಗ 8 ಸಾವಿರದ 500 ರೂಪಾಯಿಗಳ ಲಾಭವನ್ನು ಕಂಪನಿಯವರು ನಿರೀಕ್ಷಣೆ ಮಾಡಿದರು. ಆದರೆ ಕೆಲಸ ಪೂರೈಸಿದ ಮೇಲೆ ಲೆಕ್ಕ ತೆಗೆದುಕೊಂಡು ನೋಡಿದಾಗ್ಗೆ 94 ಸಾವಿರ ರೂಪಾಯಿ ನಷ್ಟವಾಗಿದೆ ಎಂದು ಗೊತ್ತಾಯಿತು. ಇದು ಬಹಳ ನಾಚಿಕೆಗೇಡಿನ ಪ್ರಸಂಗವಲ್ಲದೆ ಅವರ ಆಡಳಿತದ ಅಸಮರ್ಥತನವನ್ನು ಮತ್ತು ಬೇಜವಾಬ್ದಾರಿಯನ್ನು ಎತ್ತಿ ತೋರಿಸುತ್ತದೆ. ಈ ರೀತಿಯಾದ ನಷ್ಟಕ್ಕೆ ಅವರು ವಿವರವನ್ನು ಈ ರೀತಿಯಾಗಿ ನೀಡುತ್ತಾರೆ. ಕೂಲಿಗಾಗಿ ಜಾಸ್ತಿ ಖರ್ಚಾಗಿದೆ ನಾವು ಅಂದಾಜು ಮಾಡಿದ್ದು 37 ಸಾವಿರ ರೂಪಾಯಿ ಅದಕ್ಕೆ ಬದಲು 1 ಲಕ್ಷ 9 ಸಾವಿರ ಆಗಿದೆ ಎಂದು ಹೇಳುತ್ತಾರೆ. ಅವೆಲ್ಲವೂ ಕೆಲ ಅನೀರಿಕ್ಷಿತವಾದ ಖರ್ಚು ಬಂದದ್ದರಿಂದ ಈ ರೀತಿ ನಷ್ಟವಾಗಿದೆ ಎಂದು ಹೇಳುತ್ತಾರೆ.

ಇನ್ನೂ ಸೇಲ್ ಟ್ಯಾಕ್ಸ್‌ನ ವಿಷಯದಲ್ಲಿ ಹೇಳುವುದಾದರೆ ಬ್ಯಾಡಗಿ ಮೆಣಸಿನಕಾಯಿ ಮಾರ್ಕೆಟ್ ಒಂದರಿಂದಲೇ ಈ ವರ್ಷ ಮೂರುವರೆ ಲಕ್ಷ ಬರಬೇಕಾಗಿದ್ದ ಸೇಲ್ ಟ್ಯಾಕ್ಸ್ ನಷ್ಟವಾದ ಘಟನೆಯೊಂದನ್ನು ಇಲ್ಲಿ ವಿವರಿಸುತ್ತೇನೆ.

1956–57 ರಲ್ಲಿ, 78,61,800 ರೂ.

1957–58 ರಲ್ಲಿ, 71,91,100 ರೂ.

1958–59 ರಲ್ಲಿ, 70.14,420 ರೂ.

1959–60 ರಲ್ಲಿ, 96, 96,000 ರೂ.

1960–61 ರಲ್ಲಿ, 96, 95, 520 ರೂ.

1961–62 ರಲ್ಲಿ, 69,65,000 ರೂ.

1963–63 ರಲ್ಲಿ, 1,23,86,900 ರೂ.

1963–64, ರಲ್ಲಿ 94,77,960 ರೂ.

1964–65 ರಲ್ಲಿ 39,04,820 ರೂ.

1965–66 ರಲ್ಲಿ 1,50,79,200 ರೂಪಾಯಿಗಳ ವ್ಯವಹಾರವು ನಡೆದಿದೆ. ಇಷ್ಟೊಂದು ದೊಡ್ಡ ಪ್ರಮಾಣದಲ್ಲಿ ನಡೆಯುತ್ತಿರುವ ಬ್ಯಾಡಗಿ ಮಾರ್ಕೆಟ್‌ನಲ್ಲಿ – ಮೊನ್ನೆ ದಿವಸ ಯಾರು ಯಾರು ಟ್ಯಾಕ್ಸ್ ಕೊಡಬೇಕು ಎನ್ನುವ ಒಂದು ಜಿಜ್ಞಾಸೆ ಹುಟ್ಟಿತು. ರೈತನಿಗೆ ಸೇಲ್ ಟ್ಯಾಕ್ಸ್ ಇಲ್ಲ ಅಂದ ಮೇಲೆ ಕೊಳ್ಳುವವರು ಅಂದರೆ ದಲಾಲರು ಕೊಡಬೇಕು. ಆಗ ಕೊಡುವವರ ಮತ್ತು ಕೊಳ್ಳುವವರ ಏಜೆಂಟರಾದ ನಾವು ಕೊಡುವುದಿಲ್ಲ ಎಂದು ಹೇಳಿದರು.ಈ ಜಿಜ್ಞಾಸೆ ಬಗೆಹರಿಸುವುದರೊಳಗೆ 8 ದಿವಸವಾಯಿತು. ಆಗ ಸುಮಾರು 40 ಸಾವಿರ ಕ್ವಿಂಟಾಲ್ ಮೆಣಸಿನಕಾಯಿ ಎಲ್ಲಾ ಬೊಂಬಾಯಿ ಮಾರ್ಕೆಟ್‌ಗೆ ಹೋಯಿತು. 40 ಸಾವಿರ ಕ್ವಿಂಟಾಲ್ ಮೆಣಸಿನಕಾಯಿಂದ 3 ಪರ್ಸೆಂಟ್ ಟರ್ನ್ ಓವರ್ ಟ್ಯಾಕ್ಸ್ ಪ್ರಕಾರ ಮೂರುವರೆ ಲಕ್ಷ ರೂಪಾಯಿ ಬ್ಯಾಡಗಿ ಮಾರ್ಕೆಟ್ ಒಂದರಿಂದಲೇ ಸೇಲ್ಸ್ ಟ್ಯಾಕ್ಸ್ ನಷ್ಟ ಆಯಿತು. ಇದೊಂದೆ ಉದಾಹರಣೆಯಿಂದ ಆಡಳಿತ ಎಷ್ಟರಮಟ್ಟಿಗೆ ಕುಸಿದು ಬಿದ್ದಿದೆ ಎಂಬುದನ್ನು ಸ್ಪಷ್ಟವಾಗಿ ಕಾಣಬಹುದು. ಈಗಲಾದರೂ ಅರ್ಥಮಂತ್ರಿಗಳು ವಸೂಲಿಯಲ್ಲಿ ಲಿಕೇಜ ಇದೆ ಎಂದು ಮನಗಂಡಿದ್ದಾರೆಯೇ? ಇವೊತ್ತು ಸೇಲ್ ಟ್ಯಾಕ್ಸ್ ವಿಚಾರದಲ್ಲಿ ಆಡಳಿತ ದಕ್ಷತೆಯಿಂದ ಕೆಲಸ ಮಾಡಿದರೆ ಇನ್ನೂ ಹೆಚ್ಚಾಗಿ ಟ್ಯಾಕ್ಸ್ ವಸೂಲ್ಮಾಡಿಕೊಳ್ಳಬಹುದು. ಮಾನ್ಯ ಹಣಕಾಸಿನ ಮಂತ್ರಿಗಳು 1961–62ರಲ್ಲಿ ಪ್ರತಿಯೊಬ್ಬರ ತಲೆಯ ಮೇಲೆ 15 ರೂಪಾಯಿ ಇದೆ ಎಂದು ಹೇಳಿದ್ದಾರೆ. ಈವೊತ್ತು 27.36 ಆಗಿದೆ. ಇದನ್ನು ಯಾವ ಆಧಾರದ ಮೇಲೆ ಹೆಚ್ಚುವರಿ ಮಾಡಿದ್ದೀರಿ? ಈ ಬಡ್ಜೆಟ್‌ನ್ನು ನೋಡಿದರೆ ಬರೀ ಡಿಕ್ಸನರಿ ಆಫ್ ಫಿಗರ್ಸ್ ಎಂದು ಕಾಣುತ್ತದೆಯೇ ಹೊರತು ಬೇರೆ ಏನೂ ಇಲ್ಲ. ಆ ಸಾಮಾನ್ಯರ ಕಲ್ಯಾಣವೇ ನಮ್ಮ ಉದ್ದೇಶ. ಜನಗಳ ಹಿತವನ್ನು ಗುರಿಯೆಂದು ಹೇಳುತ್ತಾರಯೇ ಹೊರತು ಅದರಲ್ಲಿ ಹಿತ ಸಾಧನೆಯ ಗುರಿ ಏನೂ ಕಾಣ ಬರುವುದಿಲ್ಲ. ಇನ್ನು ವಿದ್ಯಾಭ್ಯಾಸದ ವಿಚಾರದಲ್ಲಿ ಮಾತನಾಡುವುದಾದರೆ, ಮುಖ್ಯ ಮಂತ್ರಿಗಳು ಹೇಳಿದರು ಟ್ರೈನಿಂಗ್ ಆದ ಉಪಾಧ್ಯಾಯರುಗಳ ಕೊರತೆ ಇದೆ ಎಂಬ ಕಾರಣದಿಂದ ಶಿಕ್ಷಕರ ನಿವೃತ್ತಿಯ ಅವಧಿಯನ್ನು 55ರಿಂದ 58 ಕ್ಕೆ ಏರಿಸಲಾಗಿದೆ ಎಂದು ಹೇಳಿದರು. ಬೆಂಗಳೂರು ಗ್ರಾಮಾಂತರ ಪ್ರದೇಶದ ಎರಡೂವರೆ–ಮೂರು ಸಾವಿರ ಜನ ಟ್ರೈನಿಂಗ್

ಆದ ಶಿಕ್ಷಕರು ಇದ್ದಾರೆ. ಅವರು ಮುಖ್ಯ ಮಂತ್ರಿಗಳಿಗೆ ಒಂದು ಮನವಿಯನ್ನು ಅರ್ಪಿಸಿದ್ದಾರೆ. ನನಗೂ ಕೂಡ ಅದೇ ರೀತಿ ಒಂದು ಪ್ರತಿ ಕಾಪಿಯನ್ನು ಕೊಟ್ಟಿದ್ದಾರೆ. ಇದರಂತೆಯೇ ಧಾರವಾಡ ಜಿಲ್ಲೆಯಲ್ಲಿ 3 ಸಾವಿರ ಜನ ಇದ್ದಾರೆ. ಹೀಗೆ 6–7 ಸಾವಿರ ಜನ ಶಿಕ್ಷಕರು ತರಬೇತಿ ಹೊಂದಿದವರು ಇದ್ದಾರೆ. ಸರ್ಕಾರ ನೇಮಕ ಮಾಡಿಕೊಳ್ಳುವುದಾದರೆ ಕೆಲವು ದಿವಸ ಅವಕಾಶಕೊಟ್ಟರೆ ನಾನು ಲಿಸ್ಟ್ ಕೊಡಬಲ್ಲೆ ಆಗಲಾದರೂ ತಕ್ಷಣ ಕೆಲಸವನ್ನು ಕೊಡುತ್ತೀರಾ ಎಂದು ಸವಾಲು ಹಾಕುತ್ತೇನೆ. ರಾಜ್ಯದಲ್ಲಿ 81 ಟ್ರೈನಿಂಗ್ ಸೆಂಟರ್ಸ್ ಇದ್ದರೂ ಮತ್ತೆ ಹೊಸದಾಗಿ ಪ್ರಾರಂಭಿಸುತ್ತಲೇ ಇದ್ದೀರಿ. ಅದರಿಂದ ಏನು ಪ್ರಯೋಜನ? Penny wise and pound foolish. ಅಂದರೆ "ಕುಂಬಳಕಾಯಿ ಗಾತ್ರದಷ್ಟು ತಲೆಯಲ್ಲಿ ನಿಂಬೆಯ ಹಣ್ಣಿನ ಬೀಜದಷ್ಟು ಬುದ್ದಿ" ಎಂದು ಅರ್ಥ. ಇನ್ನಾದರೂ ಸರ್ಕಾರವು ಸಕ್ರಮವಾದ ರೀತಿಯಲ್ಲಿ ಇದನ್ನು ಆಲೋಚನೆ ಮಾಡಬೇಕೆಂದು ಹೇಳಿ ತಮಗೆ ನಾನು ಕಳಕಳಿಯಿಂದ ಅರಿಕೆ ಮಾಡಿಕೊಳ್ಳುತ್ತೇನೆ.

ಅದೇ ರೀತಿ ವ್ಯವಸಾಯದಲ್ಲಿ ಹೆಚ್ಚು ಉತ್ಪತ್ತಿಯಾಗಬೇಕೆಂದು ನಮ್ಮ ಆಹಾರ ಮಂತ್ರಿಗಳು ಹೇಳುತ್ತಿದ್ದಾರೆ. ಆದರೆ ಈ ಫೌಂಡೇಶನ್ ಸೀಡ್ಸ್ ಹಾಕುವವರು ಒಂದು ಎಕರೆ ಹಾಕಿದರೆ, ಅದಕ್ಕೆ ನಾಲ್ಕು ಎಕರೆ ಕಮರ್ಸಿಯಲ್ ಸೀಡ್ಸ್ ಹಾಕಬೇಕೆಂದು ಕಾನೂನು ಇಟ್ಟಿದ್ದಾರೆ. ಇದು 50,100,150 ಎಕರೆ ಇರತಕ್ಕ ಜಮೀನುದಾರರಿಗೆ ಎಕರೆಗೆ 15–20 ಕ್ವಿಂಟಲ್ ಪ್ರಕಾರ ಬೆಳೆದು ತನ್ನ ಜೀವನಕ್ಕೆ ಬೇಕಾದಷ್ಟು ಆಸ್ತಿ, ಪಾಸ್ತಿಗಳನ್ನು ಮಾಡಬಹುದೇ ವಿನಾ ಜನಸಾಮಾನ್ಯರನ್ನು ಹಾಗೂ ಬಡ ರೈತರನ್ನು ಉದ್ಧಾರ ಮಾಡತಕ್ಕ ಯೋಜನೆಯಲ್ಲ. ನಾನು ನಾಲ್ಕು ಎಕರೆ ಫೌಂಡೇಶನ್ ಸೀಡ್ಸ್ ಹಾಕಿದ್ದೇನೆ. 16 ಎಕರೆಗೆ ಬೇಕಾಗಿರತಕ್ಕ 64 ಕೇಜಿ ಬೀಜಗಳನ್ನು 90 ರೂಪಾಯಿ ಕೊಟ್ಟು ಖರೀದಿ ಮಾಡಿದ್ದೇನೆ. ನಾನೇನು ಸಾಮಾನ್ಯವಾಗಿ ಟೀಕೆಗೋಸ್ಕರ ಇದನ್ನು ಹೇಳುತ್ತಿಲ್ಲ, ಅಧಿಕೃತವಾಗಿ ಹೇಳುತ್ತಿದ್ದೇನೆ. ಈ ರೀತಿಯಾಗಿ ಕಂಡೀಶನ್ ಹಾಕಿರುವುದರಿಂದ ಜನ ಸಾಮಾನ್ಯರಿಗೆ ಹೆಚ್ಚು ಉತ್ಪನ್ನ ಮಾಡುವುದಕ್ಕೆ ಅವಕಾಶವಿಲ್ಲ.

**ಶ್ರೀ ಟಿ ದೇವರಾಜ ಅರಸ್ (ಪಶು ಪಾಲನೆ, ಮೀನುಗಾರಿಕೆ , ವಾರ್ತಾ ಮತ್ತು ಪ್ರಚಾರ ಶಾಖೆಗಳ ಮಂತ್ರಿಗಳು):** ಈ ರೀತಿ ಹಾಕಿರುವುದರಿಂದ ಏನು ತೊಂದರೆ ಎಂದು ಹೇಳಿಲ್ಲ.

**ಶ್ರೀ ಮಹದೇವ ಗದಿಗೆಪ್ಪ ಬಣಕಾರ :** ಈಗ ಎರಡು ಎಕರೆ ಜೋಳ ಫೌಂಡೇಶನ್ ಸೀಡ್ಸ್ ಹಾಕಬೇಕಾದರೇ, ಎಂಟು ಎಕರೆ ಕಮರ್ಷಿಯಲ್ ಜೋಳ ಬಿತ್ತಲು ಅವನಿಗೆ

ಜಮೀನು ಬೇರೆ ಬೇಕು, ಇದು ಜಮೀನುದಾರರಿಗೆ ಅನೂಕೂಲವಾಗುವ ಹಾಗೆ ಇದೆ. ಆದ್ದರಿಂದ ಇದನ್ನು ಸಡಿಲಗೊಳಿಸುಬೇಕೆಂದು ಹೇಳುತ್ತೇನೆ.

ಇನ್ನು ಧಾರವಾಡ , ಬಿಜಾಪುರ ಮೊದಲಾದ ಕಡೆಗಳೆಲ್ಲ ಸ್ಕೂಲ್ ಬೋರ್ಡುಗಳ ಹಾವಳಿಯಿಂದ ಶಿಕ್ಷಕರು ಬದುಕುವ ಹಾಗೆ ಇಲ್ಲ. ಇಲ್ಲಿರುವ ನಮ್ಮ ಮಂತ್ರಿಗಳಾದ ಶ್ರೀ ನಾಡಗೌಡರು ಬಿಜಾಪೂರ ಜಿಲ್ಲಾ ಸ್ಕೂಲ ಬೋರ್ಡಿಗೆ ಬಹಳ ವರ್ಷಗಳಿಂದ ಅಧ್ಯಕ್ಷರಾಗಿದ್ದರು. ಈಗ ಮಂತ್ರಿಗಳಾದ ಮೇಲೆ ಅದಕ್ಕೆ ರಾಜೀನಾಮೆ ಕೊಟ್ಟಿದ್ದಾರೆ. ಅವರು ಶಿಕ್ಷಕರ ಕಷ್ಟ ಏನು ಎಂದು ನನಗಿಂತ ಚನ್ನಾಗಿ ಬಲ್ಲವರಾಗಿದ್ದಾರೆ. ಆದ್ದರಿಂದ ಶೀಘ್ರವಾಗಿ ಅವರು ಈ ವಿಚಾರದಲ್ಲಿ ಕ್ರಮ ಕೈಗೊಳ್ಳಬೇಕು. ಧಾರವಾಡ ಜಿಲ್ಲೆಯ ಸ್ಕೂಲ್ ಬೋರ್ಡಿನವರು ಈಗಾಗಲೇ ಶ್ರೀ ನಿಜಲಿಂಗಪ್ಪನವರ ನಿಧಿ ಮತ್ತು ಶ್ರೀ ಗುದ್ಲೆಪ್ಪ ಹಳ್ಳಿಕೇರಿಯವರ ನಿಧಿ. ಹೀಗೆ 5–6 ಸಾವಿರ ಶಿಕ್ಷಕರಿಂದ ಒತ್ತಾಯವಾಗಿ ಹಣ ವಸೂಲು ಮಾಡಿ ಹಣ ಸೇರಿಸಿದ್ದಾರೆ. ಶ್ರೀ ನಿಜಲಿಂಗಪ್ಪನವರ ನಿಧಿ ಬ್ಯಾಂಕಿನಲ್ಲೇ ಇದೆ. ಹಳ್ಳಿಕೇರಿಯವರ ನಿಧಿ ಬ್ಯಾಂಕಿನಲ್ಲಿಲ್ಲ. ಈ ಸ್ಕೂಲ ಬೋರ್ಡುಗಳಿಗೆ ಚುನಾವಣೆ ಆಗದೇ 10 ವರ್ಷಕ್ಕೂ ಮೇಲಾಯಿತು. ಕಾಂಗ್ರೇಸ್ ಬಾಲಬಡಕರನ್ನು ಸ್ಕೂಲ್ ಬೋರ್ಡ್‌ಗಳಿಗೆ ನಾಮಿನೇಟ ಮಾಡಿದ್ದಾರೆ. ಅವರು ಮೊನ್ನೆ ಸಾರ್ವತ್ರಿಕ ಚುನಾವಣೆಯಲ್ಲಿ ಶಿಕ್ಷಕರ ಮೇಲೆ ಪ್ರಭಾವ ಬೀರಿ ನಮ್ಮ ವಿರುದ್ಧ ಪ್ರಚಾರಕ್ಕೂ ಬಳಸಿದರು. ಸ್ವತ: ಮಂತ್ರಿಗಳೇ ಬಂದು ಏನನ್ನೂ ಮಾಡಲಾಗಲಿಲ್ಲ ಅಂದ ಮೇಲೆ, ಪಾಪ ಬಡಪಾಯಿ ಶಿಕ್ಷಕರಿಂದ ಏನು ಮಾಡಲು ಸಾಧ್ಯ? ಬರೇ ಕಾಂಗೇಸ್‌ನ ಕೆಲವು ವ್ಯಕ್ತಿಗಳನ್ನು ಅದಕ್ಕೆ ನಾಮಿನೇಟ್ ಮಾಡುವುದರಿಂದ ಆ ಬಡ ಶಿಕ್ಷಕರಿಗೆ ತೊಂದರೆ ಕೊಡಬಾರದೆಂದು ಹೇಳುತ್ತಿದ್ದೇನೆ.

ಇನ್ನೂ ಬ್ಯಾಡಗಿ ರೆಗ್ಯುಲೇಟೆಡೆ ಮಾರ್ಕೆಟ್‌ಗೆ ಚುನಾವಣೆಯಾಗದೇ 18 ವರ್ಷವಾಯಿತು. ಈ ಚುನಾವಣೆ ಮಾಡುವ ದಕ್ಷತೆಯು ಸರ್ಕಾರಕ್ಕೆ ಇಲ್ಲ. ಈ ಸರ್ಕಾರದ ಆಡಳಿತದ ಬಗ್ಗೆ ನಂಬಿಕೆಯೇ ಇಲ್ಲದಾಗ ಯಾರು ಈ ಮುಂಗಡ ಪತ್ರವನ್ನು ಒಪ್ಪಿಕೊಳ್ಳಬಹುದು? ಇವತ್ತಿನ ದಿವಸ ಈ ಪರಿಸ್ಥಿಯಲ್ಲಿ ನಾನು ಒಂದು ಕವಿತೆಯನ್ನು ಬರೆದಿದ್ದೇನೆ. ಇದನ್ನು ನಾನು ಓದಿ ನನ್ನ ಮಾತುಗಳನ್ನು ಮುಕ್ತಾಯಗೊಳಿಸುತ್ತೇನೆ.

ಯಾರು ಓ ರಕ್ಷಿಪರು ನಮ್ಮನು
ಬನ್ನಿಇದ್ದರೆ ಮುಂದಕೆ
ಎಲ್ಲರೊಂದಡೆ ಸೇರಿಕೊಂಡರು

ತಮ್ಮ ಸುಖ ದಾನಂದಕೆ
ಅನ್ನವಿಲ್ಲದೆ ಸತ್ತರೆಂದರೆ
ನಾಯಕರ ಮನ ಒಪ್ಪದು
ಇದ್ದು ಸತ್ತವರಂತೆ ಬದುಕುವ
ಬವಣೆ ಜನತೆಗೆ ತಪ್ಪದು
ಬಳಲ ಬಸವಳಿದೆಮ್ಮ ಬೆನ್ನಿಗೆ
ಹತ್ತಿನಿಂತಿದೆ ಹೊಟ್ಟೆಯು
ಬರಿಯ ಆಶ್ವಾಸನದ ಅನ್ನವ
ನುಂಡು ಬದುಕಿದ ಜನತೆಯು
ಕಣ್ಣು ಕಾಣದ ಹಾಗೆ ಬಾಳಿನ
ದಾನ ಮುತ್ತಿದೆ ಕತ್ತಲೆ
ಕರುಣೆ ಇಲ್ಲದ ಕರುಳ ಕೊರೆಯುತ
ಹಸಿವೆ ನಿಂತಿದೆ ಬತ್ತಲೇ
ಮುದ್ದು ಮಕ್ಕಳು ಹೆಣಕೆ ಮುತ್ತುವ
ಹದ್ದಿ ನೊಲು ಸುತ್ತರಚುತ
ಹಸಿವು ಅಮ್ಮಾ.... ಎನಲು ತಾಯಿಯು
ಸಾವನೆನಲುಮರುಗುತ
ಇಂತು ಇಂದಿನ ಜನತೆ ಇದ್ದರು
ಮಂತ್ರಿ ಮಾನ್ಯಗೆ ಸಂಭ್ರಮ
ಇವರ ನಂಬುಗೆ ಎಂಬುದೆಲ್ಲಿದೆ
ನಮ್ಮ ಪಾಲಿಗೆ ವಿಭ್ರಮ.

## 5th July 1967

Development of Ranebennur- Byadagi Road

**Sri.M.G.Banakar:** Will the minister for Public works be please to state;-

a) whether it  is not a fact that Ranebennur – Byadgi road is an important road connecting Ranebennur Taluks;

b) Whether it is not a fact that the said road also connects Byadgi-Rattihalli road via, Ranebennur, virekoppa,Sarvanda. Ukkunda, Belakeri, Joisrahalli, Bisalalli and Thimmenahalli;

c) if so, whether they would consider taking over this road under the Public works Department?

A, sri, virendra patil (minister for public works);-

a) No

b) yes

c) Will be considered at the appropriate time.

**ಶ್ರೀ ಎಂ.ಜಿ. ಬಣಕಾರ್:** ನಾನು ಕೇಳಿರುವ ಪ್ರಶ್ನೆಗೆ ಉತ್ತರವಾಗಿ ನಿಜವಲ್ಲವೆಂದು ಹೇಳಿದ್ದಾರೆ. ಅದು ಯಾವ ಅರ್ಥದಲ್ಲಿ?

**ಶ್ರೀ ವೀರೆಂದ್ರ ಪಾಟೀಲ್:** ರಾಣಿಬೆನ್ನೂರ– ಬ್ಯಾಡಗಿ ರಸ್ತೆಯು ರಾಣೀಬೆನ್ನೂರ ಮತ್ತು ಬ್ಯಾಡಗಿ ತಾಲೂಕುಗಳನ್ನು ಸೇರಿಸುವ ಮುಖ್ಯ ರಸ್ತೆಯಾಗಿರುವುದು ನಿಜವಲ್ಲವೆ ಎಂದು ತಾವು ಕೇಳಿದ್ದೀರಿ. ಇದಕ್ಕಿಂತ ಮುಖ್ಯವಾದ ರಸ್ತೆಗಳು ಬೇರೆ ಇವೆ.

**ಶ್ರೀ ಎಂ.ಜಿ ಬಣಕಾರ್:** ಆ ಮುಖ್ಯವಾದ ರಸ್ತೆಗಳು ಯಾವವು ಎಂಬುದನ್ನು ಹೇಳಿ.

**ಶ್ರೀ ವಿರೇಂದ್ರ ಪಾಟೀಲ್:** ಯಾವುದು ಎನ್ನುವುದಕ್ಕೆ ಬೇರೆ ಪ್ರಶ್ನೆಗಳನ್ನು ಹಾಕಿದರೆ ಒಳ್ಳೆಯದು.

**ಶ್ರೀ ಎಂ.ಜಿ. ಬಣಕಾರ್ :** ಇದು ಒಂದು ಮುಖ್ಯ ರಸ್ತೆಯಲ್ಲವೇ?

**ಶ್ರೀ ವೀರೆಂದ್ರ ಪಾಟೀಲ್ :** ನಿಮ್ಮ ದೃಷ್ಟಿಯಲ್ಲಿ ಮುಖ್ಯ ರಸ್ತೆಯಾಗಿರಬಹುದು.

**ಅಧ್ಯಕ್ಷರು:** ಅದನ್ನು ಒಂದು ಮುಖ್ಯ ರಸ್ತಯನ್ನಾಗಿ ಮಾಡಿ ಎಂದು ಹೇಳುತ್ತಾರೆ.

**ಶ್ರೀ ಎಂ.ಜಿ. ಬಣಕಾರ್:** ಈ ರಸ್ತೆಯು ರಾಣಿಬೆನ್ನೂರ, ವೀರಕೊಪ್ಪ, ಸರ್ವಂದ, ಉಕ್ಕುಂದ, ಬೆಳಕೇರಿ, ಜೋಯಿಸರಹಳ್ಳಿ, ಬಿಸಲಳ್ಳಿ ಮತ್ತು ತಿಮ್ಮೇನಹಳ್ಳಿಗಳ

ಮಾರ್ಗವಾಗಿ ಬ್ಯಾಡಗಿ, ರಟ್ಟಿಹಳ್ಳಿಯನ್ನು ಸೇರಲು 9 ಮೈಲುಗಳಾಗುತ್ತವೆ. ಇದರಿಂದ ಸುಮಾರು 12–13 ಹಳ್ಳಿಗಳ ಜನರಿಗೆ ಅನೂಕುಲವಾಗುತ್ತದೆ. ಇಲ್ಲದಿದ್ದರೆ ಹಲಗೇರಿ ಮೂಲಕ ಸುತ್ತಿಕೊಂಡು ಹೋಗಬೇಕು. ಇದರಿಂದ ಮತ್ತೆ 5 ಮೈಲು ಜಾಸ್ತಿಯಾಗುತ್ತದೆ ಆದ್ದರಿಂದ ಈ ರಸ್ತೆಯನ್ನು ಲೋಕೋಪಯೋಗಿ ಇಲಾಖೆಯುವರು ತೆಗೆದುಕೊಳ್ಳುವುದಕ್ಕೆ ಪ್ರಯತ್ನ ಮಾಡಬೇಕು.

**ಅಧ್ಯಕ್ಷರು :** ಮುಖ್ಯ ರಸ್ತೆಯಂದು ಹೇಳುತ್ತಾರೆ. ಪರೀಶಿಲನೆ ಮಾಡಿ.

**Sri. Veerendra Patil:** Very good , sir.

**ಶ್ರೀ ಎಂ.ಎಸ್.ಕೃಷ್ಣನ್ :** ಇಲ್ಲಿ ಮೂರನೆಯ ಪ್ರಶ್ನೆಗೆ ಉತ್ತರವಾಗಿ ಸೂಕ್ತ ಸಮಯದಲ್ಲಿ ಇದನ್ನು ಪರಿಶೀಲಿಸಲಾಗುವುದು ಎಂದು ಹೇಳಿದ್ದೀರಿ, ಅಂದರೆ ಈ ಸರ್ಕಾರ ಇರುವಾಗಲೇ ಪರೀಶೀಲಿಸುತ್ತೀರೋ ಅಥವಾ ಹೊಸ ಸರ್ಕಾರ ಬಂದ ಮೇಲೋ, ಇಲ್ಲವೇ ದುಡ್ಡು ಒದಗಿದಾಗಲೋ ಎಂಬುದನ್ನು ತಿಳಿಸಬೇಕು.

**ಶ್ರೀ ವೀರೆಂದ್ರ ಪಾಟೀಲ್ :** ಇದು ರೂರಲ್ ಕಮ್ಯೂನಿಕೇಶನ್ ರೋಡ್. ಆ ಜನರಿಗೆ ಕೆಲಸ ಸಿಗಲಿ ಎಂದು ಪರಿಹಾರ ಕಾಮಗಾರಿಯನ್ನು ಮಾಡಿಸುತ್ತಿದೇವೆ. ಅನೇಕ ಸದಸ್ಯರು ಅನೇಕ ರಸ್ತೆಗಳನ್ನು ಲೋಕೋಪಯೋಗಿ ಇಲಾಖೆಯವರು ವಹಿಸಿಕೊಳ್ಳಬೇಕೆಂದು ಹೇಳಿದ್ದಾರೆ. ಒಬ್ಬೊಬ್ಬರು ಹೇಳಿದಾಗಲೂ ಒಂದೊಂದು ಗೌರ್ನಮೆಂಟ್ ಆರ್ಡರ್ ಮಾಡುವುದಕ್ಕಾಗುವುದಿಲ್ಲ. ಯಾವ ಯಾವ ರಸ್ತೆಗಳನ್ನು ಸೇರಿಸಿಕೊಳ್ಳಬೇಕು ಎನ್ನುವ ಬಗ್ಗೆ ಒಂದು ಪಟ್ಟಿಯನ್ನು ತಯಾರು ಮಾಡುತ್ತಿದ್ದೇವೆ. ಆಪಟ್ಟಿ ತಯಾರಾಗುವ ಕಾಲಕ್ಕೆ ಈ ರಸ್ತೆ ಬಗ್ಗೆ ಪರೀಶೀಲಿಸಲಾಗುತ್ತದೆ.

Taking over of Byadgi- Tiluvalli Road By P.W.D

Q;- Sri M.G.BANAKAR (byadgi) ;-

Will the minister for public works be pleased to state

Whether they would contemplate taking over to Public Works Department the Byadgi - Tiluvalli Road via gummenahalli, Angragatti, Masunagi,Kalagonda, Tummur, Hirehalli, Chikkbasur and galipugi as the said Road provides communiciation facilities between Byadgi, Market and 15 to 20 villages which are on the eastern side?

A) sri ALUR HANUMANTHAPPA (Deputy Minister for minor Irrigation) [On behalf of Sri Veerendra patil ( minister for public works)

Will be considered at the appropriate time

**ಶ್ರೀ ಎಂ.ಜಿ. ಬಣಕಾರ್ :** ನನ್ನ ಪ್ರಶ್ನೆಗೆ ಉತ್ತರವಾಗಿ ಸೂಕ್ತ ಸಮಯದಲ್ಲಿ ಇದನ್ನು ಪರೀಶೀಲಿಸಲಾಗುವುದು ಎಂದು ಹೇಳಿದೆ. ಆದರೆ 20 ಹಳ್ಳಿಯ ಜನಗಳು ಬ್ಯಾಡಗಿ ಮಾರ್ಕೆಟಿಗೆ ಬರಬೇಕಾದರೇ ಸುಮಾರು 32 ಮೈಲಿಗಳ ಸುತ್ತಳತೆಯಿಂದ ಬರಬೇಕಾಗಿದೆ. ಕೆಲವರು 12 ಮೈಲಿಗಳಿಂದ ಬರಬೇಕಾಗಿದೆ. ನಿಮ್ಮ ಸೂಕ್ತಸಮಯ ಯಾವುದು? ಏಕೆಂದರೆ ಊರುಗಳು ಇಲ್ಲದ ಕಡೆಗಳೆಲ್ಲೆಲ್ಲಾ ಪಿ.ಡಬ್ಲ್ಯು.ಡಿ ರಸ್ತೆಗಳಾಗುತ್ತಿವೆ. ಅದು ಸರಿಯೇ?

**ಶ್ರೀ ಆಲೂರ ಹನುಮಂತಪ್ಪ :** ಮಾನ್ಯ ಸದಸ್ಯರು ಹೇಳತಕ್ಕ ವಿಷಯ ಬಹಳ ಪ್ರಾಮುಖ್ಯವಾದುದು. ಈ ರಸ್ತೆ ಅನೇಕ ಗ್ರಾಮಗಳಿಗೆ ಸಹಾಯವಾಗುವುದರ ಜೊತೆಗೆ ಜನಗಳು ಕೋರ್ಟು ಮತ್ತು ತಾಲೂಕು ಆಫೀಸುಗಳಿಗೆ ಬರಲು ಹತ್ತಿರವಾಗುವುದರಿಂದ ಇದನ್ನು ಮುಂದಿನ ಸಾರಿ ಗಮನದಲ್ಲಿಟ್ಟುಕೊಳ್ಳುತ್ತೇನೆ.

**ಶ್ರೀ ಎನ್. ಚಿಕ್ಕೇಗೌಡ:** ಕಳೆದ ಐದು ವರ್ಷಗಳಲಿ ಮಳೆ ಎಷ್ಟೆಷ್ಟು ಮೈಲಿಗಳ ರಸ್ತೆಯನ್ನು ಒಂದೊಂದು ತಾಲೂಕಿನಲ್ಲಿ ಪಿ.ಡಬ್ಲ್ಯೂ.ಡಿ ಯವರು ತೆಗೆದುಕೊಂಡಿದ್ದಾರೆ?

**ಶ್ರೀ ಆಲೂರು ಹನುಮಂತಪ್ಪ:** ಪ್ರತಿಯೊಂದು ತಾಲೂಕಿನಲ್ಲಿಯೂ ಎಷ್ಟೆಷ್ಟು ರಸ್ತೆಗಳನ್ನು ಪಿ.ಡಬ್ಲ್ಯು.ಡಿಯವರು ತೆಗೆದುಕೊಂಡಿದ್ದಾರೆಂದು ಹೇಳುವುದಕ್ಕೆ ಈಗ ಸಾಧ್ಯವಿಲ್ಲ.

**ಶ್ರೀ ಎಚ್ ಸಿದ್ದವೀರಪ್ಪ :** ಸೂಕ್ತ ಸಮಯವೆಂದರೆ, ಈಗ ನಿಮಗೆ ಸಮಯವಿಲ್ಲವೆ?

**ಶ್ರೀ ಆಲೂರ ಹನುಮಂತಪ್ಪ :** ಹೋದ ಬಾರಿ ರಸ್ತೆಗಳನ್ನು ತೆಗೆದುಕೊಂಡಿದ್ದು ಈಗಾಗಲೇ ಗೆಜೆಟ್ಟಿನಲ್ಲಿ ಪ್ರಕಟವಾಗಿದೆ. ಆದರೆ ಮುಂದಿನ ಡಿಸೆಂಬರ್ ಹೊತ್ತಿಗೆ ಎಷ್ಟು ರಸ್ತೆಗಳನ್ನು ತೆಗೆದುಕೊಳ್ಳುತ್ತೇವೆಂದು ಈಗ ಹೇಳುವುದಕ್ಕೆ ಸಾಧ್ಯವಿಲ್ಲ.

**ಶ್ರೀ.ಎಚ್.ಸಿದ್ದವೀರಪ್ಪ :** ಸೂಕ್ತ ಸಮಯದಲ್ಲಿ ಎಂದರೆ ನಿಮ್ಮ ಆಭಿಪ್ರಾಯದಲ್ಲಿ ಯಾವ ಕಾಲ?

**ಶ್ರೀ ಆಲೂರ ಹನುಮಂತಪ್ಪ :** ಸೂಕ್ತ ಸಮಯ ಬರುವವರೆಗೂ ಕಾಯಬೇಕು.

**ಶ್ರೀ ಎನ್.ಎಮ್. ಕೊಟ್ರ ಬಸವಯ್ಯ (ಸೋಗಿ)** : ತಾಲೂಕ ಬೋರ್ಡ್ ರಸ್ತೆಗಳನ್ನು ಲೋಕೋಪಯೋಗಿ ಇಲಾಖೆಯವರು ತೆಗೆದುಕಳ್ಳುವುದಕ್ಕೇನಾದರೂ ಪಾಲಸಿಯನ್ನು ಇಟ್ಟುಕೊಂಡಿದ್ದೀರಾ?

**ಶ್ರೀ ಆಲೂರ ಹನುಮಂತಪ್ಪ** : ಪಾಲಸೀಯೇನೋ ಇದೆ.ರಸ್ತೆಗಳು ಬಹಳ ಮುಖ್ಯವಾಗಿ ತಾಲೂಕು ಹೆಡ್ ಕ್ವಾರ್ಟರ್ಸ್‌ಗೆ ಹೋಗುವ ರಸ್ತೆಗಳಾಗಿರಬೇಕು. ಅಲ್ಲಿ ವಾಹನ ಸಂಚಾರ ಅತಿಯಾಗಿರಬೇಕು. ಎರಡು ಮೇಯಿನ ರಸ್ತಗಳಿಗೂ ಒಂದು ಲಿಂಕ್ ರೋಡಿಗೆ ಅನೂಕೂಲವಾಗಿರಬೇಕು ಮುಖ್ಯವಾಗಿ ಟೂರಿಸ್ಟ್ ಸೆಂಟರ್‌ಗೆ ಮತ್ತು ಯಾವುದಾದರೂ ಮುಖ್ಯವಾದ ಕ್ಷೇತ್ರ ಸ್ಥಳಗಳಿಗೆ ಪ್ರಾಮುಖ್ಯವಾಗಿರಬೇಕು– ಇವೆಲ್ಲವನ್ನೂ ಗಮನದಲ್ಲಿಟ್ಟುಕೋಡು ಅಂತಹ ಅನುಕೂಲಗಳನ್ನುಳ್ಳ ರಸ್ತೆಗಳನ್ನೇ ತಾಲೂಕು ಬೋರ್ಡ್ ರಸ್ತೆಗಳನ್ನಾಗಿ ತೆಗೆದುಕೊಳ್ಳುತ್ತೇವೆ.

**ಶ್ರೀ ಕೆ.ಎಂ.ಪುಟ್ಟಸ್ವಾಮಿ** : ಸ್ವಾಮಿ, ತಾಲೂಕು ಬೋರ್ಡ್ ರಸ್ತೆಗಳನ್ನು ಯಾವ ಯಾವ ತಾಲೂಕುಗಳಲ್ಲಿ ತಾಲೂಕು ಬೋರ್ಡಿನವರು ಮಾಡಿದ್ದಾರೆ. ಎಂಬುದನ್ನು ನೋಡುವುದಕ್ಕೆ ಮಾನ್ಯ ಮಾಂತ್ರಿಗಳೇನಾದರೂ ಆ ಕಡೆ ಹೋಗಿದ್ದಾರೆಯೇ? ಅಲ್ಲಿ ಕಷ್ಟ ನಷ್ಟಗಳು ಏನಿವೆ ಎನ್ನತಕ್ಕಂಥಹದ್ದು ತಮ್ಮ ಅವಗಾಹನೆಗೆ ಬಂದಿದೆಯೇ, ತಾವು ಏನಿದ್ದರೂ ದೊಡ್ಡ, ದೊಡ್ಡ ರೋಡುಗಳಿಗೆ ಮಾತ್ರ ಮಂತ್ರಿಗಳಾಗಿದ್ದೀರಾ ಅಥವಾ ಹಳ್ಳಿಗಳ ಕಡೆಗೂ ಮಂತ್ರಿಗಳಾಗಿದ್ದೀರಾ ಹೇಗೆ ಎಂಬುದನ್ನು ದಯವಿಟ್ಟು ತಿಳಿಸಬೇಕಾಗಿ ಪ್ರಾರ್ಥನೆ.

**ಶ್ರೀ ಆಲೂರ ಹನುಮಂತಪ್ಪ** : ಮಾನ್ಯ ಸದಸ್ಯರು ಆಯಾಯ ಸ್ಥಳಗಳ ಪ್ರಾಮುಖ್ಯತೆ ಯನ್ನು ಹೇಳುತ್ತಾರೆ. ಅಧಿಕಾರಿಗಳು ಇದ್ದಾರೆ, ತಾಲೂಕು ಬೋರ್ಡಿನವರು ಇದ್ದಾರೆ. ಸಾರ್ವಜನಿಕರಿಂದ ಬರತಕ್ಕ ಅಭಿಪ್ರಾಯಗಳೆಲ್ಲವನ್ನು ಶೇಖರಿಸಿ, ಮಂತ್ರಿಗಳು ಸಂಚಾರ ಮಾಡುವಾಗ ಯಾವುದು ಪ್ರಾಮುಖ್ಯ ಎನ್ನತಕ್ಕಂಥಾದ್ದನ್ನು ಗಮನದಲ್ಲಿಟ್ಟುಕೊಂಡು ಎಲ್ಲಾ ವಿಚಾರಗಳನ್ನು ಪರೀಶೀಲನೆ ಮಾಡಿ ಎಂತವುಗಳನ್ನು ತೀರ್ಮಾನ ಮಾಡಬೇಕಾಗುತ್ತದೆ.

Conversion of T.D. Board Road as state fund Road

**ಶ್ರೀ ಎಂ.ಜಿ. ಬಣಕಾರ್** : ಈಗಾಗಲೇ ಮದ್ದೂರಿನಿಂದ ಗೌನೂರವರೆಗೆ ಇದ್ದಂಥ ರೂರಲ್ ಕಮ್ಯೂನಿಕೇಶನ್ ರೋಡು ಪಿ.ಡಬ್ಲೂ.ಡಿ ರೋಡಾಗಿದೆ. ಅದೂ ಕೂಡ ತಮ್ಮ ಗಮನಕ್ಕೆ ಬಂದಿಲ್ಲವೇ?

**ಶ್ರೀ ಆಲೂರ ಹನುಮಂತಪ್ಪ** : ಅದು ಹೇಗೆ?

**ಶ್ರೀ ಎಂ.ಜಿ. ಬಣಕಾರ್ :** ತಮ್ಮ ಉತ್ತರದಲ್ಲಿ ಬಂದಿಲ್ಲ ಎಂದು ತಿಳಿಸಿದ್ದೀರಿ, ಯಾವುದು ಬಂದಿಲ್ಲ?

**ಶ್ರೀ ಆಲೂರ ಹನುಮಂತಪ್ಪ :** ಸ್ಟೇಟ್‌ಫಂಡ್ ರೋಡಿಗೆ ಮಾತ್ರ ನಾವು ಅನುಕೂಲ ಮಾಡಿಕೊಡುತ್ತೇವೆ, ಆದರೆ ಸ್ಟೇಟ್‌ಫಂಡ್ ರೋಡ ಅಲ್ಲದಿದ್ದರೂ ಅಂಥಾ ಕಡೆ ರೋಡುಗಳಿಗೂ ಸರ್ಕಾರದವರು ಅನುಕೂಲ ಮಾಡಿಕೊಡುವುದಕ್ಕೆ ಅವಕಾಶವಿರುತ್ತದೆಯೇ ಎಂದು ಮಾನ್ಯ ಸದಸ್ಯರು ಪ್ರಶ್ನೆ ಕೇಳಿದಕ್ಕೆ ಇಲ್ಲ ಎಂದು ಇದೆ. ಈಗ ಮಾನ್ಯ ಸದಸ್ಯರು ಹೇಳತಕ್ಕಂತ ರಸ್ತೆಯನ್ನು ದುರಸ್ತಿ ಮಾಡಿದೆ.

**ಶ್ರೀ ಎಂ.ಜಿ.ಬಣಕಾರ್ :** ಈಗ ಮದ್ದೂರಿನಿಂದ ಸುದಾಂಬಿಯವರೆಗೆ ಒಂದುವರೆ ಮೈಲಿ ರಸ್ತೆ ಆಗಿದೆ, ಉಳಿದಿರುವ ಇನ್ನೂ ಮೂರು ಮೈಲಿ ರಸ್ತೆಯನ್ನು ಪೂರೈಸಿದರೆ ಅನುಕೂಲವಾಗುತ್ತದೆ. ಆದ್ದರಿಂದ ಅದನ್ನು ಮಾಡಿಸುವುದಕ್ಕೆ ತಾವು ಆಲೋಚನೆ ಮಾಡುತ್ತೀರಾ?

**ಶ್ರೀ ಆಲೂರು ಹನುಮಂತಪ್ಪ :** ಅದನ್ನು ಗಮನದಲ್ಲಿಟ್ಟುಕೊಂಡು ಮಾಡುತ್ತೇನೆ.

QUESTION FOR ANSWER ON THE DAY

(But not taken up)

## Warehousing Corruption at Byadgi

Q: Sri MAHADEV BANAKAR ;-

Will the minister for development and Co- operation be pleased to state;-

a) whether the state ware housing Corporation have opened a ware house in Byadgi, which is a housing center;

b) whether it has come to their notice that difficutly is being experienced in storing the grains belonging to the ryots and also the grains produced under the levy system ;

c) Whether the regulated market authorities in Byadgi have also informed them about the giving of a vacant site free of cost for the purpose of constructing a warehouse?

A: Sri, P.M. NADAGOUDA ( Minister for development and Co-operation)

a) Warehousing facilities to Byadgi have been extended from the warehouse center at Haveri.

b) No

c) No

## ಗೃಹ ಇಲಾಖೆಯ ಕಾರ್ಯವೈಖರಿಗೆ ಬಣಕಾರ ಸಿಡಿಮಿಡಿ

**8th july 1967**

**Sri S.S.SHETTAR ( HUBLI) :** Mr, speaker, Sir, the policy is an instrument in the hands of the society ; it is not an instrument against the society. This instrument can be exploited by the state, no doubt. But, there is some defects in the present arrangement and what we see is that in some respects this instrument has been misused .No doubt,the present pay structure of the lowest officials is undesireable. It is not worth while merely to accuse the police officials that they are corrupt. In order to eradiacate this corruption, it is desirable that they should be paid a decent salary and then to expect good work from them. The strength of the police force is also too meager. The duty that is assigned, the present requirement of the society, needs that the force is to be increased.

As regards the need of the Hubli-Dharwad Corporation and Dharwad District, I need to say that just like in Bangalore city Corporation we also require the administration of police Commissioner , because when this City has been developed in to a Corporation. Many complications have developed , and therefore, we need this administration in Hubli- Dharwad Corporation.

Regarding the labour problem, I have to bring to the notice of the Hon'ble Minister that the agricultural labour have been neglected by our Government in almost all the fields. Child exploitation is there, exploitation of the labour is continuing, the factory empolyees are almost committing a breach of all the labour laws. But no effective stepts have been taken by the government to prevent this. If the labourers are neglected , Ifeel, Sir, that what happening today in Nxalbari may happen here also and the problem will go to the Ministery. So, we have to be more careful about this problem. Ihave an information that in Bangalore City Corporation it self the I.N.T.U.C organization has been swept away and so many bad elements have expect in, and those elements have growth because the labour laws have not been properly protected. There is one problem of undersigned labourers. Supposing there is aLabour Union.They can collectively bargain their demands.But, there are some clerks, some domestic servants, who could not organise themselves. You have to protect them.you have to see whether they are working only for 8 hours, whether they are exploited and whether a child is exploited and compelled to work. If you do not look to all these details and if they feel that are exploited, a day will come when a strong allegation will be leveled against you, and the police officials will not be able to solve this problem .Therefore, my humble request to you is that you have to take proper care of these things.

As regards the Jail administration ,of course, there are so many complaints about the food, health, etc. But, one important aspect is that the mental faculty of the criminals will have to be developed and moral lecturers should be arranged for the criminals. In this respect the Government is failing. Whatever

may be the food served, whether it is bad are good, when the criminal comes out of the Jail he must realise that the Jail is not a good place , and that he made a mistake in committing a crime and he should not once again repeat his mistake. This mental faculty should be developed; Jail is a miserable place. The criminal is not corrected there ; like a spider he falls in the same ditch.

With these suggestions, I thank you.

**ಶ್ರೀ ಎಂ.ಜಿ. ಬಣಕಾರ (ಬ್ಯಾಡಗಿ):** ಮಾನ್ಯ ಸಭಾಧ್ಯಕ್ಷರೇ, ಕಳೆದ ವರ್ಷಕ್ಕಿಂತ ಈ ವರ್ಷ ನೂರಕ್ಕೆ ನೂರು ಪಟ್ಟು ಹೆಚ್ಚುವರಿ ಬೇಡಿಕೆಯನ್ನು ಸಭೆಯ ಮುಂದೆ ಇಟ್ಟಂಥ ಈ ಗೃಹ ಶಾಖೆಯ ಡಿಮ್ಯಾಂಡನ್ನು ನಾನು ಹಾರ್ದಿಕವಾಗಿ ವಿರೋಧಿಸುತ್ತಾ, ಕೆಲವು ವಿಷಯಗಳನ್ನು ಗೃಹ ಮಂತ್ರಿಗಳ ಗಮನಕ್ಕೆ ತರಬಯಸುತ್ತೇನೆ. ನಾನು ಈ ಪೊಲೀಸ್ ಇಲಾಖೆಯ ಬಗ್ಗೆ ಆಸಕ್ತಿ ವಹಿಸಿದಂದಿನಿಂದ ಅಂದರೆ, ಸಾಮಾನ್ಯವಾಗಿ ಬೆಂಗಳೂರಿನಲ್ಲಿ ನಡೆದ ಬೇಲೂರ ಶ್ರೀನಿವಾಸ ಐಯ್ಯಂಗಾರರ ಕೊಲೆ ಮೊಕದ್ದಮೆ ಪ್ರಕರಣದಿಂದೀಚೆ ನೋಡಿದರೆ ವಿಚಾರಣೆ ಮಾಡುವುದರಲ್ಲಿ, ತನಿಖೆ ಮಾಡುವುದರಲ್ಲಿ ಸಕ್ರಮವಾಗಿ ವ್ಯವಹರಿಸುವಲ್ಲಿ ಪೊಲೀಸರು ಹೈ ಗೈ ಮಾಡುತ್ತಿದ್ದಾರೆ. ಪೊಲೀಸರು ಕೊಲೆ ಪ್ರಕರಣವನ್ನು ತನಿಖೆ ಮಾಡುವುದಕ್ಕಿಂತ ಮದ್ರಾಸಿನಿಂದ ಕರೆದುಕೊಂಡು ಬಂದ ನಾಯಿಗಳು ತೋರಿಸಿದ ಜಾಣ್ಮೆಯನ್ನು ನಮ್ಮ ಪೊಲೀಸ್ ಇಲಾಖೇ ಈವರೆಗೆ ತೋರಿಸಿಲ್ಲವೆಂಬ ಬಗ್ಗೆ ಸಖೇದಾಶ್ಚರ್ಯವನ್ನು ವ್ಯಕ್ತಪಡಿಸಿ – ಈ ಬಗ್ಗೆ ವಿಷಾದಿಸುತ್ತೇನೆ. ಆಡಳಿತ ಪಕ್ಷದವರು ಪೊಲೀಸ್ ಇಲಾಖೆಯನ್ನು ಜನರ ಹಿತ ಸಾಧನೆಗೆ, ಸಮಾಜ ಸುವ್ಯವಸ್ಥೆಗೆ ಬಳಸುತ್ತಿಲ್ಲ, ಮತ್ತು ಜನತೆಯ ಶಾಂತಿ ಕಾಪಾಡಿಕೊಂಡು ನಾಗರೀಕರ ಹಕ್ಕು ಬಾಧ್ಯತೆಗಳನ್ನು ರಕ್ಷಿಸಿಕೊಂಡು ಬರುವುದರ ಬದಲು ನೇರವಾಗಿ ಅವರು ತಮ್ಮ ಹಿತ ಸಾಧನೆ, ತಮ್ಮ ಪಕ್ಷದ ಹಿತಸಾಧನೆ ಮಾಡಿಕೊಳ್ಳುತ್ತಿದ್ದಾರೆ. ಇದಲ್ಲದೆ ಮಂತ್ರಿಗಳ ಭಾಷಣ ಕಾಲದಲ್ಲಿ ಪ್ರತಿಭಟಿಸುವ ಜನರನ್ನು ತುಳಿಯುವುದಕ್ಕೆ, ವಿದಾರ್ಥಿಗಳು ಫೀಜ ಕಡಿಮೆ ಮಾಡಿ ಎಂದು ಮೆರವಣಿಗೆ ತೆಗೆದರೆ ಅವರನ್ನು ಸೆದೆ ಬಡೆಯುವುದಕ್ಕೆ, ಜನರು ಅನ್ನ ಕೊಡಿ ಎಂದು ಕೇಳುವುದಕ್ಕೆ ಹೋದರೆ ಅಂಥವರನ್ನು ಬಗ್ಗು ಬಡಿಯುವುದಕ್ಕೆ ಪೊಲೀಸ್ ಇಲಾಖೆಯನ್ನು ಆಡಳಿತ ಪಕ್ಷದವರು ಉಪಯೋಗಿಸುತ್ತಿದ್ದಾರೆ. ಆ ಜನತೆಯ ಹಕ್ಕು ಬಾಧ್ಯತೆಗಳನ್ನು ಕಾಪಾಡುವುದಕ್ಕೆ ಸುವ್ಯವಸ್ಥೆಯನ್ನು ನೆಲಗೊಳಿಸುವುದಕ್ಕೆ ಆಡಳಿತ ಪಕ್ಷ ಪೊಲೀಸ್ ಇಲಾಖೆಯನ್ನು ಬಳಸುತ್ತಿಲ್ಲ ಎಂದು ಧೈರ್ಯದಿಂದ

ಹೇಳುಬಯಸುತ್ತೇನೆ. ಪೊಲೀಸ್ ಇಲಾಖೆಯಲ್ಲಿ ದಕ್ಷತೆ ನಿರ್ನಾಮವಾಗಿದೆ. ಹಾವೇರಿಯಲ್ಲಿ ನಡೆದ ಬಂಗಾರ ಕಳುವಿನ ಕೇಸು ಇದಕ್ಕೆ ನಿದರ್ಶನವಾಗಿದೆ. ಪೊಲೀಸ್ ಸ್ಟೇಷನ್‌ನಲ್ಲಿ ಭದ್ರವಾಗಿ ಇಡಲ್ಪಟ್ಟಂಥಹ "ಜಪ್ತಿ" ಬಂಗಾರ ಮಾಯವಾಗಿ ಅಲ್ಲಿ ಅದು ಕಬ್ಬಿಣವಾಯಿತು. ಬಂಗಾರ ಹೋಗಿ ಕಬ್ಬಿಣ ಬಂದಿತು. ಆದರೆ ಕಬ್ಬಿಣ ಪುನಃ ಬಂಗಾರವಾಗಲಿಲ್ಲ. ಇದರ ಅರ್ಥ ಏನು ಎಂದು ಗೃಹ ಮಂತ್ರಿಗಳನ್ನು ಕೇಳುತ್ತೇನೆ. ಪೊಲೀಸ್ ಸ್ಟೇಷನ್ನಿನ ರಕ್ಷಣಾ ಕವಚದಲ್ಲಿ ಇಡಲ್ಪಟ್ಟ ಬಂಗಾರ ಮಾಯವಾಗುತ್ತದೆ. ಅದರ ಬದಲು ಅಲ್ಲಿ ಕಬ್ಬಿಣ ಬರುತ್ತದೆ ಎಂದರೆ ನಿಮಗೆ ನಾಚಿಕೆಯಾಗುವುದಿಲ್ಲವೆ? ನಿಜವಾಗಿಯೂ ಆಡಳಿತ ಮಾಡತಕ್ಕಂಥವರಿಗೆ ಶಕ್ತಿ ಇಲ್ಲ ಎಂದು ತಿಳಿದುಬರುತ್ತದೆ. ಖಂಡಿತವಾಗಿ ಮಾನ್ಯ ರಾಮರಾಯರು ಗೃಹ ಮಂತ್ರಿಗಳಾಗಿ ಇರುವುದಕ್ಕೆ ಯೋಗ್ಯರಲ್ಲ ಎಂದು ಘಂಟಾಘೋಷವಾಗಿ ಹೇಳುತ್ತೇನೆ. ಅದೇ ರೀತಿ ನಮ್ಮ ಗಡಿ ರಕ್ಷಣೆಯನ್ನು ಸರಿಯಾಗಿ ಮಾಡದೇ ಇರುವುದರಿಂದ ಬೆಳಗಾಂವ, ಕಾರವಾರ, ನಿಪ್ಪಾಣಿ ಮೊದಲಾದ ಗಡಿ ಪ್ರದೇಶದಲ್ಲಿರುವ ಆರು ಲಕ್ಷ ಜನ ಕನ್ನಡಿಗರ ಜೀವನ ಭಯಗ್ರಸ್ಥವಾಗಿದೆ. ಆ ಜನತೆಯ ರಕ್ಷಣೆ ಮಾಡಿ ದೇಶದ ಮಾನವನ್ನು ಉಳಿಸಿರೆಂದು ಚಳುವಳಿ ಮಾಡಿದವರಿಗೆ ಗುಂಡು ಹಾರಿಸಿದಿರಿ. ಆದರೆ ಅನೀತಿಯಿಂದ ನಡೆಯುತಕ್ಕವರನ್ನು ದಂಡಿಸುವುದಕ್ಕೆ ಈ ಡಿಪಾರ್ಟಮೆಂಟ್‌ನಿಂದ ಆಗುತ್ತಿಲ್ಲ. ಇಂಥಹ ಮೇಲಿನ ಡಿಪಾರ್ಟಮೆಂಟಿಗೆ ಹಿಂದಿನ ವರ್ಷ 3ಕೋಟಿ ಬೇಡಿಕೆ ಇದ್ದುದನ್ನು ಈ ವರ್ಷ 7 ಕೋಟಿ ಮಾಡಲಾಗಿದೆ. 7 ಕೋಟಿ ಕೊಡುವುದಕ್ಕಾಗುವುದಿಲ್ಲ. ಏಳು ಕೋಟಿ ಕೊಡಲಿಲ್ಲ ಮೈಲಾರಲಿಂಗನ ಶನಿ ಬಗೆ ಹರಿಯಲಿಲ್ಲ ಎಂದು ಹೇಳುವ ಹಾಗೆ ಆಗಿದೆ. ಇನ್ನೊಂದು ಮಾತನ್ನು ಅವರಿಗೆ ಕೇಳುತ್ತೇನೆ. ದಾವಣಗೇರಿಯಲ್ಲಿ ಒಬ್ಬ ಪತ್ರಕರ್ತನು ಕೆಲವು ಕಾಂಗ್ರೆಸ್ ಮುಖಂಡರ ಮೇಲೆ ಅಪವಾದಾತ್ಮಕ ಟೀಕೆ ಮಾಡಿದ್ದಾನೆಂಬ ನೆಪದಿಂದ ಹೊಡೆದು ಅವಮಾನಗೊಳಿಸಿದ್ದಲ್ಲದೆ ನಾಯಿಯಂತೆ ದರದರ ರಸ್ತೆಯ ಮೇಲೆ ಎಳೆದುಕೊಂಡು ಹೋಗಿ ಬೇಲಿಯಲ್ಲಿ ಬೀಸಾಕಿದ್ದರು.ಆಗ ಸ್ವತಃ ಚಾಂಡಿಯವರು ಬಂದು ಇನ್‌ವೆಸ್ಟಿಗೇಷನ್ ಮಾಡಿದರು. ಇದರ ಬಗ್ಗೆ ಯಾರ ಮೇಲೆ ಕ್ರಮ ತೆಗೆದುಕೊಂಡಿರಿ?

[Mr.CHAIRMAN (Sri, S.D.KOTHAVALE) in the chair]

ಈ ಪ್ರಶ್ನೆ ಮುಂದೆ ಬರಲಿಲ್ಲ. ಎಲ್ಲ ಪೊಲೀಸ್ ಆಫಿಸರುಗಳು ಕಾಂಗ್ರೆಸ್ ಮುಖಂಡರ ಕೈವಾರಿಗಳಾಗಿದ್ದಾರೆ. ಇದು ನನ್ನ ಅನುಭವಕ್ಕೆ ಬಂದ ಮಾತು. ಚಿತ್ರದುರ್ಗದಲ್ಲಿ ಹಿಂದೆ ಒಬ್ಬ ಡಿ.ಎಸ್.ಪಿ ಯವರು ಮತ್ತು ಮುಖ್ಯ ಮಂತ್ರಿಗಳ ಖಾಸ ಅಳಿಯಂದಿರು ಹಾಗೂ ತಹಶೀಲ್ದಾರರು ಸೇರಿ ಚಿತ್ರದುರ್ಗ ಟಿ.ಬಿ ಯಲ್ಲಿ

ಬ್ರಾಂಡಿ ಕುಡಿಯುತ್ತಿದ್ದಾಗ ಆಗಿನ ಪೋಲೀಸ್ ಅಧಿಕಾರಿಯೊಬ್ಬರು ಅವರ ಮೇಲೆ ಕೇಸು ಹಾಕಿದರು. ಆದರೆ ಕರ್ತವ್ಯ ಪಾಲಿಸಿದ ಅಧಿಕಾರಿ , ಏಳೇಳು ಜನ್ಮದಲ್ಲಿ ನ್ಯಾಯವಾಗಿ ನಡೆಯುವವರಿಗೆ ಬೆಲೆಯಿಲ್ಲ. ಈ ರಾಜ್ಯದಲ್ಲಿ ಸ್ಥಾನವಿಲ್ಲ, ಎಂದು ಪಶ್ಚಾತ್ತಾಪ ಪಟ್ಟನೇ ವಿನ: ಪ್ರೋತ್ಸಾಹಿತನಾಗಲಿಲ್ಲ. ನಿಮ್ಮ ಆಡಳಿತದಲ್ಲಿ ಅನೇಕರಿಗೆ ಇಂತ ಅನುಭವಗಳು ಬರುತ್ತಿವೆ. ಆನೇಕ ಕಡೆ ಇಂಥ ಘಟನೆಗಳು ನಡೆಯುತ್ತಿವೆ.

**Sri ALLAM KARIBASAPPA (Karugod) :** Point of order,sir. The Hon'ble member said the Son-in-law of the chief minister drank brandy in T.B I want to know whether the present Chief minister was Chief minister then.

**ಶ್ರೀ ಎಂ.ಜಿ.ಬಣಕಾರ ;** ಇವತ್ತಿನ ಮುಖ್ಯಮಂತ್ರಿಗಳು.

**Mr. CHAIRMAN :** It may be a factual error. There is no point of order. The Hon'ble member may continue.

**ಶ್ರೀ ಎಂ.ಜಿ. ಬಣಕಾರ :** ಇಂದಿನ ಮುಖ್ಯ ಮಂತ್ರಿಗಳ ಅಳಿಯಂದಿರು ಈ ಸಂದರ್ಭದಲ್ಲಿ ಪೋಲೀಸ್ ಅಧಿಕಾರಿಗಳ ಮೇಲೆ ಮುಖಂಡರ ಮುಖಾಂತರ ಏನು ಬೇಕೋ ಅದನ್ನು ಮಾಡಿದರು. ದಕ್ಷತೆ ತೋರಿದ ಪೋಲೀಸ್ ದಕ್ಷತೆ ತೋರಿಸಿದ ಅಧಿಕಾರಿಗೆ ಶಹಬ್ಬಾಸಗಿರಿ ದೊರೆಯಲಿಲ್ಲ. ಇಂಥ ಅನ್ಯಾಯ ದೇಶದಲ್ಲಿ ಎಲ್ಲಿ ನೋಡಿದಲ್ಲಿ ನಡೆಯುತ್ತಿದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಸಿರಿಗೆರೆ ಮುಖ್ಯವಾದ ವಿದ್ಯಾ ಕೇಂದ್ರವಾಗಿದೆ. ಧರ್ಮದ ಸುಕ್ಷೇತ್ರವಾಗಿದೆ. ಅಲ್ಲಿ ಜವಾಬ್ದಾರಿ ಸ್ಥಾನದಲ್ಲಿರತಕ್ಕಂಥ ಸ್ವಾಮಿಗಳ ಮೇಲೆ ಅಪವಾದ ಕೊಡಬೇಕು, ಅವಳ ಧವಳ ಕೀರ್ತಿಯನ್ನು ಕಬಳಿಸಬೇಕೆಂದು  ಕೆಲವು ಸಿಬ್ಬಂದಿಯನ್ನು ಮೈಸೂರ ರಾಜ್ಯ ಸರ್ಕಾರ ಅಲ್ಲಿ ಇಟ್ಟಿದೆ. ಅಲ್ಲಿರುವ ಒಬ್ಬ ದಫೇದಾರನು ನೇರವಾಗಿ ಮುಖಂಡರ ಕೈವಾಡದಿಂದ ಬಹಳ ಅನ್ಯಾಯ ಮಾಡುತ್ತಿದ್ದಾನೆಂದು ನನ್ನ ಸ್ನೇಹಿತರು ವಿಧಾನ ಸಭೆಯಲ್ಲಿ ಕೂಡ ಹೇಳಿದರು. ಇದು ಮಾನ್ಯ ಗೃಹ ಸಚಿವರ ಗಮನಕ್ಕೆ ಬಂದಿದೆಯೇ? ಸಿರಿಗೆರೆಯಲ್ಲಿ ಯಾರು ಕೊಳ್ಳೆಹೊಡೆದಿದ್ದಾರೆ? ಅವರಿಂದ ದೇಶಕ್ಕೆ ಯಾವ ವಿಪತ್ತು ಬಂದಿದೆ? ಅಲ್ಲಿ ಯಾರ ಕೊಲೆ ಸುಲಿಗೆ ನಡೆದಿದೆ? ಯಾವ ಕಾರಣದಿಂದ ಪುಂಡಗಂದಾಯವನ್ನು ಆಕರಣಿ ಮಾಡುವ ಸೂಚನೆ ಮಾಡಿದ್ದೀರಿ? ರಾಜ್ಯದಲ್ಲಿ ಶಾಂತಿಗೆ ಭಂಗ ತರತಕ್ಕಂತಹ ದುರಾಡಳಿತ ನಡೆಸತಕ್ಕಂತಹ ಪುಂಡ ಕಂದಾಯ ಹಾಕತಕ್ಕಂತಹ ಈ ಇಲಾಖೆಯ ಡಿಮ್ಯಾಂಡನ್ನು ನಾವು ಒಪ್ಪುವದಕ್ಕಾಗುವುದಿಲ್ಲ. ಇಂದು ಜನತೆ ಜಾಗೃತವಾಗಿದೆ. ಬಡವರ ಆಸ್ತಿ ಪಾಸ್ತಿ ಯೋಗ ಕ್ಷೇಮ

ನೋಡಿಕೊಳ್ಳುವುದಕ್ಕಾಗಿ ಈ ಪೊಲೀಸ್ ಸಿಬ್ಬಂದಿ ಇರುವುದು. ಆದರೆ ಇಂದು ದುರ್ದೈವದಿಂದ ಯಾವ ಕೇಸೇ ಇರಲಿ ಅದು ಇನ್ವೆಸ್ಟಿಗೇಷನ್ನಿನಲ್ಲಿಯೇ ಉಳಿಯುತ್ತದೆ. ಇದಕ್ಕೆ ಬಹು ಮಟ್ಟಿಗೆ ಸ್ಥಳಿಯ ಕಾಂಗ್ರೆಸ್ ಮುಖಂಡರ ಕೈವಾಡವೇ ಕಾರಣ. ಇದರಿಂದ ಕೇಸು ಮುಂದಕ್ಕೆ ಹೋಗುತ್ತಿಲ್ಲ. ಒಬ್ಬ ಪೊಲೀಸ್ ಆಫೀಸರನ್ನು ಕೇಳಿದೆ. ಇದು ಹೇಗೆ ಏಕೆ ಆಗುತ್ತದೆಂದು, ಮೊನ್ನೆಯ ದಿವಸ ಒಬ್ಬ ಮನುಷ್ಯ ಕುಡಿದು ಗಲಾಟೆ ಮಾಡಿದ್ದಾನಲ್ಲ ಮುಂದೆ ಏನು ಮಾಡಿದಿರಿ ಎಂದು ಕೇಳಿದೆ. ಅವರು ಹೇಳಿದ್ದೇನೆಂದರೆ, ಇದರಲ್ಲಿ ಒಬ್ಬ ಎಂ.ಎಲ್.ಎ ಇಂಟರ್‌ಸೈಡ್ ಇದ್ದಾನೆ. ಅವರು ಮಂತ್ರಿಗಳಿಗೆ ಪೋನ್ ಮಾಡಿದರು. ಅದುದರಿಂದ ಏನೂ ಮಾಡುವುದಕ್ಕಾಗಲಿಲ್ಲ ಎಂದು ಹೇಳಿದರು. ಇಂಥ ಸಾವಿರಾರು ಉದಾಹರಣೆಗಳನ್ನು ಬೇಕಾದರೆ ಕೊಡುತ್ತೇನೆ. ಪೋಲೀಸ್ ಆಫೀಸ್‌ರರಿಗೆ ಶಕ್ತಿ ಕುಸಿದು ಬಿದ್ದಿದೆ ಎಂಬುದನ್ನು ನಾನು ಒಪ್ಪುವದಿಲ್ಲ. ಆಡಳಿತ ಸುಧಾರಿಸಬೇಕಾದರೆ, ಪೋಲೀಸ್ ಇಲಾಖೆ ದಕ್ಷತೆಯಿಂದ ಕೆಲಸ ಮಾಡಬೇಕಾದರೆ ಮುಖಂಡರ ಕೈವಾಡ ಅವರ ಆಡಳಿತದಲ್ಲಿ ಇರಕೂಡದು. ಇದು ಒಂದೇ ಮಾತನ್ನು ನಾನಿಂದು ಹೇಳಿದರೆ ಸಾಕು. ಇನ್ನು ಲಂಚದ ವಿಷಯದಲ್ಲಿ ಹೇಳುವುದಾದರೆ. ನಾನು ಹೇಳುವುದಕ್ಕೆ ತಯಾರಿಲ್ಲ. ಗೌರವ ಏನೂ ಎಂದರೆ ಲಂಚ. ಅದು ಅಲ್ಲೂ ಇದೆ. ಇಲ್ಲೂ ಇದೆ. ಎಲ್ಲಿ ಹೋದರೂ ಕಾಂಚಾಣಂ ಕಾರ್ಯಸಿದ್ದಿ; ಎನ್ನುವ ಕೊನೆಯ ತೀರ್ಮಾನಕ್ಕೆ ಬಂದಿದ್ದಾರೆ. ಚಾರ್ವಾಕರು ಒಂದು ಶ್ಲೋಕ ಹೇಳಿದ್ದಾರೆ. ಭಸ್ಮೀಭೂತಸ್ಯ ದೇಗಸ್ಯ ಪುನರಾಗಮನಂ ಕುತ: ತಸ್ಮಾತ್ ಸರ್ವ ಪ್ರಯತ್ನೇನ ಋಣ; ಕೃತ್ವಾ ಘೃತಂಪಿಬೇತ್ ಅಂದರೆ ಎಂಥಹ ಸುಂದರವಾದ ಶರೀರ ನಿನಗಿದೆ ಇದು ನಿನಗೆ ಇನ್ನೊಮ್ಮೆ ಲಭ್ಯವಾಗುತ್ತದೋ ಇಲ್ಲವೋ, ಆದ ಕಾರಣ ಈಗಲೇ ಸಾಲವನ್ನಾದರೂ ಮಾಡಿ ತುಪ್ಪವನ್ನು ಕುಡಿದು ಸುಖಪಡು ಮಗನೇ ಎನ್ನುವುದು ಇದರ ಅರ್ಥ. ಈ ರೀತಿ ರಾಜ್ಯದ ಭಂಡಾರವನ್ನು ಬರಿದು ಮಾಡಿ ಪೋಲೀಸ್ ಇಲಾಖೆಯನ್ನು ಕೈಯಲ್ಲಿಟ್ಟುಕೊಂಡು ನಿಮ್ಮ ಕೈವಾಡದಿಂದ ದಕ್ಷತೆ ನ್ಯಾಯ ನಿಸ್ಪ್ರಹತೆ ಯಾವುದೂ ದೊರಕುತ್ತಿಲ್ಲ. ಈ ಕೈವಾಡ ದಯವಿಟ್ಟು ಬಿಟ್ಟು ಬಿಡಿ. ತಮಗಂತೂ ಗೃಹ ಮಂತ್ರಿಗಳಾಗಿ ಇರುವ ಯೋಗ್ಯತೆ ಇಲ್ಲ. ಬದಲಾವಣೆ ಮಾಡಬೇಕು. ಸುವ್ಯವಸ್ಥೆಗೆ ಶಾಂತಿ ರಕ್ಷಣೆಗೆ ಮತ್ತು ಶಾಂತಿಪಾಲನೆಗೆ ಹಾಗೂ ಸಮಾಜದ ಸುಭದ್ರತೆಗೆ ಪೋಲೀಸ್ ಇಲಾಖೆಯನ್ನು ಬಳಸಬೇಕೆಂದು ಹೇಳಿ, ಇಷ್ಟು ಮಾತನಾಡಲು ಅವಕಾಶ ಕೊಟ್ಟ ಅಧ್ಯಕ್ಷರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

**ಶ್ರೀ ವಾಟಾಳ್ ನಾಗರಾಜ (ಚಿಕ್ಕಪೇಟ್):** ಸ್ವಾಮಿ, ಈ ಪೋಲೀಸ್ ಮಂತ್ರಿಗಳು ತಂದಿರತಕ್ಕ ಆಯವ್ಯಯವನ್ನು ಸಂಪೂರ್ಣವಾಗಿ ವಿರೋಧ ಮಾಡುತ್ತಾ ಜನ

ಇವೊತ್ತು ನಿಮ್ಮ ಮಟ್ಟಿಗೆ ಗೃಹ ಮಂತ್ರಿಗಳ ಬಗ್ಗೆ ಯಾವ ಒಂದು ಗೌರವವನ್ನು ಸೌಜನ್ಯತೆಯನ್ನು ಇಟ್ಟುಕೊಂಡಿದ್ದೇವೆ ಎಂದರೆ, ತಾವು ಜನತೆಯ ಮಂತ್ರಿಗಳಾಗದೆ ಪೋಲೀಸ್ ಅಧಿಕಾರಿಗಳ ಕೇವಲ ಒಂದು ಏಜೆಂಟ್‌ರಾಗಿ ಇದ್ದೀರಿ ಎಂದು ಹೇಳಿದರೆ ನಿಜವಾಗಿಯೂ ತಪ್ಪಾಗಲಾರದು. ತಾವು ಹಿಂದೆ ಎಕ್ಸೈಜ್ ಮಂತ್ರಿಗಳಾಗಿದ್ದೀರಿ, ಆಗ ಒಬ್ಬ ಎಕ್ಸೈಜ್ ಕಂಟ್ರಾಕ್ಟರನ್ನೂ ತಮ್ಮ ಮನೆ ಹತ್ತಿರ ಸೇರಿಸುತ್ತಾ ಇರಲಿಲ್ಲ. ಕಟ್ಟುನಿಟ್ಟಾಗಿ ಧೈರ್ಯದಿಂದ ನಡೆದುಕೊಳ್ಳುತ್ತಿದ್ದೀರಿ ಎಂದು ಅನೇಕರು ಹೇಳುತ್ತಾ ಇದ್ದರು. ನಾನು ಆ ಮಾತನ್ನು ಕೇಳುತ್ತಿದ್ದೆ. ಇವೊತ್ತಿನ ದಿವಸ ಅದೇ ಶ್ರೀ ಮಾನ್ಯ ರಾಮರಾಯರು ಪೋಲೀಸ್ ಮಂತ್ರಿಗಳಾದ ಮೇಲೆ ಏತಕ್ಕೆ ಈ ರೀತಿ ಇದ್ದಾರೆ. ಯಾವ ದೇವರು ಅವರಿಗೆ ಆರೀತಿ ಬುದ್ಧಿಕೊಟ್ಟನೋ ಅವನೇ ಕಾಪಾಡಬೇಕು! ನೀವು ಈ ರೀತಿ ಆಗುತ್ತಾ ಇರಲಿಲ್ಲ. ಯಾರೋ ನಿಮಗೆ ಮಾಟ ಮಾಡಿಸಿದ್ದಾರೆ. ಯಾರದೋ ಮಾಯಾಜಾಲಕ್ಕೆ ಬಿದ್ದುಬಿಟ್ಟಿದ್ದೀರಿ. ದಯವಿಟ್ಟು ಆರು ತಿಂಗಳು ವಿಶ್ರಮಿಸಿ ಯಾವ ಇಲಾಖೆಯನ್ನು ತಗೆದುಕೊಳ್ಳದೆ ಪೋಲೀಸ್ ಅಧಿಕಾರದಿಂದ ಕಾಂಗ್ರೆಸ್ ಆಡಳಿತದಿಂದ ಕಾಂಗ್ರೆಸ್ ಪಕ್ಷದಿಂದ ದೂರವಿದ್ದು ತಪಸ್ಸು ಮಾಡಿ ಬಂದರೆ, ಆಗ ನಿಮಗೆ ರಾಜ್ಯಕ್ಕೆ ಗೌರವ, ಘನತೆ ಬರುತ್ತದೆ.ಇಂತಹ ಪೋಲೀಸರ ಮತ್ತು ಕಾರ್ಮಿಕರ ಇಲಾಖೆಯನ್ನು ನೀವು ಇಟ್ಟುಕೊಂಡು ಅಲ್ಲಿ ಲೂಟಿ, ಅನ್ಯಾಯ, ಲಂಚ ಅವು ತುಂಬಿ ಹೋಗಿರುವಾಗ ಇದನ್ನು ಯಾವ ರೀತಿ ಬಿಡಿಸಬೇಕು, ಪೋಲೀಸ್ ಇಲಾಖೆಯನ್ನು ಯಾವ ರೀತಿಯಾಗಿ ಸರಿ ಮಾಡಬೇಕು ಎಂದು ಅರ್ಥವಾಗುತ್ತಾ ಇಲ್ಲ. ಕೆಳಗಿನಿಂದ ಫೈಲು ಬರುತ್ತದೆ. ಪೋಲೀಸ್ ಅಧಿಕಾರಿಗಳು ಅವರು ಹೇಳಿದ್ದು ಸರಿ ಎಂದು ಹೇಳುತ್ತಾರೆ. ಪೋಲೀಸ್‌ರು ಹೇಳಿದಂತೆ ನೀವು ನಡೆದುಕೊಳ್ಳುತ್ತೀರಿ. ಆ ರೀತಿ ಆಗುತ್ತದೆಯೇ ಹೊರತು ನೀವು ಹೇಳಿದ ರೀತಿ ನಡೆದುಕೊಂಡ ಒಂದು ನಿದರ್ಶನವಾದರೂ ಇಲ್ಲ. ನೀವು ಪ್ರತ್ಯಕ್ಷವಾಗಿ ಮಾಡಿರುವುದು ಯಾವುದಾದರೂ ಇದೆಯೇ? ಇಲ್ಲ. ನಿಮ್ಮ ಬಗ್ಗೆ ಬಹಳ ಗೌರವವನ್ನು ಇಟ್ಟುಕೊಂಡಿದ್ದೆ. ಆದರೆ ಪೋಲೀಸ್ ಇಲಾಖೆ ನಿಮ್ಮ ಕೈಗೆ ಬಂದ ಮೇಲೆ ನಿಮಗೆ ಎಷ್ಟು ಗೌರವ ಕೊಡಬೇಕು ಎಂದು ಮನಸ್ಸು ಮಾಡಿದರೂ, ಅವರಿಗೆ ಗೌರವ ಕೊಡಬೇಡ, ಅವರಲ್ಲಿ ದಕ್ಷತೆ ಇಲ್ಲ, ಅವರು ಪೋಲೀಸ್ ಏಜೆಂಟ್‌ರಾಗಿದ್ದಾರೆ, ಎಂದು ನನ್ನ ಮನಸ್ಸು ಹೇಳುತ್ತಿದೆ. ಇದನ್ನು ನೋಡಿದರೆ ನನಗೆ ವ್ಯಥೆ ಆಗಿದೆ. ತಾವು ಕೇಸುಗಳನ್ನು ಹಾಕುತ್ತೀರಿ ಆದರೆ ಆ ಕೇಸುಗಳನ್ನು ಹೇಗೆ ವಿತ್‌ಡ್ರಾ ಮಾಡಿದ್ದಾರೆ. ಎನ್ನುವುದಕ್ಕೆ ಒಂದು ನಿದರ್ಶನ ಕೊಡುತ್ತೇನೆ. ಚಿಕ್ಕಪೇಟೆಯಲ್ಲಿ ಒಂದು ಜೂಜಿನ ಕಟ್ಟೆಯನ್ನು ರೇಡ್ ಮಾಡಿ ಪೋಲೀಸ್‌ನವರು ಹಾಕಿದಂತಹ

ಕೇಸನ್ನು ಒಬ್ಬ ಕಾಂಗ್ರೆಸ್ ಎಂ.ಎಲ್.ಎ ರೆಕ್‌ಮಂಡ್ ಮಾಡಿ, ಮಂತ್ರಿಗಳು ಇಂಟರ್ಫಿಯರ್ ಆಗಿ ಆ ಕೇಸನ್ನು ವಿತ್‌ಡ್ರಾ ಮಾಡಿದ್ದಾರೆ. ಇದಕ್ಕಿಂತ ನಾಚಿಕಿಗೇಡು ಯಾವುದು ಇದೆ?.

## 19th july 1967

## Leavy of punitive tax to sirigere village

Q, Sri M.G.BANAKAR (Byadgi) ;-

Will the minister for Home and Labour be pleased to state ;-

a) whether it is a fact that they have taken action to levy 'Pundugundya' to sirigere Village ,Davanageri Taluk:

b) if so, the reason for such levy?

A,- Sri M.V. RAM RAO(Minister for Home and Labour) ;-

a) Punitive tax has been levied

b) As Sirigere village among others, has been notified as a 'disturbed area' within the meaning of section 49 of the Mysore Police Act,1965

**ಶ್ರೀ ಎಂ.ಜಿ.ಬಣಕಾರ :** ಸಿರಿಗೆರೆ ಗ್ರಾಮದಲ್ಲಿ ಪುಂಡು ಕಂದಾಯವನ್ನು ಹಾಕಲು ಅಲ್ಲಿಯ ಸೂಪರಿಂಡೆಂಟ್ ಆಫ್ ಪೋಲೀಸ್‌ನವರು ಇಲ್ಲಿ ಯಾವುದೇ ತರಹದ ಗಲಭೇ ಇಲ್ಲ ಎಂದು ಸರ್ಕಾರಕ್ಕೆ ರಿಪೋರ್ಟ ಕಳಿಸಿರುವುದು ಸರಕಾರದ ಗಮನಕ್ಕೆ ಬಂದಿದೆಯೇ?

**Sri. M.V. RAM RAO :** It is not a fact

**ಶ್ರೀ ಎಂ.ಜಿ. ಬಣಕಾರ :** ಇದನ್ನು ಗಲಭೆ ಪ್ರದೇಶ ಎಂದು ಸಾರುವುದಕ್ಕೆ ಸಿರಿಗೆರೆಯ ಮಠದ ಅಧ್ಯಕ್ಷರಾದ ತರಳುಬಾಳು ಜಗದ್ಗುರುಗಳು ಇದಕ್ಕೆ ಕಾರಣರು ಎಂದು ಮಾಡಿದ್ದೀರಾ?

**Sri. M.V. RAM RAO:** Sir Several villages have been declared as disturbed area.sirigere village is one of them. There are a

number of persons concerned in subversive activities.There fore punitive tax is imposed.

**ಶ್ರೀ ಎಸ್. ಗೋಪಾಲಗೌಡ :** ಸಿರಿಗೆರೆಯ ಗ್ರಾಮದಲ್ಲಿ ಪುಂಡುಗಂದಾಯ ವಿಧಿಸಬೇಕು ಎಂದು ಪೋಲೀಸರು ಸರಕಾರಕ್ಕೆ ಸಲ್ಲಿಸಿರುವ ಎಲ್ಲ ವರದಿಗಳನ್ನು ಈ ಸಭೆಯ ಮುಂದೆ ಇಡುವುದಕ್ಕೆ ಸಾಧ್ಯವೇ?

**Sri.M.V. RAM RAO:** NO

**Sri K.H.PATIL:** What are the causes influencing the Government to come to the conclusion that it is a dangerous place under Section 49 of the Police Act?

**Sri M.V. RAM RAO:** I have no information.

**Sri. G. DUGGAPPA:** May I know when and since which year Government came to the conclusion that in their opinion sirigere and some other village are considered to be disturbed villages.

**Sri. M.V. RAM RAO:** It has been declared as disturbed area in 1966.

**Sri C.K. RAJAYYA SHETTY:** May Iknow the fine collected so far from these villages?

**Sri,M.V.RAM RAO:** No question of fine, but the cost of Police establishment located will be recovered as a punitive tax.

**ಶ್ರೀ ಎಂ.ಜಿ. ಬಣಕಾರ್:** ಸುಮಾರು ಇಪ್ಪತ್ತು ಸಾವಿರ ವಿದ್ಯಾರ್ಥಿಗಳು ವಿದ್ಯಾಭ್ಯಾಸ ಮಾಡುತ್ತಿರುವ ಈ ಕ್ಷೇತ್ರದಲ್ಲಿ ಸುಮಾರು 24 ಹೈಸ್ಕೂಲಗಳನ್ನು ನಡೆಸುತ್ತ ಇದ್ದಾರೆ ಮತ್ತು ಇಲ್ಲಿ ಒಂದು ಸುವ್ಯವಸ್ಥಿತವಾದ ರೀತಿಯಲ್ಲಿ ಎಲ್ಲ ಕೆಲಸ ಕಾರ್ಯಗಳೂ ಶಾಂತಿಯುತವಾಗಿ ನಡೆಯುತ್ತಿವೆ. ಇಂತವರ ಮೇಲೆ ಪುಂಡು ಕಂದಾಯ ವಿಧಿಸಿರುವುದು ರಾಜಕೀಯ ಉದ್ದೇಶಕ್ಕಾಗಿಯೇ ಎಂದು ಇಲ್ಲಿ ಚಾಲೆಂಜ್ ಮಾಡಿ ಹೇಳುತ್ತೇನೆ. ಇದಕ್ಕೇನು ಹೇಳುತ್ತೀರಿ?

**Sri M.V.RAM RAV:** Irepudiate that challenge.

## Development works in Byadgi

Q, Sri M.G.BANAKAR (Byadgi);-

Will the minister for Public Works be pleased to state ;-

a) the amount spent by them so far development works in Byadgi from the date of commencement of the P.W.D sub-Division office (detailed information may please be furnished)

b) the reason for not yet making this P.W.D Sub-Divison permanent one?

A,;- Sri, VEERENDRA PATIL (Minister for public Works)

| | Year | Amount spent |
|---|---|---|
| a) | 1961-62 | Rs 1,69,640 |
| | 1962-63 | Rs 3,96,334 |
| | 1963-64 | Rs 3,44,471 |
| | 1964-65 | Rs 3,10,456 |
| | 1965-66 | Rs,4,47,538 |
| | 1966-67 | Rs,3,45,355 |
| | Total ……….. | ----------------- |
| | | Rs 20,13,794 |

**2 pm**

**ಶ್ರೀ ಎಂ.ಜಿ. ಬಣಕಾರ :** 1961–62 ರಿಂದ 1966–67 ರವರೆಗಿನ ದೀರ್ಘಾವಧಿಯಲ್ಲಿ ಕೇವಲ 20,13,794 ರೂಪಾಯಿಗಳನ್ನು ವೆಚ್ಚ ಮಾಡಿ ಕೆಲಸಗಳನ್ನು ಮಾಡಿಸಲಾಗಿದೆ ಎಂದು ಹೇಳಿದ್ದಾರೆ. ಅಲ್ಲಿ ಕೆಲಸವಿಲ್ಲವೇನೋ ಅಥವಾ ಅಲ್ಲಿನ ಅಧಿಕಾರಿಗಳು ಸರಿಯಾದ ರೀತಿಯಲ್ಲಿ ಸರ್ಕಾರದವರು ಹಣ ಒದಗಿಸಿದ್ದು ಕಡಿಮೆ ರೀತಿಯಲ್ಲಿ ಕೆಲಸ ಮಾಡಿದ್ದಾರೆಯೋ?

**ಶ್ರೀ ವೀರೆಂದ್ರ ಪಾಟೀಲ :** ಪ್ರತಿಯೊಂದು ಸಬ್ ಡಿವಿಜನ್ನಿಗೂ ಸುಮಾರು ಆರೇಳು ಲಕ್ಷ ರೂಪಾಯಿ ವರ್ಕಲೋಡ್ ಇರುತ್ತದೆ. ನಾನು ಕೊಟ್ಟಂತಹ ಅಂಕಿ ಸಂಖ್ಯೆ ಬರೀ ಡೆವಲಪ್‌ಮೆಂಟ್ ಆಕ್ಟಿವಿಟೀಸ್ ಬಗ್ಗೆ ಇದೆ. ಡೆವಲಪ್‌ಮೆಂಟ್ ವರ್ಕ್‌ನಲ್ಲಿ ಮೆಂಟೇನನ್ಸ್, ರೀಪೇರ್ಸ್ ಮುಂತಾದವು ಬರುವುದಿಲ್ಲ ಅದನ್ನೂ ಸೇರಿಸಿಕೊಂಡರೆ, ಪ್ರತಿವರ್ಷ ಸುಮಾರು ಐದಾರು ಲಕ್ಷ ರೂಪಾಯಿವರೆಗೂ ಖರ್ಚಾಗಿದೆ.

**ಶ್ರೀ ಎಂ.ಜಿ. ಬಣಕಾರ್ :** ಮಾರ್ಚ ತಿಂಗಳಿನಲ್ಲಿ ಕೆರೆ ರೀಪೇರಿ ಎಂದು 40–50 ಸಾವಿರ ರೂಪಾಯಿಗಳನ್ನು ಖರ್ಚು ಹಾಕತಕ್ಕ ಪದ್ದತಿ ಪಬ್ಲಿಕ್ ವರ್ಕ್ಸ್ ಇಲಾಖೆಯಲ್ಲಿದೆ. ಇಡೀ ವರ್ಷ ಆಗದ ಕೆಲಸವನ್ನು, ಒಂದೇ ತಿಂಗಳಿನಲ್ಲಿ ಅಷ್ಟು ದುಡ್ಡಿನಲ್ಲಿ ಮಾಡುವುದಕ್ಕಾಗುತ್ತದೆಯೇ ಸ್ವಾಮಿ?

**ಶ್ರೀ ವೀರೆಂದ್ರ ಪಾಟೀಲ್ :** ಆ ರೀತಿ ಮಾಡಿದ್ದಾರೆಂದು ಮಾನ್ಯ ಸದಸ್ಯರು ನನ್ನ ಗಮನಕ್ಕೆ ತಂದರೆ, ಅದರ ಬಗ್ಗೆ ಪರಿಶೀಲನೆ ಮಾಡಿ ಕ್ರಮ ತೆಗೆದುಕೊಳ್ಳುತ್ತೇನೆ.

**ಶ್ರೀ ಎಂ.ಜಿ. ಬಣಕಾರ :** ತಾರೀಖು 1ನೇ ಏಪ್ರೀಲ್ 1967 ರಿಂದ ಒಂದು ವರ್ಷದ ಅವಧಿಯವರೆಗೆ ತಾತ್ಕಾಲಿಕವಾಗಿ ಆ ಸಬ್ ಡಿವಿಜನ್ ಅನ್ನು ಮುಂದುವರೆಸಲಾಗಿದೆ. ಎಂದು ಹೇಳಿದ್ದಾರೆ. ಅದನ್ನು ಖಾಯಂಗೊಳಿಸದೆ ಇರುವುದಕ್ಕೆ ಕಾರಣವೇನು ಎಂದು ಕೇಳಿದ್ದಕ್ಕೆ ಕೊಟ್ಟಿರುವ ಉತ್ತರ ಸಮರ್ಪಕವಾಗಿಲ್ಲ ಅನಿಸುತ್ತದೆ. ಯಾವಾಗ ಇದನ್ನು ಮಾಡುತ್ತೀರಿ ಮತ್ತು ಹಾಗೆ ಮಾಡದೇ ಇರುವುದಕ್ಕೆ ಕಾರಣವೇನು?

**ಶ್ರೀ ವೀರೆಂದ್ರ ಪಾಟೀಲ್ :** ಅನೇಕ ಸಬ್ ಡಿವಿಜನ್‌ಗಳು ಟೆಂಪೊರರಿಯಾಗಿ ಇವೆ. ಪಬ್ಲಿಕ್ ವರ್ಕ್ಸ್ ಇಲಾಖೆಯ ರೀ ಆರ್ಗನೈಜೇಷನ್ ಮಾಡಬೇಕು ಎನ್ನುವ ಪ್ರಪೋಸಲ್ ಸರ್ಕಾರದ ಮುಂದೆ ಇದೆ. ಈ ದಿಸೆಯಿಂದ ಒಬ್ಬ ಒಳ್ಳೆಯ ಇಂಜನೀಯರನ್ನು ನೇಮಕ ಮಾಡಲು ನಿರ್ಧಾರ ಮಾಡಿದ್ದೇವೆ. ಪೇ ಕಮಿಷನ್‌ಗೆ ರಿಪೋರ್ಟ್ ಕೊಡುವ ಸಲುವಾಗಿ ನೇಮಿಸುತ್ತೇವೆ. ಅವರ ವರದಿ ಬಂದಕೂಡಲೇ ಇಲಾಖೆಯನ್ನು ರೀ ಆರ್ಗ್‌ನೈಜ್ ಮಾಡುವ ಮುಂದೆ ಎಷ್ಟರ ಮಟ್ಟಿಗೆ ಖಾಯಂ ಮಾಡುವುದಕ್ಕಾಗುತ್ತದೆ, ಯಾವುದನ್ನು ತೆಗೆಯಬೇಕಾಗುತ್ತದೆ ಎನ್ನುವುದನ್ನು ವಿಚಾರ ಮಾಡಬೇಕಾಗುತ್ತದೆ.

**Mr. SPEAKER :** Question Hour is over. Now Short Notice Question NO.74.

## 24th july 1967

## Job- chart of Gramsevaks

**ಶ್ರೀ ಪಿ.ಎಂ. ನಾಡಗೌಡ :** ಈ ಗ್ರಾಮ ಸೇವಕರು ವ್ಯವಸಾಯ ಖಾತೆಗೆ ಬದಲಾದ ಮೇಲೆ ಅವರ ಜಾಬ್ ಚಾರ್ಟ್ ಎಷ್ಟಿತ್ತು ಸಹಕಾರಿ ಕ್ಷೇತ್ರದೊಳಗೆ ಅವರ ಕೆಲಸ ಏನಿತ್ತು ಆ ವಿಶಿಷ್ಟ ಡ್ಯೂಟಿಯನ್ನೂ ವ್ಯವಸಾಯ ಖಾತೆಗೆ ಬದಲಾಯಿಸಿದ್ದೇವೆ.

**Sri. H.C. LINGA REDDY:** May I know the additional item of work added to the job chart of the gramshevakas now ?

**ಶ್ರೀ ಎಂ.ಪಿ ನಾಡಗೌಡ:** ಈ ಗ್ರಾಮ ಸೇವಕರು ವ್ಯವಸಾಯ ಖಾತೆಗೆ ಬದಲಾದ ಮೇಲೆ ಅವರ ಚಾರ್ಟ್ ಎಷ್ಟಿತ್ತು ಸಹಕಾರಿ ಕ್ಷೇತ್ರದೊಳಗೆ ಅವರ ಕೆಲಸ ಏನಿತ್ತು ಆ ವಿಶಿಷ್ಟ ಡ್ಯೂಟಿಯನ್ನು ವ್ಯವಸಾಯ ಖಾತೆಗೆ ಬದಲಾಯಿಸಿದ್ದೇವೆ.

**Sri H.C.LINGAREDDY :** I wanted to know the reasons for the transfer of the gram sevakas from the Development Department to the control of the Agricultural Department : will the Hon'ble Minister kindly enlighten the House on this point?

**ಶ್ರೀ ಪಿ.ಎಂ.ನಾಡಗೌಡ :** 2,600 ಗ್ರಾಮ ಸೇವಕರು ಅಭಿವೃದ್ಧಿ ಕ್ಷೇತ್ರದೊಳಗೆ ಕೆಲಸ ಮಾಡುತ್ತಿದ್ದಾರೆ. ಒಕ್ಕಲುತನದ ಬೇಸಾಯದ ಕೆಲಸ ಚನ್ನಾಗಿ ನಡೆಯಬೇಕೆಂದು ಅವರನ್ನು ಬೇಸಾಯ ಖಾತೆಗೆ ನೇಮಕ ಆಗಿದೆ. ಬೇಸಾಯ ಖಾತೆಯೊಳಗೆ ಗ್ರಾಮೀಣದ ಒಕ್ಕಲುತನ ಅಭಿವೃದ್ಧಿಯಾಗಲಿಕ್ಕೆ, ಗ್ರಾಮಾಂತರ ಪ್ರದೇಶದಲ್ಲಿ ಕೆಲಸ ಮಾಡುವ ಗ್ರಾಮ ಸೇವಕರು ಯಾರೂ ಇದ್ದಿಲ್ಲ. ಅದರ ಸಲುವಾಗಿ ಅವರನ್ನು ವರ್ಗಾವಣೆ ಮಾಡಿದೆ. ಮತ್ತೊಂದು ಎಕಾನಮಿ ಮೆಷರ್ಸ್ ಎಂದು ಮಾಡಿದೆ. 2,600 ಮಂದಿ ಗ್ರಾಮಸೇವಕರು ಈಗ ಇದ್ದಾರೆ. ಒಕ್ಕಲುತನದ ಖಾತೆಯೊಳಗೆ ಮೂರು ಸಾವಿರ ಮಂದಿ, ಮತ್ತು ಅಭಿವೃದ್ಧಿ ಖಾತೆಯೊಳಗೆ ಮೂರು ಸಾವಿರ ಮಂದಿಯನ್ನು ನೇಮಕ ಮಾಡಬೇಕಾಗಿತ್ತು. ಅದರ ಬದಲು ಈಗ ಇರುವವರನ್ನೇ ಎರಡು ಕೆಲಸಕ್ಕೆ ಹಾಕಿದರೆ ಸರ್ಕಾರಕ್ಕೆ ಬಹಳ ಉಳಿತಾಯವಾಗುತ್ತದೆ ಮತ್ತು ಹೆಚ್ಚಿನ ಸಮರ್ಪಕವಾದ ರೀತಿಯಲ್ಲಿ ಜನರಿಗೂ ಸೌಕರ್ಯವಾಗುತ್ತದೆ ಎಂದು ಈ ತೀರ್ಮಾನವನ್ನು ಸರ್ಕಾರದವರು ತೆಗೆದುಕೊಂಡಿದ್ದಾರೆ.

**Sri DIGAMBAR RAO BALAVANT RAO :** Has it come to the notice of the Government that these Gram sevaks are including in local politics and doing no worth while work ?

**Sri P.M. NADAGOUDA :** No. Definitely no,sir.

**ಶ್ರೀ ಎಂ.ಎಚ್. ಜಯಪ್ರಕಾಶ ನಾರಾಯಣ್ :** ಗ್ರಾಮಸೇವಕರಿಗೆ ಎಲ್ಲಾ ವಿಧವಾದಂತಹ ಕೆಲಸಗಳನ್ನು ಒದಗಿಸಿದ್ದರಿಂದ ವ್ಯವಸಾಯ ಅಭಿವೃದ್ಧಿಗೆ ಅಷ್ಟು ಗಮನ ಕೊಡದೆ ಧಕ್ಕೆ ಬಂದಿದ್ದು?

**ಶ್ರೀ ಪಿ.ಎಂ.ನಾಡಗೌಡ :** ಎಲ್ಲಾ ಕಾರಣದಿಂದಲ್ಲ, ಅದೂ ಒಂದು ಕಾರಣವಿರಬಹುದು.

**ಶ್ರೀ ಎನ್. ಹುಚ್ಚ ಮಾಸ್ತಿಗೌಡ :** ವ್ಯವಸಾಯ ಕ್ಷೇತ್ರದಲ್ಲಿ ಈಗ ಮಾಡಬೇಕಾದ ಕೆಲಸಗಳ ವಿಷಯದಲ್ಲಿ ಅವರಿಗೆ ಸಾಕಾಗುವಷ್ಟು ಶಿಕ್ಷಣ ಕೊಟ್ಟಿದ್ದಾರೆಯೇ?

## 25th july 1996

## ವ್ಯವಸಾಯ ಮತ್ತು ಇಂಡಸ್ಟ್ರೀಸ್

**ಶ್ರೀ ಎಂ.ಜಿ.ಬಣಕಾರ (ಬ್ಯಾಡಗಿ) :** ಸನ್ಮಾನ್ಯ ಅಧ್ಯಕ್ಷರೇ, ಜನರಲ್ ಅಡ್ಮಿನಿಸ್ಟ್ರೇಷನ್, ವ್ಯವಸಾಯ ಹಾಗೂ ಇಂಡಸ್ಟ್ರೀಜ ಬಗ್ಗೆ ಡಿಮ್ಯಾಂಡುಗಳನ್ನು ಉಗ್ರವಾಗಿ ವಿರೋಧ ಮಾಡುತ್ತಾ ಕೆಲವು ಮಾತುಗಳನ್ನು ಈ ಸಭೆಯ ಮುಂದೆ ಇಡುವುದಕ್ಕೆ ಇಚ್ಛಿಪಡುತ್ತೇನೆ.

ಇದಕ್ಕಿಂತ ಪೂರ್ವದಲ್ಲಿ ಪ್ರತಿ ಸಲ ಕಾವ್ಯಗಳನ್ನು ಹೇಳುವಂತೆ ಹೇಳಿದೆ. ಇಂದಿನ ದುರ್ಭರ ಸನ್ನಿವೇಶಕ್ಕನುಗುಣವಾಗಿ ಈ ಸಭೆಯ ಮುಂದೆ ಕಾಳಿದಾಸನು ಹೇಳಿರುವ ಒಂದೇ ಒಂದು ಸುಸಂಸ್ಕೃತ ಪದ್ಯವನ್ನು ಹೇಳಬಯಸುತ್ತೇನೆ. ಅದು

ಇತರ ಕರ್ಮ ಫಲಾವಿ ಯದೃಚ್ಛಯಾ ಸಹೇ ಚತುರಾನನ

ಅರಸಿಕೇಷು ಕವಿತ್ವ ನಿವೇದನಂ ಶಿರಸಿ ಮಾಲಿಖ ಮಾಲಿಖ, ಮಾಲಿಖ....'

ಎಂದರೆ ಹೇ ವಿಧಿಯೇ, ನನ್ನ ಹಣೆ ಬರಹದಲ್ಲಿ ಏನೂ ಬೇಕಾದರೂ ಬರೆ, ಯಾವ ಅನಿಷ್ಟವನ್ನೇ ಬರೆ, ಆದರೆ ರಸಿಕರಲ್ಲದವರ ಕೈಯಲ್ಲಿ ನನ್ನ ಕಾವ್ಯವನ್ನು ಸಮರ್ಪಿಸುವ ದುರ್ದೈವವೊಂದನ್ನು ಮಾತ್ರ ಬರೆಯಬೇಡ ಎಂದು ಪ್ರಾರ್ಥಿಸಿಕೊಂಡಿದ್ದಾನೆ. ಅಂತೆಯೇ ನಾನು ಕೂಡ ಈ ದಿವಸ ಆ ವಿಧಿಯಲ್ಲಿ ಈ ರೀತಿ ಪ್ರಾರ್ಥನೆಯನ್ನು ಸಲ್ಲಿಸಿರುತ್ತೇನೆ.

ಹೇ, ವಿಧಿಯೇ ನನ್ನ ಹಣೆಬರಹದಲ್ಲಿ ಯಾವ ದುರ್ಭರ ಪ್ರಸಂಗಗಳನ್ನಾದರೂ ಬರೆ, ಸಹಿಸಿಕೊಳ್ಳುತ್ತೇನೆ. ಆದರೆ ವಿರೋಧ ಪಕ್ಷದ ಸದಸ್ಯರುಗಳು ನೀಡುತ್ತಿರುವ ರಚನಾತ್ಮಕ ಸಲಹೆ, ಸೂಚನೆಗಳನ್ನು ಗಣನೆಗೆ ತೆಗೆದುಕೊಳ್ಳದೆ ಕೇವಲ ಪಾಕ್ಷಿಕ ಮೌಢ್ಯತನದಿಂದ ಮೆರೆಯುತ್ತಿರುವ ಹಾಗೂ ಜನತೆಯ ಕಷ್ಟ ಕಾರ್ಪಣ್ಯಗಳನ್ನು ಅರಿತುಕೊಳ್ಳಲು ಅಸಮರ್ಥರಾಗಿರುವ ಈ ಮಂತ್ರಿಗಳ ಮುಂದೆ ನಿಂತು ಮಾತನಾಡುವ ದುರ್ದೈವವನ್ನು ಮಾತ್ರ ಇನ್ನು ಮುಂದೆ ನನ್ನ ಹಣೆಬರಹದಲ್ಲಿ ಬರೆಯ ಬೇಡವೆಂದು ಪ್ರಾರ್ಥನೆ ಸಲ್ಲಿಸಿ, ಕೆಲವು ವಿಚಾರಗಳನ್ನು ಮಾತ್ರ ಇಂದು ಈ ಸಭೆಯ ಮುಂದಿಡ ಬಯಸುತ್ತೇನೆ.

ನಿನ್ನೆಯ ದಿವಸ ಮಾನ್ಯ ಸದಸ್ಯರೊಬ್ಬರು 'ಚುಂಗ್ ಭತ್ತವನ್ನು ಬೆಳೆಯಲು ಕಪ್ಪು ಮಣ್ಣಿರುವ ಭೂಮಿ ಒಳ್ಳೆಯದೋ? ಅಥವಾ ಕೆಂಪು ಮಣ್ಣಿರುವ ಭೂಮಿ ಒಳ್ಳೆಯದೋ ಎಂದು ಕೇಳಿದ್ದಕ್ಕೆ ಮುಖ್ಯ ಮಂತ್ರಿಗಳು ಇದನ್ನು ವಿಚಾರಿಸಿ ಆ ಮೇಲೆ ಹೇಳುತ್ತೇನೆ' ಎಂದು ಉತ್ತರ ಕೊಟ್ಟರು. ಈ ರೀತಿ ಹೇಳುವುದಕ್ಕೆ ಅವರಿಗೆ ನಾಚಿಕೆ ಬರಬೇಕು. ತಾಯ'ಚುಂಗ ಭತ್ತದ ಬೆಳೆಗೆ ಕೆಂಪು ಅಥವಾ ಕಪ್ಪು ಮಣ್ಣಿನ ಭೂಮಿಯಲ್ಲಿ ಯಾವುದು ಒಳ್ಳೆಯದೆಂಬ ಪ್ರಾಥಮಿಕ ಜ್ಞಾನವೂ ಇಲ್ಲದ ಈ ಮುಖ್ಯ ಮಂತ್ರಿಗಳಿಗೆ ಈ ಖಾತೆಯನ್ನು ವಹಿಸಿಕೊಳ್ಳುವ ಯೋಗ್ಯತೆ ಇದೆಯಾ ಎಂದು ಕೇಳುತ್ತೇನೆ.

**ಶ್ರಿ ಎಸ್. ನಿಜಲಿಂಗಪ್ಪ :** ನಿನ್ನೆ ಯಾರು ಕೇಳಿದರು ನನಗೆ ಗೊತ್ತಿಲ್ಲ.

**ಶ್ರೀ ಎಂ.ಜಿ. ಬಣಕಾರ :** ನನಗೇಕೆ ಗೊತ್ತಿಲ್ಲ? ನಿಮಗೆ ಗೊತ್ತಿಲ್ಲ ಎಂದು ಹೇಳಿ. ನನಗೆ ಗೊತ್ತಿದೆ. ನಾನು ವ್ಯವಸಾಯಗಾರ, ಸ್ವಾಮಿ, ಮುಖ್ಯಮಂತ್ರಿಗಳಿಗೆ ವ್ಯವಸಾಯ ಇಲಾಖೆಯ ಗಂಧವೂ ಗೊತ್ತಿಲ್ಲ, ಇಲಾಖೆ ಅಧಿಕಾರಿಗಳಿಂದ ಕೇಳಿ ತಿಳಿದುಕೊಳ್ಳಲಿ. ವ್ಯವಸಾಯದ ಬಗ್ಗೆ ಏನೂ ತಿಳುವಳಿಕೆ ಇಲ್ಲದ ಮುಖ್ಯ ಮಂತ್ರಿಗಳ ಕೈಯಲ್ಲಿ ದೇವರಾಣೆಯಾಗಿಯೂ ಈ ಇಲಾಖೆ ಉದ್ಧಾರವಾಗುವುದಿಲ್ಲ.

**ಅಧ್ಯಕ್ಷರು :** ಶ್ರೀ ಬಣಕಾರರು ಸಭೆಯಲ್ಲಿ ದೇವರಾಣಿ ಮಾತ್ರ ಹಾಕಬಾರದು

**ಶ್ರೀ ಎಂ.ಜಿ. ಬಣಕಾರ :** ಆಗಲಿ, ಸ್ವಾಮಿ

ಸ್ವಾಮಿ, ಈ ವ್ಯವಸಾಯಕ್ಕೆ ಸಂಬಂಧಪಟ್ಟಂತೆ ನಾನು ಒಂದು ಮಾತನ್ನು ಹೇಳುತ್ತೇನೆ. ಅದೇನೆಂದರೆ 1965–66 ನೇ ಸಾಲಿನ ಅಡಿಟ್ ರಿಪೋರ್ಟಿನಲ್ಲಿ ಅಕೌಂಟಂಟ್ ಜನರಲ್ ಅವರು ಕೆಲವು ಲೋಪದೋಷಗಳನ್ನು ತೆಗೆದಿಟ್ಟಿದ್ದಾರೆ.

1953 ರಿಂದ 1965 ರವರೆಗೆ ಈ ರಾಜ್ಯದಲ್ಲಿ ನಾಲ್ಕು ದೊಡ್ಡ ನೀರಾವರಿ ಯೋಜನೆಗಳಿಗೆ, 12 ಸಾಧಾರಣವಾದ ನೀರಾವರಿ ಯೋಜನೆಗಳಿಗೋಸ್ಕರ ಈ ದೇಶದಲ್ಲಿ 84 ಕೋಟಿ 84 ಲಕ್ಷ ರೂಪಾಯಿಗಳನ್ನು ಖರ್ಚು ಮಾಡಿದ್ದಾರೆ. ಈ ಹಣವನ್ನು ಖರ್ಚು ಮಾಡುವ ಮುನ್ನ ವ್ಯವಸಾಯ ಇಲಾಖೆಯವರು ಈ ಯೋಜನೆಯಿಂದ 13 ಲಕ್ಷ ಎಕರೆ ಭೂಮಿ ನೀರಾವರಿ ಯಾಗುತ್ತದೆ. ಎನ್ನುವ ಮಾತನ್ನು ಜನತೆಯ ಮುಂದೆ ಇಟ್ಟಿದ್ದಾರೆ. ಆದರೆ, ಪರಿಣಾಮ ಏನಾಯಿತು ಎಂದರೆ ಆ ದುಡ್ಡು ಎಲ್ಲಾ ಖರ್ಚಾಯಿತು ನಾಲ್ಕು ಲಕ್ಷ ಎಕರೆ ಜಮೀನು ನೀರಾವರಿಯಾಗಿದೆ. ಇದು ಮಂತ್ರಿಗಳ ಗಮನಕ್ಕೂ ಬಂದಿದೆ ಈ ರೀತಿ ಆಗುವುದಕ್ಕೆ ಕಾರಣವೇನು? ಎಂದು ಕೇಳುತ್ತೇನೆ. ಇನ್ನು ಪ್ರತಿ ವರ್ಷವೂ ಸೆಪ್ಟಂಬರ್ ತಿಂಗಳಿನಲ್ಲಿ ಹಣಕಾಸಿನ ರಿಪೋರ್ಟ್ ಎಲ್ಲಾ ಇಲಾಖೆಗಳಿಂದಲೂ ಸರ್ಕಾರಕ್ಕೆ ಬರಬೇಕು ಎಂದು ಕಾನೂನು ಇದೆ, ಇದು ಸರ್ವವೇದ್ಯವಾದ ವಿಷಯ. 1964–65ನೇ ಸಾಲಿನಲ್ಲಿ ನಡೆದಿರುವ 16 ಪ್ರಾಜೆಕ್ಟುಗಳ ಹಣಕಾಸಿನ ಆಗುಹೋಗುಗಳ ವರದಿ ಸೆಪ್ಟಂಬರ್ ತಿಂಗಳು ಮೊದಲನೆ ವಾರದಲ್ಲಿ ಸರ್ಕಾರಕ್ಕೆ ಬಾರದೇ ಇದ್ದಾಗ ಮುಖ್ಯ ಮಂತ್ರಿಗಳು ಕಣ್ಣು ಮುಚ್ಚಿಕೊಂಡು ಕುಳಿತುಕೊಂಡಿದ್ದಾರೆ. ಮಂತ್ರಿಗಳಾಗಿ ಇವರಿಗೆ ಆಡಳಿತವನ್ನು ನಡೆಸುವುದಕ್ಕೆ ಯೋಗ್ಯತೆ ಇದೆಯೇ ಇವರಿಗೆ ಯೋಗ್ಯತೆ ಇಲ್ಲ ಎಂದು ಘಂಟಾಘೋಷವಾಗಿ ಹೇಳುತ್ತೇನೆ. ಇದೇ ರೀತಿಯಲ್ಲಿ 1965–66ನೇ ಸಾಲಿನ ಆಡಿಟ್ ವರದಿಯಲ್ಲಿ 299.69 ಲಕ್ಷ ರೂಪಾಯಿಗಳು, 2 ಕೋಟಿ 99 ಲಕ್ಷಗಳು ಇದಕ್ಕೆ ರಶೀದಿಗಳು ಬಂದಿಲ್ಲ ಎಂದು ಹೇಳಿದ್ದಾರೆ. ಮೂರು ಕೋಟಿ 48 ಲಕ್ಷ ರೂಪಾಯಿಗಳನ್ನು ಸರ್ಕಾರದ ಮಂಜೂರಾತಿ ಇಲ್ಲದೆ ಖರ್ಚು ಮಾಡಿದ್ದಾರೆ. 56,1400 ರೂಪಾಯಿಗಳು ಕಡಿಮೆ ಬಂದಿದೆ ಎಂದು ಆಡಿಟ್ ವರದಿಯಲ್ಲಿ ಹೇಳಿದ್ದಾರೆ. 1,14,761 ರೂಪಾಯಿಗಳನ್ನು ದುರ್ವ್ಯಯ ಮಾಡಿದ್ದಾರೆ. ಇದು ದುರಾಡಳಿತವಲ್ಲದೆ ಮತ್ತೇನು? ಇದೇ ರೀತಿಯಲ್ಲಿ 1961 ರಿಂದ 66ರವರೆಗೆ ಆಡಿಟ್ ವರದಿಯಲ್ಲಿ ಅಕೌಂಟಂಟ್ ಜನರಲ್ ಅವರು ಎಲ್ಲಾ ಇಲಾಖೆಗಳ ಬಗ್ಗೆಯೂ 1913 ಆಕ್ಷೇಪಣೆಗಳನ್ನು ಎತ್ತಿದ್ದಾರೆ. ಈ ಆಕ್ಷೇಪಣೆಗಳಿಗೆ ಸಮರ್ಪಕ ಉತ್ತರವನ್ನು ಕೊಡತಕ್ಕ ಎದೆಗಾರಿಕೆ ಈ ಮಂತ್ರಿ ಮಂಡಲಕ್ಕೆ ಇದೆಯೇ? ನಾನೇನೋ ವಿರೋಧಕ್ಕೋಸ್ಕರ ಈರೀತಿ ಹೇಳುತ್ತಿದ್ದೇನೆಂದು ನೀವು ತಿಳಿದುಕೊಳ್ಳಬಹುದು. ಖಂಡಿತವಾಗಿಯೂ ನಾನು ವಿರೋಧಕ್ಕಾಗಿ ಮಾತನಾಡುತ್ತಿಲ್ಲ. ರಾಜ್ಯದಲ್ಲಿ ನಡೆದ ದುರ್ವ್ಯವಹಾರಗಳ ಚಿತ್ರಗಳನ್ನು ಯಥಾಸ್ಥಿತಿಯಲ್ಲಿ ಮುಂದಿಡುತ್ತಿದ್ದೇನೆ.

ಆ ಮೇಲೆ ಈ ರಾಜ್ಯದಲ್ಲಿ ಹಣ ದುರ್ವ್ಯಯವಾಗಿರುವ ಇನ್ನೊಂದು ಸಂಗತಿಯನ್ನು ಹೇಳುತ್ತೇನೆ. ಅದೇನೆಂದರೆ ರಾಜ್ಯಪಾಲರ ಮನೆಯನ್ನು ಕಟ್ಟುವುದಕ್ಕೆ

20 ಲಕ್ಷ ರೂಪಾಯಿಗಳನ್ನು ಖರ್ಚು ಮಾಡಲು ಹೊಂಚು ಹಾಕಿದ್ದರು. ಆದರೆ ವಿರೋಧ ಪಕ್ಷದವರ ವಿರೋಧಕ್ಕೆ ಮಣಿದು ಸುಮ್ಮನಾದರು. ಇನ್ನು ಪ್ರಪಂಚದ ಗಣ್ಯ ವ್ಯಕ್ತಿಗಳಲ್ಲಿ ಒಬ್ಬರಾದ, ಮುತ್ಸದ್ದಿಗಳೆಂದು ಕೀರ್ತಿಪಡೆದಿರುವ ಮೈಸೂರಿನ ಶ್ರೀಮಾನ್ ಮಹಾರಾಜರು ಸಂಬಳವಿಲ್ಲದೆ ಪುಕ್ಕಟೆಯಾಗಿ ದೇಶದ ಹಿತದೃಷ್ಟಿಯಿಂದ ದುಡಿಯಲು, ದೇಶ ಸೇವೆ ಮಾಡಲು ಸಿದ್ಧರಾಗಿದ್ದಾರಲ್ಲದೇ ಕೆಲವು ಅಮೂಲ್ಯವಾದ ಸೇವೆ ಸಲ್ಲಿಸಿದರು. ಹೀಗಿರುವಾಗ ಬೇರೆಯವರನ್ನು ನಮ್ಮ ರಾಜ್ಯಕ್ಕೆ ರಾಜ್ಯಪಾಲರನ್ನಾಗಿ ನೇಮಿಸುವಂತಹ ಪ್ರಮೇಯ ಏನಿತ್ತೋ? ಅವರೇ ಒಂದು ಸಂದರ್ಭದಲ್ಲಿ ಹೇಳಿದ್ದರು."ನಾನು ಒಂದಿಷ್ಟು ಪುಸ್ತಕಗಳನ್ನು ಕಣ್ಣಿನಿಂದಲೂ ಸಹ ನೋಡಿಲ್ಲ" ಎಂದು ಇದು ನಿಜವಾಗಿಯೂ ಸ್ಪಷ್ಟವಾಗಿದೆ.

ಇನ್ನೊಂದು ವಿಷಯ ಇವೊತ್ತು ನಮ್ಮ ದೇಶಕ್ಕೆ ಒಂದು ಲಕ್ಷ 85 ಸಾವಿರ ಟನ್ ಗೊಬ್ಬರವನ್ನು ಪುರವಡಿ ಮಾಡಿದ್ದೇವೆ ಎಂದು ಬಜೆಟ್ಟಿನಲ್ಲಿ ತಿಳಿಸಿದ್ದಾರೆ. ಇದರಲ್ಲಿ ದಾವಣಗೇರಿ ಒಂದಕ್ಕೆ ಎಷ್ಟು ಟನ್ ಗೊಬ್ಬರವನ್ನು ಕೊಟ್ಟಿದ್ದಾರೆ ಎಂದರೆ ಇಡೀ ರಾಜ್ಯಕ್ಕೆಲ್ಲಾ ಎಷ್ಟು ಗೊಬ್ಬರಕ್ಕೆ ಲೈಸೆನ್ಸ್ ಕೊಟ್ಟಿದ್ದಾರೆಯೋ ಅದರ ಅರ್ಧ ಭಾಗದಷ್ಟು ಗೊಬ್ಬರದ ಲೈಸೆನ್ಸುಗಳನ್ನು ದಾವಣಗೇರಿ ಒಂದಕ್ಕೆ ಅವರ ಹಿಂಬಾಲಿಗರಿಗೆ ಕೊಟ್ಟಿದ್ದಾರೆ. ಅಮ್ಮಸಂದ್ರ ಸಿಮೆಂಟ್ ಫ್ಯಾಕ್ಟರಿಯ ಮ್ಯಾನೇಜಿಂಗ್ ಏಜೆಂಟರನ್ನು ಸರ್ಕಾರದವರು ತಮ್ಮ ಸ್ವಂತಕ್ಕಾಗಿ ಬಳಸಿಕೊಳ್ಳುತ್ತಿದ್ದಾರೆ ಅಲ್ಲದೆ, ಆ ಕಂಪನಿಗೆ ನಿಜಲಿಂಗಪ್ಪನವರ ಮಗನೇ ಏಜೆಂಟನಾಗಿದ್ದಾನೆ. ದೇಶದ ಹಿತ ದೃಷ್ಟಿಯಿಂದ ಆ ರೀತಿ ಮಾಡಬಾರದು ಈ ವಿಚಾರದಲ್ಲಿ ಎಮರ್‌ಸನ್ ಎನ್ನುವ ಒಬ್ಬ ಕವಿ ಒಂದು ಮಾತನ್ನು ಹೇಳಿದ್ದಾನೆ. ಅದು ಈ ರೀತಿ ಇದೆ. "Man must have the power of the devil, but not to be used as a devil." ಎಂದು. ರಾಕ್ಷಸನಂತಹ ಶಕ್ತಿ ಇರಲಿ. ಆದರೆ ಅದರಂತಹ ಪ್ರಯೋಗ ಮಾಡಿಕೊಂಡು ವಿರೋಧಿಗಳನ್ನು ಹತ್ತಿಕ್ಕಬೇಡಿ, ಬಡತನ, ನಿರುದ್ಯೋಗದಲ್ಲಿ ಲಕ್ಷ್ಯ ಇರಲಿ. ಸುಖಲೋಲುಪ್ತರಾಗಬೇಡಿ. ದೇಶದ ಭದ್ರತೆಯನ್ನು ಕಾಪಾಡಿಕೊಂಡು ಬರಬೇಕೆಂದು ನನ್ನ ಪ್ರಾರ್ಥನೆ. ಅಧ್ಯಕ್ಷರು ಮಾತನಾಡುವುದಕ್ಕೆ ಅವಕಾಶವನ್ನು ಕೊಟ್ಟಿದ್ದಕ್ಕಾಗಿ ಅವರಿಗೆ ವಂದಿಸಿ ನಾನು ನನ್ನ ಮಾತನ್ನು ಮುಗಿಸುತ್ತೇನೆ.

## 31st july 1967

## COMPENSATION TO LAND OWNERS

**ಶ್ರೀ ಎಂ.ಜಿ.ಬಣಕಾರ :** ಬ್ಯಾಡಗಿ ತಾಲೂಕಿನಲ್ಲಿ ಸ್ವಾಧೀನಪಡಿಸಿಕೊಳ್ಳಲಾಗಿರುವ ಜಮೀನುಗಳ ಮಾಲೀಕರಿಗೆ ಪರಿಹಾರ ಕೊಟ್ಟಿಲ್ಲ ಎಂದು ಉತ್ತರ ಹೇಳಿದೆ. ಪರಿಹಾರ

ನೀಡುವ ಯೋಚನೆ ಇದೆಯೇ? ಇದ್ದರೆ ಪರಿಹಾರವನ್ನು ಯಾವ ಕಾಲದಲ್ಲಿ ಕೊಡಲಾಗುವುದು.

**ಶ್ರೀ ಬಿ. ರಾಚಯ್ಯ (ಕಂದಾಯ ಮತ್ತು ಅರಣ್ಯ ಸಚಿವರು):** ಮೊದಲು ಪ್ರೈವೇಟ್ ನೆಗೋಷಿಯೇಶನ್ಸ್ ಮೂಲಕ ಜಮೀನು ಪಡಕೊಂಡಿದ್ದರಿಂದ ತಡವಾಗಿದೆ. ಕಾಂಪನ್‌ಷೇಷನ್ ಕೊಡಬೇಕು. ಎಂದು ಸರಕಾರದ ಉದ್ದೇಶವಿದೆ. ಒಂಭತ್ತು ತಿಂಗಳುಗಳಲ್ಲಿ ಕೆಲಸ ಪೂರೈಸಬೇಕು ಪರಿಹಾರ ಕೊಡಬೇಕು ಎಂದು ಟೈಂ ಲಿಮಿಟ್ ನಿಗದಿ ಮಾಡಿದೆ. ಈಗಾಗಲೇ 3,567 ರೂ.36 ಪೈಸೆ ಪರಿಹಾರ ಕೊಟ್ಟಿದೆ.

**ಶ್ರೀ ಜಿ.ರಾಮೇಗೌಡ :** ಆಕ್ವಿಜಿಷಿನ್ ಮಾಡತಕ್ಕ  ಕಾನೂನಿನಲ್ಲಿ ನೇರವಾಗಿ ಸರ್ಕಾರದವರು ವ್ಯವಹಾರ ಮಾಡಬೇಕು. ಜಮೀನ್ದಾರರ ಹತ್ತಿರ ಪ್ರೈವೇಟ್ ನೆಗೋಷಿಯೇಷನ್ ಮಾಡುತ್ತಿದ್ದೇವೆಂದು ಹೇಳಿದರು. ಹೀಗೆ ಮಾಡುವುದಕ್ಕೆ ಕಾನೂನಿನಲ್ಲಿ ಅವಕಾಶವಿದೆಯೇ?

**ಶ್ರೀ ಬಿ.ರಾಚಯ್ಯ :** ಎರಡು ಪಕ್ಷಗಳವರೂ ಒಪ್ಪಿಕೊಳ್ಳುವುದಾದರೆ ಹಾಗೆ ಮಾಡುವುದಕ್ಕೆ ಅಭ್ಯಂತರವಿಲ್ಲ.

**ಶ್ರೀ ಎಂ.ಜಿ. ಬಣಕಾರ :** ಸರ್ಕಾರ ಸ್ವಾಧೀನಕ್ಕೆ ಕೊಟ್ಟಿರುವ ಭೂಮಿಯ ಮೇಲೆ ಇರತಕ್ಕ ಕಂದಾಯವನ್ನು ಜಮೀನ್ದಾರರಿಂದ ಕಡ್ಡಾಯವಾಗಿ ವಸೂಲಿ ಮಾಡುತ್ತಿದ್ದು, ಈಚೆಗೆ ಕೆಲವರ ಮೇಲೆ ಕೇಸುಗಳನ್ನು ಕೂಡ ಹಾಕಿದ್ದಾರೆ. ಮತ್ತು ಅವರ ಸಾಮಾನುಗಳನ್ನು ಜಪ್ತಿ ಕೂಡ ಮಾಡಿದ್ದಾರೆ. ಇದು ಸರ್ಕಾರದ ಗಮನಕ್ಕೆ ಬಂದಿದೆಯೇ? ಅವರಿಗೆ ಸರ್ಕಾರದವರು ಕೊಡಬೇಕಾದ ಹಣ ಇದ್ದಾಗ್ಗೂ ಅವರಿಗೆ ಸರ್ಕಾರದವರು ಕಾಂಪೇನ್‌ಷೇಷನ್ ಹಣವನ್ನು ಕೊಡುವವರೆಗೂ ಅವರಿಂದ ವಸೂಲಿ ಮಾಡತಕ್ಕ ಕಂದಾಯವನ್ನು ತಡೆಹಿಡಿಯುತ್ತೀರಾ?

**ಶ್ರೀ ಬಿ. ರಾಚಯ್ಯ :** ಪರಿಹಾರ ಧನವನ್ನು ಕೊಟ್ಟಮೇಲೆ ಭೂಮಿ ನಮ್ಮ ಸ್ವಾಧೀನಕ್ಕೆ ಬರುತ್ತದೆ. ಆ ತಾರೀಖಿನಿಂದ ಕಂದಾಯವನ್ನು ವಜಾ ಮಾಡತಕ್ಕುದು ಕಾನೂನಿನಲ್ಲಿದೆ. ಇಲ್ಲಿ ಅವರು ಭೂಮಿಯನ್ನು ಕೊಡತಕ್ಕ ತಾರೀಖಿನವರೆಗೂ ರೆಂಟಲ್ ಕಾಂಪೇನ್‌ಷೇಷನ್ ಎಂದು ಗೊತ್ತು ಮಾಡಿದ್ದೇವೆ. ತಾತ್ಕಾಲಿಕವಾಗಿ ತಡೆ ಕೊಡುವುದಾದರೂ ಕೂಡ ಅವರಿಗೆ ಕೊಡುವ ಪರಿಹಾರ ಧನದಲ್ಲಿ ಮುರಿದುಕೊಂಡು ಕೊಡಬೇಕಾಗುತ್ತದೆ. ಕಂದಾಯವನ್ನು ತಾತ್ಕಾಲಿಕವಾಗಿ ವಸೂಲಿ ಮಾಡದಂತೆ ತಿಳಿಸುತ್ತೇವೆ.

## 2nd August 1967

## Primary Health Center at Honnatti

Q ;- Sri,M.G.BANAKAR (Byadgi) ;-

Will the minister for Health and Housing be pleased to state ;-

a) whether it has come to their notice that the staff of Primary Health Center in Honnatti and also the patients going for treatment to that Health Center are put to much hardship for want of necessary building to the Hospital.

b) if so, whether they would take action to construct a big building

**ಶ್ರೀ ಎಂ.ಜಿ.ಬಣಕಾರ :** ಹಣ ದೊರಕಿದ ಕೂಡಲೇ ಆರೋಗ್ಯ ಕೇಂದ್ರವನ್ನು ಹೊನ್ನತ್ತಿಯಲ್ಲಿ ನಿರ್ಮಿಸಲಾಗುವುದೆಂದು ಉತ್ತರದಲ್ಲಿ ಹೇಳಿದ್ದಿರಿ. 1968 ನೇ ಇಸವಿಯೊಳಗೆ ಈ ಬ್ಲಾಕ್‌ಗಳ ಮೊದಲನೆಯ ಹಂತ ಮುಕ್ತಾಯವಾಗುವಂತೆ ಕೆಲಸ ಪ್ರಾರಂಭ ಮಾಡದಿದ್ದರೆ ಕೇಂದ್ರದಿಂದ ಬರುವ ನೆರವು ಲ್ಯಾಪ್ಸ್ ಆಗುತ್ತದೆ ಎಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೆ.ಪುಟ್ಟಸ್ವಾಮಿ :** ಆ ರೀತಿ ಲ್ಯಾಪ್ಸ್ ಆಗುವುದಿಲ್ಲ.

**ಶ್ರೀ ಎಂ.ಜಿ.ಬಣಕಾರ :** ಈ ವರ್ಷದಲ್ಲೇ ಆದಷ್ಟು ಜಾಗ್ರತೆ ಕೆಲಸ ಪ್ರಾರಂಭ ಮಾಡುತ್ತೀರಾ?

**ಶ್ರೀ ಕೆ.ಪುಟ್ಟಸ್ವಾಮಿ :** ಈಗಾಗಲೇ ಪ್ಲಾನ್ ಆಂಡ್ ಎಸ್ಟಿಮೇಟ್ಸ್ ತಯಾರು ಮಾಡಿ ಸುಪರಿಂಟೆಂಡೆಂಟಿಂಗ್ ಇಂಜಿನಿಯರ್‌ಗೆ ಕಳಿಸಿಕೊಟ್ಟಿದ್ದಾರೆ. ಈ ಕೆಲಸ ಪ್ರೈಯಾರಿಟ್ ಲಿಸ್ಟ್‌ನಲ್ಲಿದೆ. ಈ ವರ್ಷದಲ್ಲೇ ಆಸ್ಪತ್ರೆಯ ಕಟ್ಟಡದ ಭಾಗವನ್ನು ಮಾಡಬೇಕೆನ್ನುವ ಅಭಿಲಾಶೆ ಸರ್ಕಾರಕ್ಕೆ ಇದೆ.

## AUGUST 1967

## Acquisition of Land By M.S.R.TC in Davanagere

Q ;- Sri, M.G.BANAKAR (Byadgi) ;-

Will the minister fot transport and Tourism be pleased to state ;-

a) whether it has come to their notice that the Mysore State Road Transport Corporation has required Holenurathota in Davanagere for the construction of a garage.

b) if so, whether compensation amount for the said place has been estimated;

c) the dimensions of the said place;

d) the stage at which the acquisition proceedings of the said place is pending.

A, ;- Sri MOHAMMED ALI (Minister for Transport and Tourism) ;-

a) Mysore state road corporation has only requested the Revenue Authorities to inisiative acquisition proceedings.

b) Does not arise in view of reply to clause (a).

c) A portion of the Holenurathota measuring 6.13 acres is proposed for acquisition

d) Initial stage.

**ಶ್ರೀ ಎಂ.ಜಿ. ಬಣಕಾರ :** ರೋಡ್ ಟ್ರಾನ್ಸಪೋರ್ಟ್‌ನವರು ಈ ಭೂಮಿಯನ್ನು ಸ್ವಾಧೀನ ಪಡಿಸಿಕೊಳ್ಳುವ ಬಗ್ಗೆ ಅಡ್ವೈಸರಿ ಬೋರ್ಡಿನಲ್ಲಿ ಏನಾದರೂ ತೀರ್ಮಾನ ತೆಗೆದುಕೊಂಡಿದ್ದಾರೆಯೇ?

**Sri. MOHAMMAD ALI :** All question of acquisition do not go before the Board.

**ಶ್ರೀ ಎಂ.ಜಿ. ಬಣಕಾರ್ :** ಈ ಬಗ್ಗೆ ತಮಗೆ ಪ್ರಪೋಸಲ್ ಕಳಿಸಿದವರು ಯಾರು?

**Sri MOHAMMAD ALI :** The proposal has been sent by the General Manager, Road Transport Department

**ಶ್ರೀ ಎಂ.ಜಿ.ಬಣಕಾರ್ :** ಅಜೆಂಡಾದಲ್ಲಿ ಈ ವಿಷಯ ಬಾರದೆ ಬೋರ್ಡಿನಲ್ಲಿ ತೀರ್ಮಾನ ತೆಗೆದುಕೊಳ್ಳದೇ ರೋಡ್ ಟ್ರಾನ್ಸ್‌ಪೋರ್ಟಿನವರು 6 ಏಕರೆ ಜಮೀನನ್ನು ಆಕ್ವೈರ್ ಮಾಡಿಕೊಳ್ಳುವುದಕ್ಕೆ ಟ್ರಾನ್ಸ್‌ಪೋರ್ಟಿನ ಕಾನೂನಿನಲ್ಲಿ ಅವಕಾಶವಿದೆಯೇ?

**Sri MOHAMMAD ALI :** all executive matters do not go before the Road Transport Corporation. Now, not even preliminary notice has been issued. It wii be issued only when the question of valuation is determined by the Acquistion Officer and informed to the Corporation.

## 5th AUGUST 1967

## Nandihalli Tank in Byadgi

Sri M.G.BANAKAR (Byadgi) ;-

Will the minister for Public Works be pleased to state ;-

a) the action taken by them in respect of the construction of Nandihalli Tank in Byadgi Taluk;

b) the amount required for the compeletion of the same

c) whether they would take up the said work this year alone?

A.- Sri, ALUR HANUMANTHAPPA ( Deputy Minister for Minor Irrigation );-

a) The Project is under consideration

b) Rs,6.81 lakhs

c) Yes, in case the proposal is found feasible, financially and techinically

Sir, with your permission I would like to add that this work has been administratively approved

**Sri M.G.BANAKAR :** No supplementaries, Sir.

**Mr SPEAKER:** Next Question by Sri P.Anjnappa viz,No 557. I will hold over the Question. Iam told that the Hon'ble Chief Minister will come a lttle late .Next Question.

Works entrusted to Karnataka Traders

Q, Sri M.G.BANAKAR (Byadgi) ;-

Will the minister for Public Works be pleased to be state ;-

The total value of the works entrusted by the Public Works Department to karnatake Traders, Chitradurga so far, from the date of its starting ?

A ;- Sri VEERENDRA PATIL ( Minister for public) ;- RS 60.42 Lakhs

**Sri H.SIDDAVEERAPPA :** With regard to question 314, in the reply some names of the contractors are mentioned. May Iknow whether any one of them is related to the Chief minister ?

**Sri VEERENDRA PATIL :** Sir, these are names Ihave given; I do not know whether they are related to any body.

**Sri SIDDAVEERAPPA :** I Mentioned Sri vishwanath, Sri rajashekharappa nor I know Gurunath and he may be a distant relative of the chief minister?

**Sri VEERENDRA PATIL :** I do not know about Vishwanath and Rajshekharappa nor I KNOW Gurunath and he may be a distant relative of the Chief minister.

**Sri H. SIDDVEERAPPA :** May I Know whether Rajashekharappa is the son of the Chief minister?

**Sri VEERENDRA PATIL :** He may be the son of the chief minister, but I donot know whether he is the partener of this company.

**Sri SIDDAVEERAPPA :** I am glad that the Public Works Minister is blind to so many things ; now, may I know whether Chief engineer has not given a report to you after inspection with regard to the construction of T.B. Project ? Has he not reported about the defected workmanship.

**Sri VEERENDRA PATIL :** Sir,He has asked about the defective workmanship. I have not recived that report .

**Sri H. SIDDAVEERAPPA :** Is there not a complaint that simply because the contractors are related to the Chief minister they want to boss over the officers to pass on defective work and they want to bring undue pressure on the officers?

**Sri VEERENDRA PATIL :** Government have not recived any such report so far.

**Sri SIDDAVEERAPPA :** Will the government be pleased to give an assurance that the matter will be examined further? I am not concerned with the money that is paid but I am concerned with the defective work that is done .the bridge was broken in 1924 and we are now having a new bridge after 40 years.

**Sri VEERENRA PATIL :** Let me assure the house that the Chief Engineer and other Engineers are not there to continue defective working.

**Sri DUGGAPPA :** Whether it is not a fact that he Executive Engineer who was in charge of this work did not pay the bills to the concerned contractors for the simple reason that the work was not satisfactory and that the Executive Engineer was transferred immediately after that?

**Sri VEERENDRA PATIL :** Sir, it is not so . The Executive Engineer was there fore more than two years and he was transferred in the normal course.

**ಶ್ರೀ ಎಂ.ಜಿ. ಬಣಕಾರ :** ಕರ್ನಾಟಕ ಟ್ರೇಡರ್ಸ್ ಸಂಬಂಧಪಟ್ಟ ಹಾಗೆ ಚಿಕ್ಕಮಗಳೂರ ಜಿಲ್ಲೆಯ ದಾಸರಹಳ್ಳಿ ಕೆರೆ ಕಂಟ್ರಾಕ್ಟ್ 12 ಲಕ್ಷ ರೂಪಾಯಿ ಇದ್ದುದರಲ್ಲಿ ಮುಕ್ಕಾಲು ಭಾಗ ಕೆಲಸ ಮಾಡಿ ಕಾಲು ಭಾಗ ಕೆಲಸ ಮಾಡದೇ ಇರುವುದರಿಂದ ಅವರ ಲೈಸೆನ್ಸ್ ಕ್ಯಾನ್ಸಲ್ ಆದುದನ್ನು ಪುನ; ಅವರಿಗೆ ಕೆಲಸ ಕೊಡಲಾಗಿದೆ. ಈ ಕಂಟ್ರಾಕ್ಟರರು ಮುಖ್ಯ ಮಂತ್ರಿಗಳಿಗೆ ಸಂಬಂಧಪಟ್ಟವರು ಎಂಬ ದೃಷ್ಟಿಯಿಂದ ಅವರು ಅಧಿಕಾರಿಗಳಿಗೆ ಆರ್ಡರ್ ಮನ್ನಣೆ ಮಾಡದೆ ಇದ್ದರೂ ಅವರಿಗೆ ಪುನ; ಆರ್ಡರ್ ಕೊಟ್ಟಿದ್ದೀರಿ ಎಂದು ಕೇಳಿದ್ದೇನೆ. ಅದು ನಿಜವೇ ?

**ಶ್ರೀ ವೀರೇಂದ್ರ ಪಾಟೀಲ :** ಮಾನ್ಯ ಸದಸ್ಯರು ಕೇಳುವ ಮಾತು ಬರೀ ಊಹಾಪೋಹದ ಮಾತಾಗಿದೆ.

**ಶ್ರೀ ಎಸ್. ಬಂಗಾರಪ್ಪ :** ಸ್ವಾಮಿ, ಈ ಪ್ರಶ್ನೆ ಬಹು ಪ್ರಾಮುಖ್ಯವಾದುದು. ಸಪ್ಲಿಮೆಂಟರೀಸ್ ಕೇಳುವುದಕ್ಕೆ ಅವಕಾಶ ಕೊಡಬೇಕು. ಮಾನ್ಯ ಮುಖ್ಯಮಂತ್ರಿಗಳಿಗೆ ಸಂಬಂಧಪಟ್ಟ ಜನ ಕಂಟ್ರಾಕ್ಟರರು ಇದ್ದಾರೆಂದು ಮಾನ್ಯ ಸದಸ್ಯರು ಪ್ರಶ್ನೆ ಕೇಳಿದ್ದಾರೆ. ಅವರ ಸಂಬಂಧ ಇದ್ದುದು ಇಷ್ಟೂ ಗೊತ್ತಿಲ್ಲ ಎಂದು ಹೇಳಿ ಮಂತ್ರಿಗಳು ಉತ್ತರ ಕೊಟ್ಟಿದ್ದಾರೆ.ಒಂದು ವಿಷಯ ಸಭೆಯ ಗಮನಕ್ಕೆ ತರತಕ್ಕದ್ದು. ಮಾನ್ಯ ನಿಜಲಿಂಗಪ್ಪನವರು ಮುಖ್ಯ ಮಂತ್ರಿಗಳು ಮಂತ್ರಿ ಮಂಡಲದಲ್ಲಿ ಉನ್ನತ ಸ್ಥಾನದಲ್ಲಿರುವುದರಿಂದ ಅವರೇ ಈ ಪ್ರಶ್ನೆಗೆ ಉತ್ತರ ಕೊಡುವುದು ಉತ್ತಮ.

**Mr. SPEAKER :** It is a suggestion

**ಶ್ರೀ ಎಂ.ಜಿ.ಬಣಕಾರ :** ದಾಸರಹಳ್ಳಿ ಕೆರೆ ಸಂಬಂಧದಲ್ಲಿ ಸಂಬಂಧಪಟ್ಟ ಅಧಿಕಾರಿಗಳು ಸರಿಯಾದ ಕೆಲಸ ಅವರು ಮಾಡಲಿಲಲ್ವೆಂದು ಕಂಟ್ರಾಕ್ಟನ್ನು ವಜಾ ಮಾಡಿರುವ ಪ್ರತಿಯನ್ನು ಹಾಜರು ಪಡಿಸಿದರೆ ಅವರ ಲೈಸೆನ್ಸ್‌ನ್ನು ವಜಾ ಮಾಡುತ್ತೀರಾ ಸ್ವಾಮಿ?

**ಶ್ರೀ ವೀರೇಂದ್ರ ಪಾಟೀಲ :** ಮಾನ್ಯ ಸದಸ್ಯರು ಈಗ ಹೇಳಿದ ಮಾತು ಊಹಾಪೋಹದಿಂದ ಹೇಳುತ್ತಿರುವ ಮಾತು ಎಂಧು ಹೇಳಿದೆ. ನನ್ನ ಮುಂದೆ ಇರುವ ಅಂಕಿ ಆಂಶಗಳ ಪ್ರಕಾರ ಹೇಳಬೇಕಾಗಿದ್ದರೆ ದಾಸರಹಳ್ಳಿ ಕೆರೆ ಕೆಲಸಕ್ಕೆ 7,90,000 ರೂಪಾಯಿಗಳನ್ನು ಮಂಜೂರ ಮಾಡಿದೆ. ಈಗಾಗಲೇ 6,59,374 ರೂಪಾಯಿಗಳು ಖರ್ಚಾಗಿವೆ. ಈ ಕೆಲಸ ಮುಗಿಯುವ ಘಟ್ಟದಲ್ಲಿದೆ.

**Sri C.K.RAJAYYASHETTY :** Are you aware that this contractor has sub let the work for a margin of RS 2 Lakhs ?

**Sri VEERANDRA PATIL :** I am not aware of it.

**ಶ್ರೀ ಎಂ.ಜಿ.ಬಣಕಾರ :** ಕೆರೆಯಲ್ಲಿದ್ದ ಮಣ್ಣನ್ನೇ ತೆಗೆದು ಕಟ್ಟೆಗೆ ಹಾಕಬೇಕೆಂಬ ನಿಯಮವಿದ್ದರೂ ಈ ಕಂಟ್ರಾಕ್ಟರು ಬೇರೆ ಕಡೆಯಿಂದ ಮಣ್ಣನ್ನು ತಂದು ಹಾಕಿರುವುದಾಗಿ ಹೇಳಿ ರೇಟನ್ನು ಬದಲಾಯಿಸಿಕೊಂಡು, 82 ಸಾವಿರ ರೂಪಾಯಿಗಳನ್ನು ಕರ್ನಾಟಕ ಟ್ರೇಡರ್ಸ್ ಸಂಸ್ಥೆ ಲೋಕೋಪಯೋಗಿ ಇಲಾಖೆಯಿಂದ ಪಡೆದು ಸರ್ಕಾರಕ್ಕೆ ಲುಕ್ಸಾನು ಮಾಡಿದೆ ಇದಕ್ಕೆ ಏನು ಹೇಳುತ್ತೀರಿ ಸ್ವಾಮಿ?

**Mr. SPEAKER :** It is not a supplementary. What is a supplementary? Is saying that they have robbed 85,000 a supplementary? Members must ask for information .Lator they may bring in and condemn the whole thing. But during the Question Hour Members should elicit information.

**ಶ್ರೀ ಎಸ್. ಶಿವಪ್ಪ :** ತುಂಗಭದ್ರ ಸೇತುವೆಗೆ ಟೆಂಡರ್ ಕರೆದಾಗ ಅಂದಾಜು ಮೊಬಲಗು ಎಷ್ಟಿತ್ತು ಮತ್ತು ಇತ್ತೀಚೆಗೆ ಈ ಅಂದಾಜು ರಿವೈಸ್ ಆಗಿದೆಯೇ? ಹಾಗಿದ್ದರೆ ರಿವೈಸಾದ ಅಂದಾಜು ಮೊಬಲಗು ಎಷ್ಟು?

**ಶ್ರೀ ವಿರೇಂದ್ರ ಪಾಟೀಲ್ :** ಇದರ ಅಂದಾಜು ಮೊಬಲಗು 23 ಲಕ್ಷ 24 ಸಾವಿರ ರೂಪಾಯಿಗಳು ಇದು ರಿವೈಸ್ ಆಗಿಲ್ಲ.

**ಶ್ರೀ ಸಿದ್ದಯ್ಯ ಕಾಶಿಮಠ :** ಮಂತ್ರಿಗಳು ಹಾಗೂ ಈ ಮನೆಯ ಸದಸ್ಯರ ಮಕ್ಕಳು, ಅಳಿಯಂದಿರು, ಕಂಟ್ರಾಕ್ಟ್ ತೆಗೆದುಕೊಳ್ಳುವುದಕ್ಕೆ ಪಬ್ಲಿಕ್ ವರ್ಕ್ಸ್ ಇಲಾಖೆಯ ರೂರ್ಸ್‌ನಲ್ಲಿ ಏನಾದರೂ ಮನ್ನಣೆ ಇದೆಯೇ ಸ್ವಾಮಿ ?

**ಶ್ರೀ ವಿರೇಂದ್ರ ಪಾಟೀಲ :** ಪಬ್ಲಿಕ್‌ವರ್ಕ್ಸ್ ಇಲಾಖೆಯ ರೂಲ್ಸಿನಲ್ಲಿ ಯಾರು ಕಂಟ್ರಾಕ್ಟ್ ಮಾಡಬೇಕು. ಇಂಥವರು ಮಾಡಬೇಕು ಇಂಥವರು ಮಾಡಬಾರದು ಎಂದೇನೂ ಇಲ್ಲ. ಈ ಸಂದರ್ಭದಲ್ಲಿ ಇನ್ನೊಂದು ವಿಷಯ ಹೇಳಬೇಕಾಗಿದ್ದರೆ ಕರ್ನಾಟಕ ಟ್ರೇಡರ್ಸ್ ಕನ್‌ಸ್ಟ್ರಕ್ಸನ್ ಕಂಪನಿ 1959 ರಲ್ಲಿ ರಿಜಿಸ್ಟರಾಗಿದೆ. ಆಗ, ಈಗಿರುವಂಥಹ ಮುಖ್ಯಮಂತ್ರಿಗಳು ಮುಖ್ಯಮಂತ್ರಿಗಳಾಗಿರಲಿಲ್ಲ.

**ಶ್ರೀ ಎಚ್ ಸಿದ್ದವೀರಪ್ಪ :** 315 ನೆಯ ಪ್ರಶ್ನೆಗೆ ಸಂಬಂಧಪಟ್ಟ ಹಾಗೆ 19 ಕೆಲಸಗಳನ್ನು ಕೊಡಲಾಗಿದೆ ಎಂದು ಹೇಳಿದ್ದಾರೆ. ಮತ್ತು ಅವುಗಳಲ್ಲಿ 11 ಕಾಮಗಾರಿಗಳು ಪೂರೈಸಲ್ಪಟ್ಟಿವೆ. ಈ 19 ಕಾಮಗಾರಿಗಳಿಗೆ ಒಟ್ಟು ಎಷ್ಟು ಮುಬಲಗು ಆಗುತ್ತದೆ.

**ಶ್ರೀ ವಿರೇದ್ರ ಪಾಟೀಲ್ :** ಈ ಕೆಲಸಗಳ ಒಟ್ಟು ಹಣ 60,42,118 ರೂಪಾಯಿಗಳು.

**ಶ್ರೀ ಎಚ್ ಸಿದ್ದವೀರಪ್ಪ :** ಇಸರಲ್ಲಿ ಅಂದಾಜುಗಳು ಎಷ್ಟು ಸಾರಿ ರಿವೈಸ್ ಆಗಿವೆ, ಸ್ವಾಮಿ ?

**ಶ್ರೀ ವಿರೇಂದ್ರ ಪಾಟೀಲ್ :** 60,42,118 ರೂಪಾಯಿಗಳಿಗೆ ಸಂಬಂಧಪಟ್ಟ ಹಾಗೆ 19 ಕಾಮಗಾರಿಗಳಿವೆ. ಇವುಗಳಲ್ಲಿ 13 ಭದ್ರಾ ನಾಲಾ ಪ್ರದೇಶದಲ್ಲಿವೆ, ಮೂರು ಮೈನರ್ ವರ್ಕ್ಸ್, ಒಂದು ಬಿಲ್ಡಿಂಗ್ ಕೆಲಸ– ಕೆಲಸ ನಡೆಯುತ್ತಿದೆ, ಮುಗಿಯುವ ಹಂತದಲ್ಲಿದೆ. ಎರಡು ಸೇತುವೆ ಕೆಲಸಗಳು 26 ಲಕ್ಷ 88 ಸಾವಿರ ರೂಪಾಯಿಗಳ ಅಂದಾಜಿನವು. ಹೀಗೆ ಇರುವುದರಿಂದ ಪ್ರತಿಯೊಂದು ಕೆಲಸದ ಅಂದಾಜು ಎಷ್ಟು ಸಾರಿ ರಿವೈಜ್ ಆಯಿತು ಎಂದು ಈಗ ಹೇಳುವುದು ಕಷ್ಟ ಮಾನ್ಯ ಸದಸ್ಯರು ಮತೊಂದು ಪ್ರಶ್ನೆ ಹಾಕಿದರೆ ಉತ್ತರಗಳನ್ನು ಒದಗಿಸಬಹುದು,

**Sri H. SIDDVEERAPPA :** Is not a fact that invariably in every work there is revised estimate in all these cases ?

**Mr. SPEAKER :** He says Notice.

**Sri, H.SIDDVEERAPPA :** Are they now classified as Class 1 Contractors?

**Sri. VEERENDRA PATIL :** They were classified as class 1 conntractors in the year 1960.

**Sri H. SIDDVEERAPPA :** Are they also contractors in the new work coming up in Kolar-gigantic work- Bharat Earth Movies.

**Mr, SPEAKER :** How does it arise here ?

## 5th AUGUST

## "ಬೆಳಗಾವಿ ನಗರ ಸಭೆಯ ಮೇಲೆ ಶಿವಸೇನೆ ಧ್ವಜ"

**ಶ್ರೀ ಎಂ.ಜಿ. ಬಣಕಾರ್ (ಬ್ಯಾಡಗಿ):** ಈ ಶಾಸಕರ ಹಾಗೂ ಮಂತ್ರಿಗಳ ಸಂಬಳ ಸಾರಿಗೆ ಬಿಲ್ಲುಗಳನ್ನು ಚರ್ಚೆ ಮಾಡಲು ಇಲ್ಲಿ ಮೂರು ಗಂಟೆಗಳ ಕಾಲವನ್ನು ನಿಗದಿ ಮಾಡಿದ್ದು ನಿಜ. ಆದರೆ ಅದರಲ್ಲಿ ಬಹಳ ಕಾಲವನ್ನು ಆಡಳಿತ

ಪಕ್ಷಕ್ಕೆ ಸೇರಿರತಕ್ಕ ಶ್ರೀ ಮಾನ್ ಕೋಥಾವಳೆಯವರ point of order ಮತ್ತು ಶ್ರೀ ಮಾನ್ ಕಂಠಿಯವರ ಅಸಂಬದ್ಧ ಭಾಷಣಕ್ಕೂ ತೆಗೆದುಕೊಂಡ ಕಾರಣದಿಂದ ಅದಕ್ಕಾಗಿ ಮೂರು ಮೂಕ್ಕಾಲು ಗಂಟೆಗಳ ಕಾಲ ಹೊರಟು ಹೋಯಿತು. ಅದರಲ್ಲಿ ಇನ್ನೂಳಿದಿದ್ದು ಕೇವಲ ಕಾಲು ಗಂಟೆ ಮಾತ್ರ .ಅಷ್ಟರಲ್ಲಿ ಇನ್ನೂಳಿದ ಸದಸ್ಯರಿಗೆ ತಮ್ಮ ಅಭಿಪ್ರಾಯವನ್ನು ಸೂಚಿಸುವುದಕ್ಕೆ ಅಷ್ಟು ಅವಕಾಶ ಸಾಲದು. ಈ ವಿಚಾರ ಹಾಗಿರಲಿ – ಈ ದಿವಸ ನಮ್ಮ ಈಡಿ ದೇಶಕ್ಕೆ ದೇಶದ ಮುಖಕ್ಕೆ ಮಸಿ ಬಳಿಯುವಂತ ಒಂದು ಪ್ರಸಂಗ ಉಂಟಾಗಿದೆ. ಇಲ್ಲಿ ನೋಡಿದರೆ ಮಂತ್ರಿಗಳ ತಮ್ಮ ಸಂಬಳ ಸಾರಿಗೆಗಳನ್ನು ಹೆಚ್ಚಿಸಿಕೊಳ್ಳುವ ಕೆಲಸದಲ್ಲಿ ನಿರತರಾಗಿದ್ದರೆ ಅತ್ತ ಬೆಳಗಾಂವನಲ್ಲಿ ಆ ಶಿವಸೇನೆಯವರು ನಗರ ಸಭೆಯ ಮೇಲೆ ತಮ್ಮ ಬಾವುಟವನ್ನು ಹಾರಿಸಿದ್ದಾರೆ. ಇದು ಬಹಳ ಮುಖ್ಯವಾದ ವಿಚಾರ. ಇದನ್ನು ತಿಳಿಸುವುದಕ್ಕೆ ನಾನು ಎದ್ದು ನಿಂತರೆ, ಅವಕಾಶ ಕೊಡುತ್ತಿಲ್ಲ, ಹಾಗಾದರೆ ನಾವುಗಳು ಇಲ್ಲಿಗೆ ಬಂದಿರತಕ್ಕದ್ದು ಇಲ್ಲಿ ಸುಮ್ಮನೆ ಕುಳಿತಿದ್ದು ಎದ್ದು ಹೋಗುವುದಕ್ಕೇನು? ಆದುದರಿಂದ ನಾನು ಇದು ಅತಿ ಪ್ರಾಮುಖ್ಯವಾದ ವಿಚಾರವಾದ್ದರಿಂದ ಅತಿ ವಿನಯದಿಂದ ಅಧ್ಯಕ್ಷರಲ್ಲಿ ಕ್ಷಮೆ ಬೇಡಿ ಎರಡು ಮಾತನಾಡುವುದಕ್ಕೆ ಅವಕಾಶ ಕೊಡಬೇಕೆಂದು ಕೇಳುತ್ತಿದ್ದೇನೆ.

**Mr. Speaker :** Does he think what he considers important should be taken up and all the business in the House should be thrown away ? That is not the manner of approach. I will not allow Sri Banaker to go on. If he threatens like this, do not allow.

**Sri M.G.BANAKAR :** No threats.

**Mr. SPEAKER :** What else is that ? Is the flag flown after we adjourned for lunch ? Did not the Member know it before ? Are not Member aware that the business is taken in a particular order and that is why agenda is prepared ? I thought that the Member had one or two points to say about this matter which is before the house. He says that it is a matter which has now to be taken up. Should there not be a certain amount of consonance, I will not call it sense of proportion. Could you not write to me and say ‘ I want to raise this matter on the floor of the House’ so that I may give notice to Government, and the Government will have some thing to say. Suddenly he says it is reported like that. Is

that the way business is to be conducted in the house ? He wants me to revise the simply because he feels strongly.

**ಶ್ರೀ ಎಂ.ಜಿ. ಬಣಕಾರ್ :** ಸ್ವಾಮೀ, ತಮ್ಮ ಗಮನಕ್ಕೆ ಒಂದೇ ನಿಮಿಷದಲ್ಲಿ ಒಂದು ವಿಚಾರ ಇಲ್ಲಿ ಹೇಳಬೇಕಾಗಿದೆ. ಅದು ಇಂದಿನ ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಕೋಡ ಬಂದಿದೆ. ಅದೇನೆಂದರೆ;

> "ಬೆಳಗಾವಿ ನಗರ ಸಭೆಯ 'ಮೇಲೆ ಶಿವಸೇನೆ' ಧ್ವಜ. ಕರ್ನಾಟಕದ ಗಂಡುಮೆಟ್ಟಿದ ಬೆಳಗಾಂವಿಯಲ್ಲಿ ರಾಜ್ಯ ಸರ್ಕಾರದ ಆಡಳಿತಗಾರರೂ ಕಮೀಷನರರೂ ಇರುವ ನಗರ ಸಭೆಯ ಸಭೆಯ ಕಛೇರಿ ಮೇಲೆ 'ಶಿವಸೇನೆ' ಯ ಭಗವದ್ಧ್ವಜಾ ಹಾರಾಡುತ್ತಿದ್ದುದು ಜನತೆಗೆ ಭಾರಿ ವಿವಂಚನೆಯನ್ನುಂಟು ಮಾಡಿರುತ್ತದೆ. ಈ ಬಗ್ಗೆ ರಾಜ್ಯದ ಮಂತ್ರಿಗಳನ್ನೂ, ಮುಖ್ಯ ಮಂತ್ರಿಗಳನ್ನೂ ವಿಚಾರಿಸಿದರೆ, ಅವರು ಹಾರಿಕೆಯ ಉತ್ತರ ನೀಡಿದ್ದಾರೆ. ಬೆಳಗಾಂವಿಯಲ್ಲಿ ಒಂದು ಧರ್ಮದ, ಒಂದು ಭಾಷೆಯ,ಒಂದು ಜನಾಂಗದ ಕುರುಹಾಗಿ ಈ ಧ್ವಜ ಹಾರಾಡುತ್ತಿದ್ದರೆ ಅದು ತುಂಬಾ ಆಕ್ಷೇಪಾರ್ಹ".

ಇದು ಬಹಳ ಪ್ರಾಮುಖ್ಯವಾದ ವಿಚಾರ: ಇದರ ಬಗ್ಗೆ ಇಲ್ಲಿ ಮಾತನಾಡಲು ತಾವು ಸ್ವಲ್ಪ ಸಮಯ ಕೊಡಬೇಕೆಂದು ಕೇಳುತ್ತಿದ್ದೇನೆ. ನಾವು ನಮ್ಮ ಕೆಲಸಗಳನ್ನು ಮಾಡುವಾಗ ತಾವು ಅದಕ್ಕೆ ಅವಕಾಶ ಕೊಡದೇ ಹೋದರೆ ನಾವು ಅದನ್ನು ಹೇಗೆ ಮಾಡುವುದು? ಇದು ಬಹಳ ಪ್ರಾಮುಖ್ಯವಾದ ವಿಚಾರ. ನಮ್ಮನ್ನು ಯಾವ ಕಾಲಕ್ಕೂ ತಾವು ಹೀಗೆ ತಡೆಯುವುದಕ್ಕಾಗುವುದಿಲ್ಲ. ಇವತ್ತು ಮಂತ್ರಿಗಳ ಸಂಬಳ ಮಸೂದೆಯ ವಿಷಯ ಮುಖ್ಯವಾದುದು ಎಂದು ಅದನ್ನು ಇಲ್ಲಿ ಮಂಜೂರ ಮಾಡಬೇಕು ಎಂದು ತಂದಿದ್ದಾರೆ.ಅದಕ್ಕಿಂತ ಬಹು ಮುಖ್ಯವಾದ ವಿಚಾರ ಇದು. ಈ ಪ್ರಶ್ನೆ ಬಹಳ ಪ್ರಾಮುಖ್ಯವಾದುದು. ತಾವು ವೇತನದ ಏರಿಕೆಯ ಮಸೂದೆ ಬಂದಾಗ ಮಾನ್ಯ ಸದಸ್ಯರಾದ ಶ್ರೀ ಮಾನ್ ಕೊಠಾವಾಳೆಯವರು ಯಾವ ರೀತಿ ಆರ್ಭಟ ಮಾಡುತ್ತಿದ್ದರೂ ತಾವು ಅವರನ್ನೇನೂ ಆಕ್ಷೇಪಣೆ ಮಾಡಲಿಲ್ಲ. ಆದರೆ ನಾವು ಮಾತನಾಡುವಾಗ ಏತಕ್ಕೆ ಇಷ್ಟು ಆಕ್ಷೇಪ ಮಾಡುತ್ತೀರೀ?

**Mr. SPEAKER :** Iam not going to all this. It looks as if warmath of feeling is going to rule. On the other hand. I may say if members do not want rules. They may bring a resolution and say all the rules should be droped.

## ಮಂತ್ರಿಗಳ ಸಂಬಳಕ್ಕೆ ಮಸೂದೆ ಮಂಡನೆ

**ಶ್ರೀ ಎಸ್. ಶಿವಪ್ಪ :** 1956ನೇ ಇಸವೀಯಲ್ಲಿ ಇದೇ ತರಹದ ಮಂತ್ರಿಗಳ ಸಂಬಳ ಏರಿಕೆಯ ಬಗ್ಗೆ ಒಂದು ಮಸೂದೆಯನ್ನು ಮಂಡನೆ ಮಾಡಿದ್ದರು. ತಾವು ಆಗಿನ ನಡುವಳಿಕೆಗಳನ್ನು ತೆಗೆದು ನೋಡಿದರೆ There is a point of procedure. What was the procedure that was adopted on that day ? I request you to adopt the same procedure. ಮಂತ್ರಿಗಳ ಸಂಬಳ ಏರಿಕೆಯ ಬಗ್ಗೆ ಆಗ ಮಂತ್ರಿಗಳು ಯಾರು ಇದ್ದರು ಎಂಬುದನ್ನು ನೋಡಿದರೆ ಗೊತ್ತಾಗುತ್ತದೆ. ಆನರಲ್ ಆಡ್ಮಿನಿಸ್ಟ್ರೇಷನ್ ಆಡಳಿತದ ಜವಾಬ್ದಾರಿಯನ್ನು ಹೊತ್ತಿರತಕ್ಕ ಮಾನ್ಯ ಮುಖ್ಯ ಮಂತ್ರಿಗಳು ಈ ಸಭೆಯಲ್ಲಿ ಇಲ್ಲದೆ ಇರುವಾಗ ಅವರಿಗೆ ಸಂಬಂಧಪಟ್ಟ ಮಸೂದೆಯನ್ನು ಇಲ್ಲಿ ಮಂಡನೆ ಮಾಡಬಾರದು. ಅದನ್ನು ತಮ್ಮ ಗಮನಕ್ಕೆ ತರುತ್ತಿದ್ದೇನೆ. ಆಗಲೂ ಮಾನ್ಯ ಮುಖ್ಯ ಮಂತ್ರಿಗಳಾದ ಶ್ರೀ ನಿಜಲಿಂಗಪ್ಪನವರು ಈ ಮಸೂದೆಯನ್ನು ಮಂಡನೆ ಮಾಡಿದ ಮೇಲೆ ಹಣಕಾಸಿನ ಬಗ್ಗೆ ಟೀಕೆ ಟಿಪ್ಪಣಿಗಳನ್ನು ಮಾಡಿದಾಗ ಅದಕ್ಕೆ ಉತ್ತರ ಕೊಡುವ ಜವಾಬ್ದಾರಿಯನ್ನು ಜನರಲ್ ಅಡ್ಮಿನಿಸ್ಟ್ರೇಷನ್‌ಗೆ ಸಂಬಂಧಪಟ್ಟಂತಹ ಮಂತ್ರಿಗಳೆ ಆಗಬೇಕೆಂದು ಹೇಳಿದ್ದೆವು. ಆದ್ದರಿಂದ ನನ್ನ ಸ್ನೇಹಿತರಾದಂತಹ ಶ್ರೀ ಸಿದ್ಧಯ್ಯ ಕಾಶೀಮಠ್ ಅವರು ಈ ಮಸೂದೆಯನ್ನು ಮಂಡನೆ ಮಾಡುವುದಕ್ಕಾಗುವುದಿಲ್ಲ. ಇದು ಹಣಕಾಸಿಗೆ ಸಂಬಂಧಪಟ್ಟಂತಹ ವಿಚಾರವಾಗಿರುವುದರಿಂದ ಮಂತ್ರಿಗಳಿಗೆ ಸಂಬಂಧಪಟ್ಟ ವಿಚಾರವನ್ನು ಇಲ್ಲಿ ಎತ್ತಿ ಹಿಡಿದಾಗ ಆ ಜವಾಬ್ದಾರಿಯನ್ನು ಹೊತ್ತಂಥಹ ಮಂತ್ರಿಗಳೇ ಅದಕ್ಕೆ ಜವಾಬು ಕೊಡಬೇಕಾಗಿರುವುದರಿಂದ, ಅವರೇ ಅದನ್ನು ಇಲ್ಲಿ ಮಂಡನೆ ಮಾಡಬೇಕು, ಅಥವಾ ಅವರ ಪರ ಡೆಪ್ಯೂಟೇಶನ್ ಆದವರಾದರೂ ಮಂಡನೆ ಮಾಡಬೇಕು, Are you following the same convention ? ಹಿಂದೆ ಯಾವಗಲೂ ಇಂತಹ ಶಾಸನ ಸಭೆಯಲ್ಲಿ ಈ ರೀತಿ ಒಬ್ಬ ಪ್ರೈವೇಟ್ ಮೆಂಬರ್ ಇಂತಹ ಹಣಕಾಸಿಗೆ ಸಂಬಂಧಪಟ್ಟ ಮಸೂದೆಯನ್ನು ಮಂಡಿಸಿರಲಿಲ್ಲ. ಅದಕ್ಕೆ ಸಂಬಂಧಪಟ್ಟ ಮಂತ್ರಿಗಳೇ ಮಂಡಿಸುತ್ತಿದ್ದರು. ಆದ್ದರಿಂದ ಈ ಮಸೂದೆಗೆ ಸಂಬಂಧಪಟ್ಟ ಮಾನ್ಯ ಮುಖ್ಯ ಮಂತ್ರಿಗಳು ಇಲ್ಲಿ ಈಗ ಇಲ್ಲದೇ ಇರುವಾಗ ನಾವು ಕೇಳತಕ್ಕ ಪ್ರತಿಯೊಂದು ವಿಷಯಕ್ಕೂ ಉತ್ತರ ಹೇಳುವುದಕ್ಕೆ ಇವೊತ್ತು ಯಾರನ್ನೂ ಕೇಳಬೇಕು? ಇದಕ್ಕೆ ಯಾರು ಜವಾಬ್ದಾರರು ?

**ಶ್ರೀ ಎಚ್.ಶಿವಪ್ಪ :** ಪಾಯಿಂಟ್ ಆಫ್ ಆರ್ಡರ್ ?

**ಅಧ್ಯಕ್ಷರು :** ಈಗ ಯಾವ ಪಾಯಿಂಟ್ ಆಫ್ ಆರ್ಡರ್?

**ಶ್ರೀ ಎಚ್. ಸಿದ್ದವೀರಪ್ಪ :** ಈ ಹಣಕಾಸಿಗೆ ಸಂಬಂಧಪಟ್ಟ ಅದರಲ್ಲಿಯೂ ಈ ಖಾತೆಗೆ ಸಂಬಂಧಪಟ್ಟವರು ಮನಸ್ಸಿಗೆ ಬಂದ ರೀತಿಯಲ್ಲಿ ವರ್ತನೆ ಮಾಡುತ್ತಿದ್ದಾರೆ. ಅದಕ್ಕೆ ಪಾಯಿಂಟ್ ಆಫ್ ಆರ್ಡರ್. 1,200 ರೂಪಾಯಿಗಳ ವೇತನವನ್ನು ಕೇಳುವುದಕ್ಕೆ ಮಂತ್ರಿಗಳ ಪರವಾಗಿ ಯಾರು ಇದ್ದಾರೆ ? 1,200 ರೂಪಾಯಿಗಳೇ ಸಾಕು ಅಥವಾ 900 ರೂಪಾಯಿಗಳೇ ಸಾಕು ಎಂಬುದಾಗಿ ಹೇಳುವವರು ಯಾರು ಇದ್ದಾರೆ.

**Mr. SPEAKER :** Is it a Point of Order ?

**ಶ್ರೀ ಎಂ.ಜಿ. ಬಣಕಾರ :** ಅಧ್ಯಕ್ಷರೇ, ಹಣಕಾಸಿಗೆ ಸಂಬಂಧಪಟ್ಟ ವಿಷಯಗಳನ್ನು ಮಂಡನೆ ಮಾಡಿ ತೆಗೆದುಕೊಳ್ಳುವುದಕ್ಕೆ ಟ್ರೆಜರಿ ಬೆಂಚಿನವರು ಮುಂದೆ ಬರಬೇಕೆಂಬುದು ಒಂದು ಸಂಪ್ರದಾಯ. ಹಣಕಾಸಿಗೆ ಸಂಬಂಧಪಟ್ಟ ಮಂತ್ರಿಗಳೇ ಹೆಚ್ಚುವರಿ ಬೇಡಿಕೆಗಳನ್ನು ಇಲ್ಲಿ ಮಂಡಿಸಬೇಕು. ಏಕೆಂದರೆ ಸದಸ್ಯರು ಅನುಮಾನಗಳನ್ನಾಗಲೀ ಅಥವಾ ಪ್ರಸ್ಥಾವನೆಗಳನ್ನಾಗಲಿ ಕೇಳಬೇಕಾದರೆ ಅವರನ್ನೇ ಕೇಳಬೇಕು.

**ಅಧ್ಯಕ್ಷರು :** ಯಾವ ರೂಲ್ಸ್ ಪ್ರಕಾರ ?

**ಶ್ರೀ ಎಂ.ಜಿ. ಬಣಕಾರ್ :** ನಾವು ಕಾನೂನುಗಳನ್ನು ಕೈಲಿ ಇಟ್ಟುಕೊಂಡು ಬಂದಿಲ್ಲ. ನಾವು ಇದುವರೆಗೂ ಈ ಖಯೆಗೆ ಸಂಬಂಧಪಟ್ಟ ಮಂತ್ರಿಗಳನ್ನೇ ಕೇಳಿ ಪ್ರತಿಯೊಂದಕ್ಕೂ ಸಮಜಾಯಿಸಿ ಪಡೆಯುತ್ತಿದ್ದೇವೆ. ನಾಳೆ ಏನಾದರೂ ಆದರೆ, ಹಣಕಾಸಿಗೆ ಸಂಬಂಧಪಟ್ಟ ಮಸೂದೆಯ ವಿಷಯದಲ್ಲಿ ನಾವು ಶ್ರೀ ಸಿದ್ಧಯ್ಯ ಕಾಶೀಮಠ್ ಅವರನ್ನೇ ಕೇಳಬೇಕು? ತಮ್ಮ ಸಂಬಳವನ್ನು ಹೆಚ್ಚಿಸಿ ಎಂದು ಕೇಳುವ ಎದೆಗಾರಿಕೆ ಮಂತ್ರಿಗಳಿಗಿಲ್ಲ. ಮಾನವೀಯತೆಯ ಮರುಕವಿಲ್ಲದ ಈ ಮಂತ್ರಿಗಳು ತಮ್ಮ ಸಂಬಳವನ್ನು ಹೆಚ್ಚಿಸಿಕೊಳ್ಳಲು ಖಾಸಗಿ ವಿಧೇಯಕ ಮಂತ್ರಿಗಳೇ ಹೆಚ್ಚುವರಿ ಬೇಡಿಕೆಗಳನ್ನು ಇಲ್ಲಿ ಮಂಡಿಸಬೇಕು. ಏಕೆಂದರೆ ಸದಸ್ಯರು ಅನುಮಾನಗಳನ್ನಾಗಲೀ ಅಥವಾ ಪ್ರಸ್ಥಾಪವನ್ನಾಗಲೀ ಕೇಳಬೇಕಾದರೆ ಅವರನ್ನೇ ಕೇಳಬೇಕೇ? ತಮ್ಮ ಸಂಬಳವನ್ನು ಹೆಚ್ಚಿಸಿ ಎಂದು ಕೇಳುವ ಎದೆಗಾರಿಕೆ ಮಂತ್ರಿಗಳಿಗಿಲ್ಲ. ಮಾನವೀಯತೆಯ ಮರುಕವಿಲ್ಲದ ಈ ಮಂತ್ರಿಗಳು ತಮ್ಮ ಸಂಬಳವನ್ನು ಹೆಚ್ಚಿಸಿಕೊಳ್ಳಲು ಖಾಸಗೀ ವಿಧೇಯಕ ಮಂಡಿಸುವಂತೆ ಮಾಡಿದ್ದಾರೆ. ಆದ್ದರಿಂದ ನಾನು ತಮ್ಮಲ್ಲಿ ಸವಿನಯದಿಂದ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಈ ಬಿಲ್ಲನ್ನು ಈಗ ಚರ್ಚೆಗೆ ತರಬೇಡಿ. ಟ್ರಜರಿ ಬೆಂಚಿನವರಿಗೆ ಈ ಬಿಲ್ಲನ್ನು ಧೈರ್ಯವಿಲ್ಲದೇ, ಬೇರೊಬ್ಬ ಸದಸ್ಯರಿಂದ ಅದನ್ನು ತರುವುದಕ್ಕೆ ಪ್ರಯತ್ನ ಮಾಡಿದ್ದಾರೆ. ಇವೊತ್ತಿನ ದಿವಸ ದೇಶದಲ್ಲಿ ಜನ ಹೊಟ್ಟೆಗೆ

ಅನ್ನವಿಲ್ಲದೆ ಸಾಯುತ್ತಿದ್ದಾರೆ. ಇಂಥಾ ಸಮಯದಲ್ಲಿ ಇವರು ಹಗಲು ದರೋಡೆ ಮಾಡುತ್ತಿದ್ದಾರೆ.

**Mr SPEAKER :** I am surprised that this member goes on talking like this.

**Sri K.H. PATIL :** Some body from the Congress Benches has said that the Opposition has no commensnse. Is it parliamentary?

(Many members were simultaneously shouting)

**ಶ್ರೀ ಎಸ್. ಚನ್ನಯ್ಯ :** ಸ್ವಾಮಿ, ನಾನು ತಮ್ಮನ್ನು ತುಂಬಾ ವಿಧವಾಗಿ ಕೇಳಿಕೊಂಡೆ, ಈಗ ವಾತಾವರಣ ಚನ್ನಾಗಿಲ್ಲ, ಇನ್ನೊಂದು ದಿವಸ ಈ ಬಿಲ್ಲನ್ನು ತೆಗೆದುಕೊಳ್ಳೋಣ ಎಂದು ನಾನು ಹೇಳಿದೆ. ಆದ್ದರಿಂದ ದಯವಿಟ್ಟು ತಾವು ಈಗಲಾದರೂ ಈ ಬಿಲ್ಲನ್ನು ತೆಗೆದುಕೊಳ್ಳುವುದನ್ನು ಮುಂದೆ ಹಾಕಿದರೆ, ಪೋಸ್ಟ್‌ಪೋನ್ ಮಾಡಿದರೆ ಚನ್ನಾಗಿರುತ್ತದೆ. ಮೈಸೂರಿಗೆ ಗೌರವ ಬರುತ್ತದೆ. ತಮ್ಮನ್ನು ನಾನು ವಿನಯದಿಂದ ಕೇಳಿಕೊಳ್ಳುತ್ತೇನೆ.

**Mr SPEAKER :** Some little expression of the opinion to indicate Discontent is all right. I feel it is wrong to allow any latitude or violation of the rules. I will strictly enforce the rule.

**ಶ್ರೀ ಎನ್. ಹುಚ್ಚಮಾಸ್ತಿಗೌಡ :** ಸ್ವಾಮಿ, ಈ ವಿಧೇಯಕ ಬಗ್ಗೆ ನಮ್ಮ ವಿರೋಧ ಪಕ್ಷದ ಮಾನ್ಯ ಸದಸ್ಯರೊಂದಿಗೆ ಉಂಟಾಗಿರತಕ್ಕ ಮನೋ ವ್ಯಾಕುಲತೆಯನ್ನು ನಾನು ತಮ್ಮಚೇಂಬರಿಗೆ ಬಂದು ತಮಗೂ ಮತ್ತು ಕಾಂಗ್ರೆಸ್ ಪಕ್ಷದ ಮುಖ್ಯ ಸಚೇತಕರಿಗೂ ತಿಳಿಸಿದ್ದೇನೆ. ಈ ವಿಧೇಯಕವನ್ನು ಈಗ ಚರ್ಚೆ ಮಾಡುವುದು ಬೇಡಿ, ಇದಕ್ಕೆ ಸೂಕ್ತವಾದ ಶಾಂತಿ ವಾತಾವರಣ ಬಂದಾಗ ಇದನ್ನು ಚರ್ಚೆ ಮಾಡುವುದು ಒಳ್ಳೆಯದು ಎಂದು ನಾನು ತಿಳಿಸಿದ್ದೇನೆ. ನಮ್ಮ ಮಾನ್ಯ ಹಿರಿಯ ಸದಸ್ಯರಾದ ಶ್ರೀ ಮಾನ್ ಚನ್ನಯ್ಯನವರು ಇದೇ ಅಭಿಪ್ರಾಯವನ್ನು ಹೇಳಿದ್ದಾರೆ. ಆದ್ದರಿಂದ ದಯವಿಟ್ಟು ಈ ಚರ್ಚೆಯನ್ನು ಮಂದೂಡುವದು ಒಳ್ಳೆಯದೆಂದು ನಾನು ತಮ್ಮಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

**Sri S.R. KANTI :** It cannot be adjourned at all

**Mr.SPEAKER :** If the House wants ,Ihave to sit, but to carry to extreme lengths and say ," We are dissatisfied ; we are not contended ; we are not happy and therefore the house should be adjourned." Will be not at all respecting the discussion of the House.

**Sri S.GOPALGOUDA :** We are happy and we are very much contended .

**Sri H. SIDDVEERAPPA :** As far as I can remember, right from the bigining we have been imploring them and telling ' please move this measure yourself and don't try to introduced some element which is not healthy' We have been telling them that is not correct ; still they persist. Therefore, there is no other alternative. Please do not mistake us.

**Mr. SPEAKER :** I am not the judge ; the public is the judge.

**Sri H.SIDDVEERAPPA :** Our patience is getting exaseperated ; it is coming to breaking point .

**Mr. SPEAKER :** Therefore, what should I do ?

**Sri H.SIDDVEERAPPA :** We will are what the consequence will be; that is different .

**ಶ್ರೀ ಎಂ.ಜಿ.ಬಣಕಾರ್ :** ಸ್ವಾಮಿ, ದಯುವಿಟ್ಟು ನನಗೆ ಎರಡು ಮಾತುಗಳನ್ನಾಡುವುದಕ್ಕೆ ಅವಕಾಶ ಮಾಡಿಕೊಡಿ. ನಾನು ಈ ಸಭೆಯ ಗಮನಕ್ಕೆ ತರಬೇಕಾದ ಒಂದು ಮುಖ್ಯ ವಿಷಯ ಏನೆಂದರೆ– ಈ ದಿವಸ ಬೆಳಗಿನಿಂದ ಇಲ್ಲಿ ನಡೆಯುತ್ತಿರುವ ಕಾರ್ಯ ಕಲಾಪಗಳ್ನು ನೋಡಿದರೆ ನಾವಿಲ್ಲಿಗೆ ಬಂದಿರತಕ್ಕದ್ದು ಮುಖ್ಯವಾಗಿ ಸದಸ್ಯರ ಹಾಗೂ ಮಂತ್ರಿಗಳ ಸಂಬಳವನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿಯೇ ಈ ಅಧಿವೇಶನವನ್ನು ಕರೆದಿದ್ದರೇನೋ ಅನ್ನುವಂತೆ ಕಾಣುತ್ತಿದೆ. ಹೊರಗಡೆ ಇರತಕ್ಕ ಜನರು ನೀವು ಸದಸ್ಯರುಗಳೆಲ್ಲಾ ಆರುವಾರ ಸಭೆ ನಡೆಸಿ ನೀವು ಮಾಡಿದ್ದೇನು, ನೀವೆಲ್ಲರೂ ನಿಮ್ಮ ಸಂಬಳ ಸಾರಿಗೆಗಳನ್ನು ಹೆಚ್ಚಿಸಿಕೊಳ್ಳುವುದಕ್ಕೆ ಮಾತ್ರ ನೀವು

ಸಭೆ ಸೇರಿದ್ದೀರಾ ಎಂದು ಕೇಳಿದರೆ ನಾವು ಏನು ಹೇಳಬೇಕು? ಜನರು ಆ ರೀತಿ ಮಾತನಾಡುವುದಕ್ಕೆ ಅವಕಾಶ ಕೊಡುವುದು ಬೇಡ. ಈ ಪರಿಸ್ಥಿತಿಯೇನಾಗಿದೆ ಎಂಬುದನ್ನು ನಾವು ಗಮನಿಸಬೇಕು. ಈ ದಿನ ಆಡಳಿತ ವರ್ಗದವರಿಗೆ ಬಹುಮತ ಇದೆ ಅನ್ನುವ ಒಂದು ಅಹಂಕಾರದಿಂದ ವರ್ತಿಸುವುದು ಬೇಡ. ತಾವು ಈ ದಿವಸ 10 ಜನರು ಒಂದು ಕತ್ತೆಯನ್ನು ತಂದು ಅವರಲ್ಲಿ 8 ಜನರು ಅದು ಕುದುರೆ ಎಂದರೆ ಅದು ಕುದುರೆಯಾಗುತ್ತದೆಯೇ? ಆ 8 ಜನರು ಅದು ಕುದುರೆ ಎಂದು ಕೈ ಎತ್ತಿದರೆ ಅದು ಕುದುರೆಯಾಗಿ ಬಿಡುತ್ತದೆಯೇ ಇಬ್ಬರು ಅದು ಕತ್ತೆಯೆಂದರೆ ಅದು ಕತ್ತೆಯಲ್ಲ, ಎಂಟು ಜನರು ಅದನ್ನು ಕುದುರೆ ಎಂದರೆ ಅದು ಕುದುರೆಯಾಗುತ್ತದೆ ಎಂಬ ನ್ಯಾಯವನ್ನು ಹಿಡಿಯುವುದು ಸರಿಯೇ? ಇಂಥ ಬಹುಮತಾಭಿಪ್ರಾಯಕ್ಕೆ ಪ್ರಜಾಪ್ರಭುತ್ವವೆನ್ನಬಹುದೇ? ವಿರೋಧ ಪಕ್ಷದವರಿಗೆ ಇಲ್ಲಿ ಮೆಜಾರಿಟಿ ಇಲ್ಲ ಎಂಬುದು ಅಧ್ಯಕ್ಷರಿಗೆ ಚೆನ್ನಾಗಿ ಗೊತ್ತಿದೆ . ಹಾಗೆ ಗೊತ್ತಿದ್ದರೂ ತಾವು ಮಾತೆತ್ತಿದರೆ ಓಟಿಗೆ ಹಾಕುತ್ತೇವೆ ಎನ್ನುತ್ತೀರಿ. ಇಂಥಾ ವಿಚಾರಗಳಲ್ಲಿ ಸಭೆಯಲ್ಲಿರತಕ್ಕ ಪ್ರತಿಯೊಬ್ಬ ಸದಸ್ಯರ ಅಭಿಪ್ರಾಯವನ್ನು ಕೇಳದೆ, ಅವರ ಅನುಮತಿಯನ್ನು ಪಡೆಯದೇ ಹೀಗೆ ಓಟಿಗೆ ಹಾಕಲು ತಮಗೆ ಕಾಂಗ್ರೆಸ್‌ನವರು ಬೆಂಬಲ ಕೊಟ್ಟಿರಬಹುದು. ತಾವು ಇಲ್ಲಿ ಅನುಸರಿಸುತ್ತಿರುವ ವಿಧಾನ ಎತ್ತಿ ತೋರಿಸುತ್ತದೆ. ಅಷ್ಟೇ ಅಲ್ಲದೆ ನಮ್ಮ ಮೇಲೆ ತಾವು ಕಾನೂನಿನ ಬೆದರಿಕೆಯನ್ನು ಬೇರೆ ಹಾಕುತ್ತಿದ್ದೀರಿ. Man must have the power of the Devil ; but not as Devil. ಎಂಬುದಾಗಿ ಒಬ್ಬ ಮಹಾ ಕವಿ ಹೇಳಿದ್ದಾನೆ. ಮನುಷ್ಯನಲಿ ರಾಕ್ಷಸ ಶಕ್ತಿ, ಬಲ ಇರಬೇಕು; ಆದರೆ ಆ ಶಕ್ತಿಯನ್ನು ಅವನು ರಾಕ್ಷಸಿ ಕೃತ್ಯಗಳಿಗೆ ಬಳಸಬಾರದು. ಹಾಗೆ ತಮಗೂ ಅಪಾರವಾದ ಕಾನೂನಿನ ಬಲವಿದೆ. ತಮಗೆ ರೂಲ್ಸ್ ಆಫ್ ಪ್ರೋಸಿಜರಿನಲ್ಲಿ ಸಾಕಷ್ಟು ಅವಕಾಶವಿದೆ. ಆದರೆ ತಾವು ತಮ್ಮ ಕಾನೂನಿನ ಬಲವನ್ನು ನಮ್ಮ ಹಕ್ಕು ಬಾಧ್ಯತೆಗಳಿಗೆ ಧಕ್ಕೆ ಬರತಕ್ಕ ರೀತಿಯಲ್ಲಿ ಬೆಳೆಸಬಾರದು. ಆದುದರಿಂದ ತಾವು ನಮ್ಮ ಹಕ್ಕು ಬಾಧ್ಯತೆಗಳನ್ನು ಉಳಿಸಿಕೊಂಡು ಅದನ್ನು ರಕ್ಷಣೆ ಮಾಡಿಕೊಂಡು ಬರುವುದಕ್ಕೆ ಒಂದು ಅವಕಾಶವನ್ನು ಕಲ್ಪಿಸಿಕೊಡಬೇಕೆಂದು ನಾನು ತಮ್ಮಲ್ಲಿ ಅತಿ ವಿನಯದಿಂದ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ನಮಗೆ ಮೆಜಾರಿಟಿ ಪಕ್ಷದವರು ಅವರ ಮನಸ್ಸಿಗೆ ಏನು ಬರುತ್ತದೆಯೋ ಅದನ್ನು ಅವರು ಮಾಡಬಹುದು. ಈ ದಿವಸ ನಾವು ಇಲ್ಲಿ ಪರಿಶೀಲಿಸಬೇಕಾದ ಬಹು ಪ್ರಾಮುಖ್ಯವಾದಂಥ ವಿಚಾರಗಳಿ ಅನೇಕ ಇರುತ್ತವೆ. ಆದುದರಿಂದ ಮೊದಲು ನಮ್ಮ ಕಾರ್ಯಕ್ರಮದ ಪಟ್ಟಿಯಲ್ಲಿದ್ದ ಪ್ರಕಾರ ಆ ವಿಚಾರಗಳನ್ನು ಚರ್ಚೆಮಾಡುವುದಕ್ಕೆ ಅವಕಾಶ ಮಾಡಿಕೊಟ್ಟಿದ್ದಾರೆ, ಅನಂತರ ಈ ಸಂಬಳದ ಪ್ರಶ್ನೆಯನ್ನು ಚರ್ಚೆಗೆ ತೆಗೆದುಕೊಳ್ಳಬಹುದು ಎಂದು ಸಲಹೆ ಮಾಡುತ್ತೇನೆ.

**Sri H.SIDDDVEERAPPA :** May I say one thing ? We know you will put to the vote and we know how many …….

**Mr. SPEAKER :** If he does anot ant let him say so.

**Sri H.SIDDVEERAPPA :** No. We want you to uae your discretion, previlige and prerogative. You have seen me. Jf every thing can be done mechanically bu putting to vote, What can I say ? I Certainly want to say so many things. We have to say something against you willy nilly mostly……

**Mr.SPEAKER :** Will he think that anything that has happened…..

**Sri SIDDVEERAPPA :** The only point is have seen the sense of the House. If the opposition reflects nearly half the population of the state or may be a little less, you will have to take in to consideration that there is a large section who feel agigated on this subject . The only point is in view of this ,I do not want it to be put to the vote of the house. If you still want to put, it is a different matter. Ultimately you say majority will have as way. I only want in view of the important you must give us as way.I only want in view of the importance you must give us adequate time and if you want to be guided only by the show of hands, that is not the fair way of dealing with and correct way of dealing with the matter.That is not the equitable way of doing things. That is what I have to say.

**Mr. SPEAKER :** Now, has Sri Siddveerappa, made a suggestion or motion.

**Sri SIDDAVEERAPPA :** I made a suggestion.

**Mr. SPEAKER :** Does he want me to put it to the house ?

**Sri SIDDVEERAPPA :** I Want you to exercise your power.

**Mr, SPEAKER :** How can I ?

**Sri SIDDVEERAPPA :** As a Speaker you have to feel the pulse of the whole House and if you are satisfied there is not sufficient discussion on this Bill …….

**Sri.K.H. PATIL :** Sir, On a point of order. Under rule 300 it is the speaker who can fix a time limit or give such time as may be necessary to make the people understand the consecuences of the Bill before us everything need not be put to the house.Vast power is given to the speaker. Therefore, Iam requesting Sri Siddveerappa not to move it in the form of motion but to prevail upon the speaker in the interest of justice to give such time as the opposition require so that we can enlighten the people on the point.

**Sri H.SIDDAVEERAPPA :** I am much obliged to my friend. I was not moving a motion.

**Mr. SPEAKER :** There is no motion and therefore I am not putting to the vote of the house. Sri patil pointed out that I have the power nobody else has power. I think it is out of more foundness for me he imagines like that. That advisory committee has been constituted committee has approved by the House.

**Sri, K.H. PATIL :** Having hear I the advice given by the Chair, there is nothing much to be discussed. Prima facie there is a breach of privilege. The only point to be verified is whether the press has reported it correctly or not, which will have to be verified after the hon'ble Member Sri, Nijalingppa comes here. I have no qurrel about it. I am urging the matter to be ended today. Think

the Chair Is convinced and satisfied that there is a breach of privilege as admitted by the Ruling party. If the press report is correct , there is breach of previlige; If it is false, then there is no breach of previlige. But, for purpose of classification are we pressed according to Law ? There is no law giving him that previlige. It is equal to anybody . We are marking discrimination in administrative matters. But, let us not make discrimination between members on the floor of this House. Therefore, I am bringing to your kind notice that the consent of the speaker is necessary.

**Mr. DEPUTY SPEAKER :** I have stated that I will take up on Saturday .There is another notice of breach of privilege given by Sri H.Sidveerappa.

**Sri K.H.PATIL :** With due respect to you, Sir, I wish to bring to your kind notice something about the concent of the speaker. The Practice in the House of commons is the Speaker requires to be satisfied whether there is a Pirma facie case and when a breach of privilege has been committed the matter is raised at the earliest opportunity . In India the Speaker gives his consent only when he is satiafied that there is a Pirma facie case. The statement was made by the Chief Minister yestardy and it has been brought to the Hon'ble Speaker before the commencement of the Session today. As regards the question of Prima faice case, we entirely agree about it on this Side. Even some members may agree on the other side also . By reading the Papers, we are given to understand like that . When both the parties agree ……

**Sri D.M. SIDDIAH :** I never agreed .Don't try to pass on the blame to me !

**Mr. DEPUTY SPEAKER :** The member will please send that book to me.

**K.H.PATIL :** If the press report is to be understood by a sensible person and if it is to be read in the real sense, there is a Prima facie case; there is breach of privilege.

**Mr. DEPUTY SPEAKER :** After hearing the Chief Minister when he comes , I can come to the conclusion whether this is in order. I will take it up on Saturday.

**Sri K.H. PATIL :** If he does not come, the Speaker's right can't be extinguished .The Chair can bring anybody who is to be convicted under the privilege ; the chair can issue an order of arrest to hon'ble Sri Nijalingppa and bring him here and then we shall discuss the matter.

**Mr. DEPUTY SPEAKER :** I have received another Notice from Sri H. Siddveerappa

**ಶ್ರೀ ಎಸ್. ಚನ್ನಯ್ಯ :** ಇದೇನು ಸ್ವಾಮಿ? ಹುಡುಗಾಟ ಆಗುತ್ತಾ ಇದೆ. ಇದು ಅಸೆಂಬ್ಲಿ ಅಲ್ಲ ಎಂದು ಹೇಳುತ್ತೇನೆ. ತಾಲ್ಲೂಕು ಬೋರ್ಡಿಗಿಂತಲೂ ಕಮ್ಮಿ ಆಗಿದೆ.

**ಉಪಾಧ್ಯಕ್ಷರು :** ತಮ್ಮಲ್ಲಿ ಒಂದು ವಿಷಯ ಹೇಳುತ್ತೇನೆ.

**ಶ್ರೀ ಎಸ್. ಚನ್ನಯ್ಯ :** ಅವರ ಬರುವಿಕೆಗೆ ಕಾಯಬೇಕಾದ ಕಾರಣ ಇಲ್ಲ, ಕಾನೂನು ಪ್ರಕಾರ ಏನೂ ಮಾಡಬೇಕೋ ಅದನ್ನು ಮಾಡಿ ಇತ್ಯರ್ಥ ಮಾಡಿ ಬಿಡಿ. ಅವರು ಬರುವವರೆಗೂ ಹೇಗೆ ಕಾಯುವುದಕ್ಕೆ ಆಗುತ್ತದ ?

**ಉಪಾಧ್ಯಕ್ಷರು :** ಪರಿಶೀಲನೆ ಮಾಡುತ್ತೇನೆ. ಕಾಲಾವಕಾಶ ಕೊಡಿ ಎಂದು ಹೇಳುತ್ತಾ ಇದ್ದೇನೆ.

**ಶ್ರೀ ಎಸ್. ಚನ್ನಯ್ಯ :** ಈ ರೀತಿ ಹೇಳಿದರೆ ಆಶ್ಚರ್ಯವಾಗುತ್ತದೆ. ಎರಡು ಗಂಟೆ ಮುಂಚಿತವಾಗಿ ಕೊಟ್ಟಿರುವ ಪೇಪರ್‌ನ್ನು ಇನ್ನೂ ನೋಡಿಲ್ಲ ಅಂತ ಅಂದರೆ ನಮಗೆ ಅರ್ಥ ಆಗುವುದಿಲ್ಲ.

**ಉಪಾಧ್ಯಕ್ಷರು :** ಎರಡು ಗಂಟೆ ಮುಂಚಿತವಾಗಿ ಬಂದಿಲ್ಲ.

**ಶ್ರೀ ಎಸ್. ಚನ್ನಯ್ಯ :** ಒಂದು ಒಂದೂವರೆ ಗಂಟೆ ಆಯಿತು ಕೊಟ್ಟು.

**ಉಪಾಧ್ಯಕ್ಷರು :** ಅದನ್ನು ಪರಿಶೀಲನೆ ,ಮಾಡಬೇಕು, ನಾನೂ ಕೂಡ ಸ್ವಲ್ಪ ಯೋಚನೆ ಮಾಡಬೇಕಾಗುತ್ತದೆ.

**ಶ್ರೀ ಮಹದೇವ ಬಣಕಾರ (ಬ್ಯಾಡಗಿ) :** ಇದು ಒಂದು ಸಾರಿ ಇತ್ಯರ್ಥವಾಗಬೇಕು. ಅವರು ಮುಖ್ಯ ಮಂತ್ರಿಗಳಾಗಿದ್ದರೂ ಸರಿ, ಕಾಂಗ್ರೆಸ್ ಅಧ್ಯಕ್ಷರಾಗಿದ್ದರೂ ಸರಿ ಅಥವಾ ಅವರೇ ಹೇಳಿಕೊಢಿರುವಂತೆ ಚಿತ್ರದುರ್ಗದಲ್ಲಿ ಯಾವುದಾದರೂ ಒಂದು ಗುಡಿಸಲಿನಲ್ಲಿ ಇದ್ದರೂ ಸರಿ, ಅದರಿಂದ ನಮಗೇನು ತೊಂದರೆ ಇಲ್ಲ. ಆದರೆ ಇವತ್ತು ಮಾಡಿರುವ ಹೇಳಿಕೆ ನೋಡಿದರೆ ಈ ರಾಜ್ಯದ ಮುಖ್ಯ ಮಂತ್ರಿಗಳಿಗೆ ಬೆಲೆಯೇ ಇಲ್ಲ. ಅವರು ಹುಚ್ಚಾಸ್ಪತ್ರೆಲ್ಲಿರುವುದಕ್ಕೆ ಲಾಯಕ್ಕು, ಹುಚ್ಚಾಸ್ಪತ್ರೆಗೆ ಹೋಗಲಿ ಎಂದು ತೀರ್ಮಾನ ಮಾಡಿದ್ದಾರೆ. ಅವರ ಬಗ್ಗೆ ಟೀಕೆ ಮಡಬೇಕೆಂದು ಅಲ್ಲ.

**Mr. DEPUTY SPEAKER :** The Hon'ble Member should use healthy words. Those words should be expunged.

**Sri K.H. PATIL :** In the absence of the Chief Minister, when in all other matters, Hon'ble Sri Jatti takes the opportunity of replying on his behalf, why should he not give a reply now and say that the Chief Minister will be tendering his resignation on such and such a day.

**(Laughter)**

**ಶ್ರೀ ಎಂ.ಜಿ. ಬಣಕಾರ :** ಈ ರಾಜ್ಯದಲ್ಲಿ ಮುಖ್ಯ ಮತ್ರಿಗಳಾಗಲು ಯಾರಿಗೂ ಅರ್ಹತೆ ಇಲ್ಲ ಅಂತ ಅವರು ತಿಳಿದುಕೊಂಡಿದ್ದಾರೆಯೇ ಹೇಗೆ? ಜತ್ತಿಯವರು ಮುಖ್ಯ ಮಂತ್ರಿಗಳಾಗಿರಲಿಲ್ಲವೇ? ಅವರು ನನ್ನನ್ನು ಬಿಟ್ಟರೆ ಮುಖ್ಯ ಮಂತ್ರಿಗಳಾಗತಕ್ಕವರು ಈ ದೇಶದಲ್ಲಿ ಯಾರೂ ಇಲ್ಲ ಎಂದು ಭಾವನೆ ಮಾಡಿಕೊಂಡಿದ್ದಾರೆ. ಆ ರೀತಿ ಮಾತನಾಡುತ್ತಾ ಇದ್ದಾರೆ. ಅವರು ಮುಳುಗಿದರೆ ದೇಶವೆಲ್ಲ ಮುಳುಗಿ ಹೋಗುವುದಿಲ್ಲ. ಅವರು ಅವರ ಒಂದು ಕೊನೆ ಇತ್ಯರ್ಥ ಈ ರಾಜಕೀಯದಲ್ಲಿ ಆಗಲಿ ಎಂದು ಆಶಿಸಿದ್ದೇನೆ. ದಯವಿಟ್ಟು ತಾವು ಇದಕ್ಕೆ ಅವಕಾಶ ಕೊಡಲೇಬೇಕು ಎಂದು ಹೇಳುತ್ತೇನೆ.

**ಉಪಾಧ್ಯಕ್ಷರು :** ಅಧ್ಯಕ್ಷನಾಗಿ ಏನು ಕರ್ತವ್ಯ ಮಡಬೇಕೋ ಅದನ್ನು ಮಾಡುತ್ತೇನೆ.

**ಶ್ರೀ ಎಸ್. ಚನ್ನಯ್ಯ :** ಇಷ್ಟು ಹೇಳಿದ ಮೇಲೆ ನಾವು ತಮ್ಮ ಕಾರ್ಯದಲ್ಲಿ ತಮ್ಮ ಮರ್ಯಾದೆಯನ್ನು ಕಾಪಡಬೇಕಾದ್ದು ನಮ್ಮ ಕರ್ತವ್ಯ. ನನಗೆ ಏನು ಅನ್ನಿಸುತ್ತದೆ ಎಂದರೆ ಇದು ಮೂರು ನಾಲ್ಕಾವರ್ತಿ ಇಲ್ಲಿ ಚರ್ಚೆ ಬಂದಿದೆ. ಈ ರೀತಿ ಪದೇ ಪದೇ ಚರ್ಚೆಯಾಗುವುದಕ್ಕೆ ಅವಕಾಶ ಕೊಡಬಾರದು. ಈಗಲೂ ಶನಿವಾರದ ದಿನ ಅವರು ಬರದೇ ಇದ್ದರೂ ಈ ಪ್ರಶ್ನೆ ತೆಗೆದುಕೊಳ್ಳುತ್ತೇವೆ, ಒಂದು ಇತ್ಯರ್ಥಕ್ಕೆ ಬರುತ್ತೇವೆ ಅಂತ ಅನ್ನುವುದಾದರೆ ಖಂಡಿತವಾಗಿಯೂ ಒಪ್ಪಿಕೊಳ್ಳುತ್ತೇವೆ.

**ಉಪಾಧ್ಯಕ್ಷರು :** ಇತ್ಯರ್ಥವನ್ನು ಮಾಡುತ್ತೇನೆ ಎಂದು ಆಗಲೇ ಹೇಳಿದೆ.

## 2nd September to 12th September 1968

**ಶ್ರೀ ಸಿ. ಆರ್. ರಂಗೇಗೌಡ (ಮಾಗಡಿ) :** ಮಾನ್ಯ ಅಧ್ಯಕ್ಷರೇ, ಶ್ರೀ ಮಾನ್ ಬಾಳಿಗಾರವರ ನಿಧನದಿಂದ ನಾವೆಷ್ಟು ದುಖ:ದಿಂದ  ಇದ್ದೇವೆ ಎನ್ನುವುದಕ್ಕೆ ಇಂದು ಇಲ್ಲಿ ಇಗಾಗಲೇ ವ್ಯಕ್ತಪಡಿಸಿದ ಅಭಿಪ್ರಾಯಗಳಿಂದ ನಮಗೆ ಗೊತ್ತಾಗುತ್ತದೆ. ನನಗಂತೂ ವಯಕ್ತಿಕವಾಗಿ ಅವರು ಸಹೋದರರಾಗಿ ಇದ್ದರು ಮತ್ತು ಅವರ ಕುಟುಂಬದ ಒಬ್ಬ ವ್ಯಕ್ತಿಯಾಗಿಯೂ ಇದ್ದೆ. ಅವರು ಸಮಷ್ಟಿ ಕುಟುಂಬದ ಒಬ್ಬ ವ್ಯಕ್ತಿಯಾಗಿ ಎಲ್ಲರಿಗೂ ಒಂದು ಮಾರ್ಗದರ್ಶನ ನೀಡುತ್ತಿದ್ದರು. ಇಂತಹ ವ್ಯಕ್ತಿ ಲಾಭ ಇಂದು ನಮಗೆ ಇಲ್ಲ. ಇದರ ಲಾಭವನ್ನು ವೈಕ್ತಿಕವಾಗಿ ನಾನು ಪಡೆಯುತ್ತಿದ್ದೆ. ಇವರಲ್ಲಿದ್ದ ವಿಶಾಲ ದೃಷ್ಟಿ, ಸಮತೆ, ಅಂತ:ಕರಣ ಹಾಗೂ ಪ್ರೀತಿ ವಿಶ್ವಾಸಗಳನ್ನು ನಾವೆಲ್ಲರೂ ಜೊತೆಯಲ್ಲಿದ್ದು ಪಡೆಯುತ್ತಿದ್ದೆವು. ಆದುದರಿಂದ ಇಂತಹ ಗೌರವವನ್ನು ಪಡೆದಂತಹ ವ್ಯಕ್ತಿ ಇಂದು ನಮ್ಮ ಮುಂದೆ ಇಲ್ಲ. ಅವರು ಜನರೆಲ್ಲರ ಸ್ನೇಹಿತರಾಗಿದ್ದರು ಅವರಲ್ಲಿ ಬಡವ ಬಲ್ಲಿದರು ಎನ್ನುವ ಬೇಧ ಭಾವವೇ ಇರುತ್ತಿರಲಿಲ್ಲ. ಇಂಹತ ಒಂದು ಉನ್ನತ ಸಂಪ್ರದಾಯಗಳನ್ನು ಸ್ಥಾಪಿಸಿದ ಮಹಾನ್ ವ್ಯಕ್ತಿಯಾಗಿದ್ದರು. ಇಂತಹ ವ್ಯಕ್ತಿಗಳು ಇನ್ನು ಮುಂದೆ ನಮ್ಮ ಈ ಸಭೆಯ ಅಧ್ಯಕ್ಷ ಸ್ಥಾನಕ್ಕೆ ಸಿಗುವುದು ದುರ್ಲಭ ಎಂದು ಹೇಳ ಬೇಕಾಗುತ್ತದೆ. ಇವರೊಡನೆ ಒಂದು ಸಾರಿ ನಾನು ಸೇರುವ ಸಂದರ್ಭ ಬಂದಿತ್ತು. ಮೈಸೂರು ಸಂಸ್ಥಾನದ ಕಾಂಗ್ರೆಸ್  ಸಮಿತಿಯಲ್ಲಿದ್ದಾಗ ಇವರು ಒಂದು ಸಮ್ಮೇಳನವನ್ನು ರಾಷ್ಟ್ರೀಯ ವಿಸ್ತರಣಾ ಯೋಜನೆಗಳ ಸಂದರ್ಭದಲ್ಲಿ ಮಡಿದ ಒಂದು ಸಬ್ ಕಮೀಟಿಯಲ್ಲಿ ಇವರೊಡನೆ ಕುಳಿತು ಕೆಲಸ ಮಡುವ ಸನ್ನಿವೇಶ ಬಂದೊದಗಿತ್ತು. ಆಗ ಅವರು ನೀಡಿದಂತಹ ಮಾರ್ಗದರ್ಶನಗಳು

ಇನ್ನೂ ನನ್ನ ಮನಸ್ಸಿನಲ್ಲಿ ಅಚ್ಚಳಿಯದೇ ಇದೆ. ಇವರು ನನ್ನನ್ನು ಒಂದು ಶಿಶು ಬೆಳಸಿದಂತೆ ತಂದೆಯೋಪಾದಿಯಲ್ಲಿದ್ದರು. ಇವರು ನನಗೆ ಸ್ನೇಹಿತರು ಹಾಗೂ ಗುರುಗಳಾಗಿಯೂ ಇದ್ದರು. ಇದು ಅವರ ಮಮತೆಯ ಪ್ರತೀಕವನ್ನು ತೋರಿಸುತ್ತದೆ. ಇವರು ಆಗಾಗ್ಗೆ ನನ್ನನ್ನು ಕರೆದು ಒಂದು ಸಂಸ್ಥೆಯಲ್ಲಿ ಯಾವ ರೀತಿ ಕೆಲಸ ಮಾಡಬೇಕು ಎನ್ನುವುದರ ಬಗ್ಗೆ ಅವರು ಪದೇ ಪದೇ ಹೇಳುತ್ತಿದ್ದರು. ಈಗಾಗಲೇ ಮಾನ್ಯ ಸದಸ್ಯರಾದ ಶ್ರೀಮಾನ್ ಹುಚ್ಚ ಮಾಸ್ತಿಗೌಡರು ಹೇಳಿದಂತೆ ನಮ್ಮ ದೇಶಕ್ಕೆ ಆಗಬೇಕಾದ ಕೆಲಸಗಳನ್ನು ಹೊರಗಡೆಗೆ ಹೋಗಿ ಹೇಗೆ ಮಾಡಿಕೊಂಡು ಬರುತ್ತಿದ್ದರು ಎನ್ನುವುದು ನಮಗೆ ಗೊತ್ತಾಗುತ್ತದೆ. ಅವರು ದೆಹಲಿಗೆ ಹೋದಾಗ ಈ ದೇಶಕ್ಕೆ ಆಗಬೇಕಾದ ಕೆಲಸಗಳ ಬಗ್ಗೆ ಅವನ್ನು ಪರಿಶೀಲನೆ ಮಾಡಿ ಅವು ಕಾರ್ಯಗತವಾಗುವಂತೆ ಮಾಡಲು ಬಹಳ ಸಹಾಯ ಮಾಡುತ್ತಿದ್ದರು. ಇಂತಹ ಉನ್ನತ ವ್ಯಕ್ತಿ ಇಂದು ನಮ್ಮ ಮುಂದೆ ಇಲ್ಲ. ಇದರಿಂದ ಇಂದು ನಮ್ಮ ದೇಶ ಅನಾಥವಾಗಿದೆ ಎಂದು ಹೇಳಬೇಕಾಗಿದೆ. ಆದರೆ ಅವರು ಹಾಕಿಕೊಟ್ಟುವಂತಹ ಮಾರ್ಗದರ್ಶನಗಳನ್ನು ಪ್ರತಿಯೊಬ್ಬರು ಅನುಸರಿಸಿಕೊಂಡು ಹೋದರೆ ಅದೇ ಸೂಕ್ತವಾಗಿರುತ್ತದೆ. ಈ ದಿವಸ ಅವರು ನಮ್ಮ ಮುಂದೆ ಇಲ್ಲದಿದ್ದರೂ ಅವರು ಹಾಕಿಕೊಟ್ಟಿರುವಂತಹ ಮಾರ್ಗದರ್ಶನಗಳು ನಮ್ಮ ಮುಂದೆ ಇವೆ. ಇಂತಹ ಉನ್ನತ ವ್ಯಕ್ತಿಗೆ ಚಿರ ಶಾಂತಿ ದೊರೆಯಲಿ ಮತ್ತು ಇವರ ನಿಧನದಿಂದ ಆಗಿರುವ ದು:ಖವನ್ನುಭರಿಸುವ ಶಕ್ತಿಯನನು ಅವರ ಕುಟುಂಬದವರಿಗೆ ಭಗವಂತನು ಕೊಡಲಿ ಎಂದು ನಾನು ಇಲ್ಲಿ ಪ್ರಾರ್ಥಿಸುತ್ತೇನೆ ಮತ್ತು ಮಾನ್ಯ ಸಭಾ ನಾಯಕರು ಇಂದು ಇಲ್ಲಿ ತಂದಿರುವ ನಿರ್ಣಯಕ್ಕೆ ಸಂಪೂರ್ಣ ಬೆಂಬಲವನ್ನು ಕೊಟ್ಟು ನನ್ನ ಮಾತನ್ನು ಮುಗಿಸುತ್ತೇನೆ.

## 2 – 00 P.M

**ಶ್ರೀ ಮಹದೇವ ಬಣಕಾರ (ಬ್ಯಾಡಗಿ) :** ಮಾನ್ಯ ಅಧ್ಯಕ್ಷರೇ, ಈವರೆಗೂ ನನ್ನ ಅನೇಕ ಮಾನ್ಯ ಹಿರಿಯ ಸ್ನೇಹಿತರು ದಿವಂಗತ ಬಾಳಿಗಾರವರ ಸದ್ಗುಣ, ಸೌಜನ್ಯ ಹಾಗೂ ಅವರ ಸರಳತನಗಳ ಬಗ್ಗೆ ಅನೇಕ ವಿಷಯಗಳನ್ನು ತಮ್ಮ ಮುಂದಿಟ್ಟಿದ್ದಾರೆ. ನಾನೂ ಕೂಡ ಅವರ ವಿಷಯದಲ್ಲಿ ನನ್ನ ಶ್ರದ್ಧಾಂಜಲಿಯನ್ನರ್ಪಿಸಲು ಒಂದು ಸಣ್ಣ ಕವನವನ್ನು ರಚಿಸಿದ್ದೇನೆ: ಸೃಷ್ಟಿ ಬಹಳ ವಿಶಾಲವಾದದ್ದು. ದಿಗಂತದವರೆಗೂ ಮಂಜು ಹನಿ ಬಿಂಬಿಸಿಕೊಳ್ಳುವಂತೆ ಈ ಸದನದ ಅಧ್ಯಕ್ಷರಾಗಿದ್ದ ದಿವಂಗತ ಬಾಳಿಗಾರವರಲ್ಲಿ ನಂದದ ಬೆಳಕು, ಶಾಂತಿ,

ತಾಳ್ಮೆಗಳು ತುಂಬ ತುಳುಕುತ್ತಿದ್ದವು. ಅಂತಾ ಒಬ್ಬ ಆದರ್ಶ ಮೂರ್ತಿಗಳು ಈ ದಿವಸ ನಮ್ಮೆಲ್ಲರನ್ನೂ ಬಿಟ್ಟು ಅಗಲಿದ್ದಾರೆ. ಆದಾಗ್ಯೂ ಅವರು ನಮ್ಮೆಲ್ಲರ ಹೃದಯದಲ್ಲೂ ಆಸನರೂಢರಾಗಿದ್ದಾರೆ. ಆ ದಿವಂಗತ ಬಾಳಿಗಾರವರ ಬಗ್ಗೆ ನನ್ನ ಶ್ರದ್ಧಾಂಜಲಿಯನ್ನರ್ಪಿಸಲು ನಾನು ಈ ಒಂದು ಸಣ್ಣ ಕವನವನ್ನು ರಚಿಸಿದ್ದೇನೆ.

ಬಾಳಿಗರೆ ನಿಮ್ಮಡಿಗೆ ಶ್ರದ್ಧಾಂಜಲಿ
ಅರ್ಪಿಸುವೆ ತನುಮನದ ಪುಷ್ಪಾಂಜಲಿ ಪಲ್ಲವಿ
ಸೌಜನ್ಯ ಸರಳತೆಯ ಮೈವೆತ್ತ ಮೂರ್ತಿ
ದಿಗ್ ದಿಗಂತಕು ಹಬ್ಬಿನಿಂತ ಕೀರ್ತಿ –
ಹಣ್ಣಾದ ಹೃದಯದಲ್ಲಿ ಹಾಲು ಜೇನು
ಮರಳಿ ಭೂಮಿಗಿಳಿದೊಮ್ಮೆ ಬಾರದೇನು? –
ತುಂಬಲಾರದ ಹಾನಿ ದೇಶಕಾಯ್ತು
ಮಾರ್ಗದರ್ಶನವೆಮಗೆ ದೊರೆಯದಾಯ್ತು –
ಸಮತೆ ಮಮತೆಗೆ ಮೀಸಲಿಟ್ಟ ಜೀವ
ಶುಭ್ರ ಸಾದೃಪ್ಯ ಶಿಖರ ನಿಮ್ಮ ಭಾವ –
ಹೃತ್ಕಮಲ ಜೀವಿತಕೊಂಡು ವಿಧಿಯು
ಕೊಂಡು ಒಯ್ದಿತ್ತು ನಮ್ಮ ನಾಡ ವಿಧಿಯು–
ಬಾಳಿಗರೆ ನಿಮ್ಮಡಿಗೆ ಶ್ರದ್ಧಾಂಜಲಿ
ಅರ್ಪಿಸುವೆ ತನುಮನದ ಪುಷ್ಪಾಂಜಲಿ

ಇಷ್ಟು ಹೇಳಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

**ಶ್ರೀ ಅಜೀಜ್ ಸೇಟ್ (ನರಸಿಂಹರಾಜ) :** ಮಾನ್ಯ ಶ್ರೀ ನಂಜೇಗೌಡರು ತಂದಿರುವ ಸೂಚನೆ ಲೋಕೋಪಯೋಗಿ ಶಾಖೆಯ ಮಂತ್ರಿಗಳಾಗಿರುವ ಮಾನ್ಯ ಶ್ರೀ ಲಕ್ಕಪ್ಪನವರಿಗೆ ಸಂಬಂಧಪಟ್ಟದ್ದು. ಇನ್ನೂ ಅದು ಪಾರ್ಲಿಮೆಂಟರಿ ಅಫೇರ್ಸ್‌ಗೆ ಸಂಬಂಧಪಟ್ಟ ಮಂತ್ರಿಗಳಾದ ಮಾನ್ಯ ಶ್ರೀ ಪುಟ್ಟಸ್ವಾಮಿಯವರಿಗೆ ಸಂಬಂಧಪಟ್ಟದ್ದೂ ಸಹ ಇದೆ. ಇದೇನು ಅವರ ಪ್ರಾಪರ್ಟಿ ಅಲ್ಲ. ಇದು ಮಂತ್ರಿಗಳಿಗೂ ಮತ್ತು ಸದಸ್ಯರಿಗೂ ಸಂಬಂಧಪಟ್ಟ ಪ್ರಶ್ನೆ ಇವೊತ್ತು ಬಂದಿದೆ. Ministers are not only answerable to the people. But they are answerable to the Members of this House. They are subordinates to this House.

The policy that is farmed by this House has to be carried out by them. It is their duty to carry it out. Otherwise they will be considered incapable and we have power to dismiss them. ನಾವು ಇಲ್ಲಿ ಏನು ಪಾಲಿಸಿ ಇಟ್ಟುಕೊಂಡು ಲಾ ಮಾಡುತ್ತೇವೋ ಅದರಂತೆ ನಡೆದುಕೊಂಡು ಹೋಗುವ ಕರ್ತವ್ಯ ಇವರದು. ಒಂದು ವೇಳೆ ಅವರು ಈ ರೀತಿ ನಡೆಯದಿದ್ದರೆ ಇವರನ್ನು ಡಿಸ್‌ಮಿಸ್ ಮಾಡುವ ಹಕ್ಕು ನಮ್ಮಲ್ಲಿದೆ. ಪ್ರತಿ ಶನಿವಾರ ದಿವಸ ಜಲದರ್ಶನಿಯಲ್ಲಿ ಕೂತು ಕೆಲವು ಗುಂಪು ಕಟ್ಟಿಕೊಂಡು ಏನು ಮಿಟಿಂಗ್ ಮಾಡುವುದು ಅಂದರೆ, ಯಾವ ಆಸ್ತಿ ಹೇಗೆ ಮಾಡಬೇಕು, ಯಾವ ಹೊಲದಲ್ಲಿ ಯಾವ ರೀತಿ ಪೆಟ್ರೋಲ್ ಬಂಕ್‌ನ್ನು ಕಟ್ಟಲು ಜಾಗ ಕೊಡಬೇಕು ಎಂಬುದೇ ಆಗಿದೆ. ಇದರಿಂದ ನಮಗೆ ಮೂರು ಕಾಶಿನ ಮರ್ಯಾದೆ ಕೂಡ ಬರುವ ಸಂದರ್ಭ ಇಲ್ಲ. ಆದ್ದರಿಂದ ಇದನ್ನು ಪ್ರಿವಿಲೇಜ್ ಮೋಷನ್ ಎಂದು ತೀರ್ಮಾನ ಮಾಡಬೇಕು. ಇದರಲ್ಲಿ ನಮ್ಮ ಮಾನ ಮರ್ಯಾದೆ ಮತ್ತು ನಮ್ಮ ಹಕ್ಕು ಬಾಧ್ಯತೆಗಳನ್ನು ಕಾಪಾಡುವ ಪ್ರಶ್ನೆ ಇದೆ ಎಂದು ನಾನು ಹೇಳುತ್ತೇನೆ. ಆದ್ದರಿಂದ ಈ ವಿಚಾರವನ್ನು ಇಲ್ಲಿ ಪೂರ್ಣವಾಗಿ ಚರ್ಚೆ ಮಾಡಬೇಕು. ಇವರು ಏನೇನು ಮಾಡಿದ್ದಾರೆಂದು ನೋಡಿದರೆ, ಈ ಮನೆಯಲ್ಲಿ ಇವರು ಇರಲಿಕ್ಕೆ **** ಈ ಸಭೆಗೆ ಸ್ವಲ್ಪ ಮಾನ, ಮರ್ಯಾದೆ ಬೇಡವೆ. ಆದ್ದರಿಂದ ನನ್ನ ಸ್ನೇಹಿತರು ತಂದಿರುವ ಸೂಚನೆ ಇಲ್ಲಿ ಪೂರ್ಣ ಚರ್ಚೆಯಾಗಬೇಕು. ಏಕೆಂದರೆ ನಮ್ಮ ಹಕ್ಕು ಬಾಧ್ಯತೆಗಳನ್ನು ಇವರು ಕೊಲೆ ಮಾಡಬಾರದು. ತಾವು ಇರುವುದು ಇವತ್ತು ಒಂದೇ ದಿವಸ ನಾಳೆ ನಮ್ಮ ಕಂಠೀರವರು ಅಲ್ಲಿ ಬರುತ್ತಾರೆ.

**ಉಪಾಧ್ಯಕ್ಷರು :** ಇದರಲ್ಲಿಯೇ ಕಾಲ ಕಳೆಯುವುದಾದರೆ ನನ್ನ ಅಭ್ಯಂತರವೇನು ಇಲ್ಲ. ಅಭಾವ ಪರಿಸ್ಥಿತಿಯ ಮೇಲೆ ಚರ್ಚೆ ಮಾಡಲು ಒಂದು ದೊಡ್ಡ ಪಟ್ಟಿಯನ್ನು ಕೊಟ್ಟಿದ್ದಾರೆ.

**ಶ್ರೀ ಟಿ.ಎಸ್.ಶಿವಣ್ಣ :** On a Point of Order,sir, ಈ ಹಿಂದೆ ಮಾತನಾಡಿದಂತಹ ಮಾನ್ಯ ಸದಸ್ಯರು ಮತ್ತು ಮಂತ್ರಿಗಳು ***** ಎಂಬುದಾಗಿ ಆನ್‌ಪಾರ್ಲಿಮೆಂಟರಿ ಎಂಬುದಾಗಿ ಆನ್‌ಪಾರ್ಲಿಮೆಂಟರಿ ಪದಗಳನ್ನು ಉಪಯೋಗಿಸಿದ್ದಾರೆ. ಅದು ಸರಿಯೇ ತಪ್ಪೇ ವಿಚಾರ ಮಾಡಬೇಕು.

**ಉಪಾಧ್ಯಕ್ಷರು :** ಅದು ಸರಿಯಲ್ಲ. ಅದನ್ನು ಎಕ್ಸ್‌ಪಂಜ್ ಮಾಡುತ್ತೇನೆ.

**(ಸಭೆಯಲ್ಲಿ ಗೊಂದಲ)**

**ಶ್ರೀ ವಾಟಾಳ ನಾಗರಾಜ್ (ಚಿಕ್ಕಪೇಟೆ) :** ****

**ಉಪಾಧ್ಯಕ್ಷರು :** ರೂಲ್ಸ್ ಆಫ್ ಪ್ರೊಸೀಜರನ್ನು ತಾವು ದಯವಿಟ್ಟು ಫಾಲೊ ಮಾಡಬೇಕು. ಈ ಸಭೆಯಲ್ಲಿ ಈ ತರಹ ಮಾಡಿದರೆ ಈ ಸಭೆಯನ್ನು ನಡೆಸುವುದಕ್ಕೆ ಕಷ್ಟವಾಗುತ್ತದೆ. ಮತ್ತು ಈ ಸಭೆಯ ಗೌರವವನ್ನು ಉಳಿಸಿಕೊಳ್ಳುವುದಕ್ಕಾಗುವುದಿಲ್ಲ. ಒಬ್ಬ ಸದಸ್ಯರು ಎದ್ದು ಕೇಳಿದರೆ ಸರಿ. ಅದಿಲ್ಲದೆ 3–4 ಜನರು ಒಂದೇ ಸಾರಿ ಎದ್ದು ಪಾಯಿಂಟ್ ಆಫ್ ಆರ್ಡರ್ ಎಂದು ಹೇಳಿ ಭಾಷಣ ಮಾಡುತ್ತೇವೆಂದು ಹೇಳಿದರೆ, ಅದು ಸರಿಯಲ್ಲ ಮಾನ್ಯ ಸದಸ್ಯರೆಲ್ಲರೂ ದಯವಿಟ್ಟು ರೂಲ್ಸನ್ನು ಗಮನಿಸಬೇಕು. ಹಾಗಿಲ್ಲದಿದ್ದರೂ ಈ ಸಭೆಯನ್ನು ನಡೆಸುವುದು ಬಹಳ ಕಷ್ಟವಾಗುತ್ತದೆ.

**ಶ್ರೀ ಎಂ.ಜಿ.ಬಣಕಾರ (ಬಾಡಗಿ) :** ಇಲ್ಲಿ ಕೆಲವು ಸದಸ್ಯರಿಗೆ ಕೂತರೆ ಏಳುವುದು ಗೊತ್ತಿಲ್ಲ. ಎದ್ದರೆ ಕೂತುಕೊಳ್ಳುವುದು ಗೊತ್ತಿಲ್ಲ. ಅವರು ನಿಂತೇ ಇರುತ್ತಾರೆ. ಕೂತುಕೊಳ್ಳುವ ಹಾಗೆ ಇಲ್ಲ. ಏಕೆಂದರೆ ಮಾನ್ಯ ಶ್ರೀ ಕಂಠಿಯವರು ನಾವೆಲ್ಲರೂ ಮಾತನಾಡುವವರಗೂ ಎದ್ದುನಿಂತೇ ಇದ್ದರು.

**ಶ್ರೀ ವಾಟಾಳ್ ನಾಗರಾಜ್ :** ಮಾನ್ಯ ಶ್ರೀ ನಂಜೇಗೌಡರು ಇಲ್ಲಿ ಒಂದು ಹಕ್ಕು ಬಾಧ್ಯತೆ ಪ್ರಶ್ನೆಯನ್ನು ತಂದಿದ್ದಾರೆ. ಅದು ನಮ್ಮೆಲ್ಲರಿಗೂ ಸಂಬಂಧಪಟ್ಟದು. 15 ಮತ್ತು 16 ನೇ ತಾರೀಖು ಅವರ ಜಿಲ್ಲೆಯಲ್ಲಿ ಮಂತ್ರಿಗಳಾದ ಶ್ರೀ ಲಕ್ಕಪ್ಪನವರು ಪ್ರವಾಸ ಮಾಡಿ ಅವರ ಬಗ್ಗೆ ಮಾಡಬಾರದ ರೀತಿಯಲ್ಲಿ ಅಪಪ್ರಚಾರ ಮಾಡಿ ಬಂದಿದ್ದಾರೆ. ಅವರು ಒಬ್ಬರೇ ಅಲ್ಲ. ಇನ್ನೂ ಕೆಲವರು ಇದ್ದಾರೆ. ಉದಾಹರಣೆಗೆ ಹೇಳುವುದಾರೆ ಮಾನ್ಯ ಶ್ರೀ ಎಚ್.ಪಿ.ಲಿಂಗಾರೆಡ್ಡಿಯವರು ಕೋಲಾರದ ಸ್ಥಳೀಯರಾಗಿರುವುದರಿಂದ ತಕ್ಷಣ ಡಿ.ಸಿ.ಸಿ ಮಿಟಿಂಗ್ ಕರೆದು ಬೇಕುಬೇಕಾದ್ದನ್ನೆಲ್ಲ ಮಾಡುತ್ತಿದ್ದಾರೆ.  ಈ ಎರಡು ಜಿಲ್ಲೆಗಳಲ್ಲಿ ಡಿಪಾಜಿಟ್ಟ ಕಳೆದುಕೊಂಡಿರತಕ್ಕವರ ಬಗ್ಗೆ ಅಪಪ್ರಚಾರ ಮಾಡುತ್ತಿದ್ದಾರೆ. ಇದಲ್ಲದೇ ವಿರೋಧ ಪಕ್ಷದವರಿಗೆ ಇವರ ಯಾವ ಒಂದು ಟೂರ್ ಪ್ರೋಗ್ರಾಂ ಸಹ ಕಳುಹಿಸಿಲ್ಲ. ಇವರು ಟಿ.ಬಿ. ಯಲ್ಲಿ ಏನೇನು ಮಡುತ್ತಾರೆಯೋ ಅದು ಕೂಡ ಗೊತ್ತಿಲ್ಲ. ಇವರು ನಿಜವಾಗಿ ನಮ್ಮನ್ನು ಸದಸ್ಯರೆಂದು ತಿಳಿದುಕೊಂಡಿದ್ದಾರೆಯೇ? ಮಂತ್ರಿಗಳು ಏನಾದರೂ ಚಕ್ರವರ್ತಿಗಳೆಂದು ತಿಳಿದುಕೊಂಡಿದ್ದಾರೆಯೇ? ಆಯಾ ಜಿಲ್ಲೆಗಳಲ್ಲಿ ಮಂತ್ರಿಗಳು ಟೂರ್ ಹೋದಾಗ ಅಲ್ಲಿರತಕ್ಕ ಸದಸ್ಯರು ಕಾಂಗ್ರೆಸ್ ಪಕ್ಷದ ಧ್ವಜವನ್ನು ಎತ್ತಿ ಹಿಡಿದುಕೊಂಡು ಹೋಗಿ ಅಪಪ್ರಚಾರ ಮಾಡುತ್ತಿದ್ದಾರೆ. ಆದ್ದರಿಂದ ಮಂತ್ರಿಗಳಿಗೆ ಈಗಲೇ ಎಚ್ಚರಿಕೆ ಕೊಡುತ್ತೇನೆ. ಅವರು ಸ್ವಲ್ಪ ವಿರೋಧಪಕ್ಷದವರನ್ನು ಗಮನದಲ್ಲಿಟ್ಟುಕೊಳ್ಳಬೇಕೆಂದು ನಾನು ಈ ಸಭೇಯಲ್ಲಿ ಹೇಳುತ್ತೇನೆ.

**ಶ್ರೀ ಎಂ.ಜಿ. ಬಣಕಾರ :** ಇದು ಕೇವಲ ಮಾನ್ಯ ಶ್ರೀ ಲಕ್ಕಪ್ಪನವರ ಮತತು ಶ್ರೀ ನಂಜೇಗೌಡರ ಪ್ರಶ್ನೆಯಲ್ಲ. ಇಡೀ ರಾಜ್ಯದಲ್ಲಿ ಮಂತ್ರಿಗಳು ಪ್ರವಾಸ ಹೋದಾಗ ಅಲ್ಲಿರತಕ್ಕ ಸ್ಥಳಿಯ ಸದಸ್ಯರನ್ನು ಕರೆದುಕೊಳ್ಳದೇ ಇರತಕ್ಕದ್ದು. ಈಗಾಗಲೇ ಕೆಲವರನ್ನು ಕಾಂಗ್ರೆಸ್ ಸದಸ್ಯರನ್ನಾಗಿ ಮಾಡಲು ಗುತ್ತಿಗೆ ಹಿಡಿದು ಪ್ರವಾಸಮಾಡುತ್ತಿದ್ದಾರೆ. ತಾಲ್ಲೂಕು ಬೋರ್ಡ್ ಚುನಾವಣೆಗಳಲ್ಲಿ ತಮ್ಮ ಪಕ್ಷದ ಸದಸ್ಯರನ್ನೇ ಗೆಲ್ಲಿಸುವ ಉದ್ದೇಶದಿಂದ ಪ್ರವಾಸ ಹಾಕಿಕೊಳ್ಳುತ್ತಿದ್ದಾರೆ. ಅವರು ಒಂದು ವೇಳೆ ಪಕ್ಷವನ್ನು ಬೆಳೆಸಬೇಕೆಂದರೆ ನಮ್ಮ ತಕರಾರು ಏನೂ ಇಲ್ಲ. ತಾಲ್ಲೂಕು ಬೋರ್ಡ್ ಚುನಾವಣೆ ಹತ್ತಿರ ಹತ್ತಿರ ಬಂದಂತೆಲ್ಲಾ ಬಿಸಿ ಕಾವು ಏರುತ್ತದೆ. ಈ ಪರಿಸ್ಥಿತಿ ಇನ್ನೂ ವಿಕೋಪ ಪರಿಸ್ಥಿತಿಗೆ ಹೋಗುತ್ತದೆ. ಆದ್ದರಿಂದ ಈ ವಿಷಯ ಮೊದಲು ಈ ಮನೆಯಲ್ಲಿ ತೀರ್ಮಾನವಾಗಬೇಕೆಂದು ನಾನು ಹೇಳುತ್ತೇನೆ.

**5th SEPTEMBER 1968.**

**Sri H.V.KOUJALGI ( Minister for Revenue ) :** Sir. I lay on the Table of the House.

a) Notification No.RDF 89 TKV 67 A,dated the 24th August 1968- the Mysore Land Improvement Loans (Amendment) Rules 1968 unde section 10 (3) of the Mysore Land Improvement Loans Act 1963.

b) The Mysore Agriculturists Loans (Amendment ) Rules, 1968 Notification NO,RDF 89 TKV 67-1 dated 24th August 1968 under section 9 (3) of the Mysore Agricultrists Loans Act 1963.

c) The Mysore Land Revenue (Amendment) Rules, 1968 Notification No. RDF 9 TRM 66 dated the 15th April 1968 under section 198 of the Mysore Land Revenue Act 1964.

**Mr. DEPUTY SPEAKER :** The Notification are laid on the Table.

**Sri S.SHIVAPPA:** I am raising a point of order Sir, Mr.NadGouda did not yield when we raised a point of order.

The Point of order was not decided and ruling was not given and in the meanwhile the Minister for Development stood up and read something. I request you to see that the whole thing is expunged from the Proceedings and I insist that a ruling should be given on the point of order.Only afterwards anything can proceed further. Till the ruling is given by the Chair,nothing can go on record.

**Mr. DEPUTY SPEAKER :** I have already given the ruling. I permitted the minister to place it on the Table of the House. There is no point of order.

**Sri K.H.RANGNATH :** On a point of order, Sir. There was a point of order raised by my learned friend Sri Siddveerappa and the House was seized of it. It was under discussion. No ruling was given by the Speaker.I want to know whether the ruling was postponed.

(At this stage Hon'ble Minister for Development Sri Nadagouda left the House)

**Sri.K.H.PATIL (Hubli) :** I wonder where is the hurry for the Hon'ble Minister to run away like that. I request the Chair to kindly ask the Minister to come back, because the matter pertains to him

**ಶ್ರೀ ಮಹದೇವ್ ಬಣಕಾರ (ಬ್ಯಾಡಗಿ) :** ನೀವು ಗೂಂಡಾವೃತ್ತಿ ನಡೆಸುವ ಹಾಗೆ ಮಾಡುತ್ತಿದ್ದೀರಿ. ನಾವು ಇಲ್ಲಿ ಏತಕ್ಕೋಸ್ಕರ ಬಂದಿರುವುದು? ನಿನ್ನೆ ದಿವಸ ಮಾನ್ಯ ಮುಖ್ಯ ಮಂತ್ರಿಗಳು ಭಾಷಣ ಮಾಡುತ್ತಿರುವಾಗ ಮಾನ್ಯ ಶ್ರೀ ನಂಜೇಗೌಡರ ಪ್ರಶ್ನೆ ಬಂತು. ಆಗ ಮುಖ್ಯ ಮಂತ್ರಿಗಳು ಅಪ್ಪಣೆ ಕೊಡಿಸಿದರು. ಅಭಾವ ಪರಿಸ್ಥಿತಿ ದೇಶದಲ್ಲಿರುವಾಗ ಸದಸ್ಯತ್ವದ ಹಕ್ಕಿನ ಪ್ರಶ್ನೆಯ ಬಗ್ಗೆ ಚರ್ಚೆ ಮೊಡಕು ಮಾಡಿ ಎಂದೂ ಹೇಳಿದರು. ದೇಶದ ಅಭಾವ ಪರಿಸ್ಥಿತಿ ಬಗ್ಗೆ ಚರ್ಚೆ ಮಾಡಲು ಹೆಚ್ಚಿನ ಅವಕಾಶ ಕೊಡಿ ಎಂದೂ ಹೇಳಿದರು. ಅಂದ ಮೇಲೆ ಇವತ್ತು ದೇಶದಲ್ಲಿ ಬಂದಿರತಕ್ಕ ಗಂಡಾಂತರ ಪರಿಸ್ಥಿತಿಯನ್ನು ಎದುರಿಸುತ್ತಿರುವಾಗ ವಿರೋಧ ಪಕ್ಷದ ಸದಸ್ಯರನ್ನು

ತುಳಿಯುವುದಕ್ಕೆ ಮಾಡಿರತಕ್ಕ ಕುತಂತ್ರ ಪ್ರಶ್ನೆ ಇಲ್ಲಿ ಬಂದಿದೆ. ಈಗ ಆ ನೋಟಿಫಿಕೇಶನ್ನನ್ನು ಕಾನೂನು ಬಾಹಿರವಾಗಿ ಪಾಸ್ ಮಾಡತಕ್ಕ ಎಮರ್ಜೆನ್ಸಿ ಏನು ಬಂದಿದೆ ಎಂಬುದನ್ನು ತಿಳಿಯಪಡಿಸಬೇಕು.ಇಲ್ಲದಿದ್ದರೆ ಈ ಸಭೆಯನ್ನು ಮುಂದುವರೆಸಲು ಅವಕಾಶ ಮಾಡಿಕೊಡುವುದಿಲ್ಲ.

**ಕೆ. ಪುಟ್ಟಸ್ವಾಮಿ :** ಮಾನ್ಯ ಸದಸ್ಯರು ಹೇಳಿದ್ದನ್ನು ನಾನು ಕೇಳಿದೆ. ಈ ವಿಚಾರದಲ್ಲಿ ಆಡ್ವಕೇಟ್ ಜನರೆಲ್ಲರನ್ನು ಕರೆಸಿ ಈ ನೋಟಿಫೀಕೇಶನ್ ಸಭೆಯ ಮುಂದೆ ಇಡಬೇಕೋ ಇಡಬಾರದೋ ಎಂಬ ವಿಚಾರದಲ್ಲಿ ಅವರ ಅಭಿಪ್ರಾಯ ಪಡೆಯಬೇಕೆಂದು ಅವರು ವಾದ ಮಾಡಿದ್ದಾರೆ. ಆದರೆ ಈಗ ಅಧ್ಯಕ್ಷರು ಅವಕಾಶ ಮಾಡಿಕೊಟ್ಟಿರುವ ಪ್ರಕಾರ ಅಭಿವೃದ್ಧಿ ಶಾಖೆಯ ಸಚಿವರು ಇಲ್ಲಿ ಒಂದು ನೋಟಿಫಿಕೇಷನ್ ಮಂಡಿಸಿದ್ದಾರೆ.

**ಮಾನ್ಯ ಸದಸ್ಯರು :** ಪಾಯಿಂಟಾಫ್ ಆರ್ಡರ್, ಪಾಯಿಂಟಾಫ್ ಆರ್ಡರ್, ಸ್ವಾಮಿ....

**ಶ್ರೀ ಕೆ. ಪುಟ್ಟಸ್ವಾಮಿ:** ಮಾನ್ಯ ಅಧ್ಯಕ್ಷರೇ ಆ ನೋಟಿಫಿಕೇಷನ್ನನ್ನು ಈ ಸದನದ ಟೇಬಲ್ ಮೇಲೆ ಇಟ್ಟಿದ್ದಾರೆ ಎಂದು ಹೇಳಿದ್ದು ನನ್ನ ಅಭಿಪ್ರಾಯದ ಮಾತು. ಆ ಬಗ್ಗೆ ಈಗಾಗಲೇ ಒಬ್ಬ ಮಾನ್ಯ ಸದಸ್ಯರು ಅದಕ್ಕೆ ಒಂದು ತಿದ್ದುಪಡಿಯನ್ನು ಸಹಾ ಕಳುಹಿಸಿದ್ದಾರೆ.

**SRI G. DUGGAPPA :** I raise to point of order. While discussing about the laying of notification by the minister the Hon'ble Minister for parliamentary Affairs stated that the notification is laid. We do not know what happened. In fact he did not lay the notification on the Table of the House. When this is the fact, the minister now says that the notification was laid on the table. It is contrary to fact. Therefore he cannot say a thing which has not happened on the floor of the House.

**ಶ್ರೀ ಮಹದೇವ್ .ಜಿ. ಬಣಕಾರ :** ಅಧ್ಯಕ್ಷರೇ, ಇಲ್ಲಿಯವರೆಗೂ ಇಲ್ಲಿ ನಡೆಯುತ್ತಿರುವ ಚರ್ಚೆಯನ್ನು ನೋಡಿದರೆ ಆ ನೋಟಿಫಿಕೇಷನ್ನನ್ನು ಸಭೆಯ ಮುಂದೆ ಮಂಡಿಸುವುದಕ್ಕೆ ಪ್ರಯತ್ನ ಮಾಡುವುದು ಕಾನೂನಿಗೆ ಬಾಹಿರವಾದ ವಿಷಯ. ಎಂಬುದಾಗಿ ಶ್ರೀಮಾನ್ ಸಿದ್ದವೀರಪ್ಪನವರು ಮೊದಲೇ ಹೇಳಿದ್ದಾರೆ.

ಆದ್ದರಿಂದ ಅಧ್ಯಕ್ಷರು ಈಗ ಖಚಿತವಾಗಿ ಆ ನೋಟಿಫಿಕೇಷನ್ ಸಭೆಯ ಮುಂದೆ ಇದಯೇ ಎಂಬುದನ್ನು ತಿಳಿಸಬೇಕು. ಇನ್ನು ಎರಡನೆಯದಾಗಿ ಈ ವಿಚಾರಣೆ ಹೈಕೋರ್ಟಿನ ಮುಂದೆ ವಿಚಾರಣೆಗಾಗಿ ನಿಂತಿರುವಾಗ ಇಲ್ಲಿ ಅದನ್ನು ಯಾರೂ ಮೂವ್ ಮಾಡಬಾರದು ಎಂಬ ಕಾನೂನಿನ ನಿರ್ಭಂಧವಿರುವಾಗ ಅದನ್ನು ಟೇಬಲ್ ಮೇಲೆ ಇಡಲಾಗಿದೆ ಎಂಬ ಶಬ್ದಕ್ಕೆ ಸ್ವಲ್ಪ ತಾವು ಅರ್ಥವಿವರಣೆ ಕೊಡಬೇಕು. ಮುಖ್ಯವಾಗಿ ಆ ಸೂಚನೆಯನ್ನು ಸಭೆಯ ಮುಂದೆ ಮಂಡಿಸಿದೆಯೇ–ಇಲ್ಲವೇ ಎಂಬುದನ್ನು ತಾವು ಖಚಿತವಾಗಿ ಹೇಳಬೇಕು.

**Sri H.N.NANGEGOUDA :** The paper is not laid on the Table. The Minister says it is laid.the chair may please clarify whether it is laid or not. If it is laid …

**Mr.DEPUTY SPEAKER :** Order, Order.

**Sri K. PUTTASWAMY :** My contention is that the hon'ble Chair allowed the Minister for Development to lay the notification on the Table of the House. In pursunance of your direction he has placed the notification on the table of the House. It is open to the other side……

**(Interruptions)**

**Mr. DEPUTY SPEAKER :** Order, Order.

**Sri H.N. NANGEGOUDA :** The Chair may please clarify the position. He says it is laid on the table.

**Sri.G. DUGGAPPA :** After the minister lays the Notification on the table of the House. The Speaker must say that the Notification is laid on the Table of the House. The Speaker is bound to say that.Till then it cannot be said to be laid on the Table of the House. I want a clarification from the Chair on this point.

**Mr. DEPUTY SPEAKER :** I have stated clearly.

**ಶ್ರೀ ಎಸ್. ಶಿವಪ್ಪ :** ಅಧ್ಯಕ್ಷರೇ, ಈ ಸಭೆಯ ನಡವಳಿಕೆ ಕಣ್ಣು ಮುಚ್ಚಾಲೆಯ ಆಟವಲ್ಲ. ಇಲ್ಲಿ ಯಾವ ನಡುವಳಿಕೆ ನಡೆದರೂ ಕೂಡ ಅದು ಬಹಿರಂಗವಾಗಿ ಎಲ್ಲರೂ ಒಪ್ಪತಕ್ಕ ರೀತಿಯಲ್ಲಿ ನಡೆಸುವುದು ತಮ್ಮ ಪವಿತ್ರವಾದ ಜವಾಬ್ದಾರಿ. ಅವರು ಇಟ್ಟು ಬಿಟ್ಟರು, ಯಾವುದೋ ಘಳಿಗೆಯಲ್ಲಿ ಓದಿಬಿಟ್ಟರು. ಅಂದರೆ ಅದು ಸಭೆಯ ಘನತೆ ಗೌರವ ತರತಕ್ಕ ಮಾತಲ್ಲ. ಶಾಸನ ರಚನೆ ಮಾಡತಕ್ಕ ಕಾಲದಲ್ಲಿ ಎಲ್ಲರಿಗೂ ಗೊತ್ತಾಗತಕ್ಕ ರೀತಿಯಲ್ಲಿ ನಡಾವಳಿ ಇರಬೇಕೆ ಹೊರತು ಗಲಾಟೆಯಾಗುತ್ತಾ ಇರುವಾಗ ಶ್ರೀಮಾನ್ ಸಿದ್ಧವೀರಪ್ಪನವರು ಪಾಯಿಂಟ್ ಆಪ್ ಆರ್ಡರ್ ಎತ್ತಿದ್ದು ಅದರ ಬಗ್ಗೆ ರೂಲಿಂಗ್ ಕೊಡತಕ್ಕ ಪರಿಸ್ಥಿತಿ ಬಂದಾಗ ಆ ಮಧ್ಯ ಅವರು ನೋಟಿಫಿಕೇಶನ್ ಇಟ್ಟಿದ್ದಾರೆ. ಎಂದು ಹೇಳಿದರೆ......

**ಉಪಾಧ್ಯಕ್ಷರು :** ಅದು ಪ್ರೋಸಿಡಿಂಗ್‌ನಲ್ಲಿ ಬಂದಿದೆ. ಈಗ ಸುಮಾರು ಒಂದೂವರೆಗಂಟೆ ಕಾಲ ಈ ಚರ್ಚೆಗೆ ಅವಕಾಶ ಕೊಟ್ಟದ್ದು ಆಯಿತು. ಇದನ್ನು ಇಲ್ಲಿಗೆ ನಿಲ್ಲಿಸಬೇಕು.

**ಶ್ರೀ ಮಹದೇವ್ ಜಿ. ಬಣಕಾರ್ :** ಅಧ್ಯಕ್ಷರೇ, ಇದೂವರೆಗೂ ನಡೆದಿರತಕ್ಕ ಈ ಚರ್ಚೆಯಲ್ಲಿ ಈ ನೋಟಿಫಿಕೇಶನ್ ಇಲ್ಲಿ ಇಡುವುದಕ್ಕೆ ಕಾನೂನು ಬಾಹಿರವಾಗಿರುವುದರಿಂದ ಇದನ್ನು ಇಡಕೂಡದು ಎಂದು ವಾದ ಮಾಡಿದ್ದಾರೆ. ಮಾನ್ಯ ಮಂತ್ರಿಗಳು ಇಟ್ಟಿದ್ದಾಗಿದೆ ಎಂದು ಅವರು ವಾದ ಮಾಡಿದ್ದಾರೆ. ನನ್ನ ಒಂದು ಮಾತನ್ನು ತಾವು ಗಮನದಲ್ಲಿಟ್ಟುಕೊಳ್ಳಬೇಕು. ತಮಗೆ ಅಡ್ವೈಸ್ ಮಾಡುತ್ತೇನೆ ಎಂದು ತಿಳಿದುಕೊಳ್ಳಬೇಡಿ. Man must have the power of devil, but he must not use it as a devil. ರಾಕ್ಷಸನ ಶಕ್ತಿ ಇರಬೇಕು. ಆದರೆ ರಾಕ್ಷಸನಂತೆ ವರ್ತನೆ ಮಾಡಬಾರದು. ತಮಗೆ ಘನತೆ ಇದೆ, ಗೌರವ ಇದೆ. ಕಾನೂನಿನ ಹಕ್ಕು ಬಾಧ್ಯತೆಗಳೂ ಇವೆ. ಆ ಕಡೆ ಕಾಂಗ್ರೆಸ್ ಮೆಜಾರಿಟಿ ಇದೆ. ಅವರು ನಾವೆಲ್ಲ ಒಪ್ಪದೆ ಇದ್ದರೂ ಕೂಡ ಇದನ್ನು ಪಾಸ್ ಮಾಡಬಹುದು, ಆದರೆ ಕಾನೂನು ಹಾಗಿರವಾಗಿರುವಾಗ ಇದನ್ನು ಒಪ್ಪುವುದಕ್ಕೆ ನಾನು ತಯಾರಾಗಿಲ್ಲ, ಇದನ್ನು ಟೇಬಲ್ ಆಫ್ ಬೌಸ್ ಮೇಲೆ ಇಟ್ಟಿಲ್ಲ. ಒಪ್ಪುವುದಕ್ಕೆ ನಾನು ತಯಾರಾಗಿಲ್ಲ, ಇದನ್ನು ಟೇಬಲ್ ಆಫ್ ದಿ ಬಾಸ್ ಮೇಲೆ ಇಟ್ಟಿಲ್ಲ. ಆದ್ದರಿಂದ ಕಾನೂನು ಬಾಹಿರವಾಗಿ ನಡೆಯತಕ್ಕ ಈ ಕಾರ್ಯಕಲಾಪಗಳಲ್ಲಿ ವೈಯಕ್ತಿಕವಾಗಿ ನಾನು ಭಾಗವಹಿಸುವುದಕ್ಕೆ ತಯಾರಾಗಿಲ್ಲ ಎಂದು ಹೇಳಿ ಈ ಸಭೆಯಿಂದ ಹೊರಗೆ ಹೋಗುತ್ತೇನೆ ಸ್ವಾಮಿ.

(Sri Mahadev G. Banakar Withdrew from the house)

**ಶ್ರೀ ಎಚ್. ಎನ್. ನಂಜೇಗೌಡ:** ಒಂದು ಕ್ರೀಯಾಲೋಪ ಸ್ವಾಮಿ, ತಾವು ಒಂದು ಮಾತನ್ನು ಅಪ್ಪಣೆ ಕೊಡಿಸಿದಿರಿ– ಏನೆಂದರೆ ಈ ಪೇಪರ್‌ನ್ನು ಈ ಸಭೆಯ ಟೇಬಲ್ ಮೇಲೆ ಮಂಡಿಸಲಾಯಿತು ಎಂದು. ನೀವು ಈ ರೀತಿ ಅಪ್ಪಣೆ ಕೊಡಿಸಿದ ಮೇಲೆ ಒಂದು ವೇಳೆ ಈ ರೀತಿ ಆಯಿತು ಅಂತ ಇಟ್ಟುಕೊಳ್ಳುವುದಾದರೆ ರೂಲ್ 288 ಪ್ರಕಾರ ಒಂದು ನೋಟೀಫಿಕೇಷನ್‌ನ್ನು ಸಭೆಯ ಟೇಬಲ್ ಮೇಲೆ ಮಂಡಿಸಿದ್ದಾದ ಮೇಲೆ ಅದಕ್ಕೆ ಇನ್ನು ಉಳಿದಂತಹ ಕಾರ್ಯಭಾರಗಳು, ತಿದ್ದುಪಡಿಗಳನ್ನು ಕೊಡುವುದು ಚರ್ಚೆಯಾಗುವುದು ಇವೆಲ್ಲ ಆಗಬೇಕು. ಆ ರೀತಿ ಮಾಡಬೇಕಾಗಿತಕ್ಕ ಕಾಲದಲ್ಲಿ ನೀವು ಸರ್ಕಾರದವರಿಗೆ ಅವಕಾಶ ಕೊಟ್ಟು 30 ದಿವಸಗಳ ನಂತರ ಈ ಕಾರ್ಯಕಲಾಪಗಳಿಗೆ ಅವಕಾಶ ಕೊಡುತ್ತೇವೆ ಎಂದು ಹೇಳುವುದಕ್ಕೆ ನಾವು ತಯಾರಾಗಿಲ್ಲ. ಇದು ಹಕ್ಕುಬಾದ್ಯತೆಯ ಪ್ರಶ್ನೆ. ನೋಟಿಫಿಕೇಷನ್‌ನ್ನು ಸಭೆಯ ಟೇಬಲ್ ಮೇಲೆ ಮಂಡಿಸಿದ ತಕ್ಷಣ ಅಮೆಂಡ್‌ಮೆಂಟ್ ಕಳುಹಿಸತಕ್ಕ ಹಕ್ಕು ಹಾಗೂ ಚರ್ಚೆಮಾಡತಕ್ಕ ಹಕ್ಕು ಈ ಸಭೆಯ ಸದಸ್ಯರ ಸಾರ್ವಭೌಮ ಹಕ್ಕು. ಇದನ್ನು ಅಧ್ಯಕ್ಷರು ಕೂಡ ಕಸಿದುಕೊಳ್ಳುವುದಕ್ಕಾಗುವುದಿಲ್ಲ. ಆದ್ದರಿಂದ ರೂಲ್ 288ರ ಪ್ರಕಾರ ಚರ್ಚೆಮಾಡಿರತಕ್ಕ ಕಾಲದಲ್ಲಿ ಸಬ್‌ಜ್ಯೂಡೀಯಸ್ ಆಗಿರತಕ್ಕ ವಿಷಯವನ್ನು ತಂದಿರುವಾಗ ನಾವು ಚರ್ಚೆಮಾಡುವುದಕ್ಕೆ ಅವಕಾಶವಿಲ್ಲ ಎಂದರೆ ಹೇಗೆ? ಸಬ್‌ಜ್ಯುಡಿಯಸ್ ಆಗಿರತಕ್ಕ ನೋಟಿಫಿಕೇಷನ್‌ನ್ನು ಸಭೆಯಲ್ಲಿ ಮಂಡಿಸುವುದಕ್ಕೆ ಅವಕಾಶಕೊಟ್ಟು ನಮ್ಮ ಹಕ್ಕುಗಳನ್ನು ಮೊಟಕು ಮಾಡುತ್ತಾ ಇದ್ದೀರಿ. The chair has committed a breach of privilege of the House. My point of Order is that the chair has acted against the privilege of the House. ಇದಕ್ಕೆ ಮೊದಲು ರೂಲಿಂಗ್ ಕೊಡಬೇಕೆಂದು ಹೇಳುತ್ತೇನೆ.

**Mr.DEPUTY SPEAKER :** There is no merit in the point of order raised by the Sri Nanje Gowda.

**ಶ್ರೀ ಬಿ ಪರಮೇಶ್ವರಪ್ಪ (ಅರಬಾವಿ) :** ಇಷ್ಟೊಂದು ಅಮೂಲ್ಯವಾದ ಕಾಲವನ್ನು ದೇಶ ಬರಗಾಲಕ್ಕೆ ತುತ್ತಾಗಿರುವಾಗ ಅದರ ನಿವಾರಣೋಪಾಯಗಳನ್ನು ಸಲಹೆಮಾಡಲು ಸದುಪಯೋಗಪಡಿಸಿಕೊಳ್ಳಬೇಕೆಂದು ನಿನ್ನೆ ದಿವಸ ಮಾನ್ಯ ಮುಖ್ಯಮಂತ್ರಿಗಳು ಹೇಳಿದರು. ಇವೊತ್ತು ಈ ವಿಚಾರ ಚರ್ಚೆಯಾಗುತ್ತಾ ಇರುವುದನ್ನು

ನೋಡಿದರೆ ತುಂಬಾ ವ್ಯಸನವಾಗುತ್ತದೆ. ಕಾನೂನಬಾಹಿರವಾಗಿರತಕ್ಕ ಯಾವುದೋ ಕೋರ್ಟಿನಲ್ಲಿ ಇರತಕ್ಕ ಒಂದು ಸನ್ನಿವೇಶವನ್ನು ತಂದು ಸಭೆಯ ಮುಂದೆ ಇಡಬಾರದು ಎಂದು ಹೇಳಿ ಅನೇಕ ಸಂದರ್ಭಗಳಲ್ಲಿ ಮಾನ್ಯ ಸದಸ್ಯರು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಹಾಗಿರುವಾಗ ಇಗ ಬಂದಿರತಕ್ಕ ವಿಚಾರ ಸಬ್‌ಜ್ಯುಡಿಯಸ್ ಆಗುತ್ತದೆಯೇ ಇಲ್ಲವೇ ಅಂತ ಹೇಳಿ ಅನೇಕರು ಅಭಿಪ್ರಾಯವನ್ನು ವ್ಯಕ್ತಪಡಿಸಿ ಇದು ಸಬ್‌ಜ್ಯುಡಿಯಸ್ ಆಗುತ್ತದೆ ಎಂದು ವಿರೋಧ ಪಕ್ಷದ ಸದಸ್ಯರು ಹೇಳಿದರು. ವಿರೋಧ ಪಕ್ಷದ ಮುಖಂಡರು ಅಡ್ವೋಕೇಟ್ ಜನರಲ್‌ರವರನ್ನು ಕರೆಸಿ ಇದು ಸರಿಯೋ ತಪ್ಪೋ ಅಂತ ಹೇಳಿ ಅವರ ಅಭಿಪ್ರಾಯನ್ನು ಪಡೆದುಕೊಳ್ಳಬೇಕೆಂದು ಹೇಳಿದರು. ಅಷ್ಟು ದೂರ ನಾನು ಹೋಗುವುದಿಲ್ಲ. ಇವತ್ತು ಅಡ್ವೋಕೇಟ್ ಜನರಲ್‌ರವರೇ ಬಹಳ ಬುದ್ಧಿವಂತರು. ಅಂತ ಹೇಳಿ ನಾನು ತೀರ್ಮಾನಕ್ಕೆ ಬರುವುದಿಲ್ಲ. ಮಾನ್ಯ ಮುಖ್ಯ ಮಂತ್ರಿಗಳು ಇದ್ದಾರೆ, ವಿರೋಧ ಪಕ್ಷದ ಮುಖಂಡರು ಇದ್ದಾರೆ, ಸರಿಯಾದ ರೀತಿಯಲ್ಲಿ ಒಂದು ಒಗ್ಗಟ್ಟಿನಿಂದ ಯಾವುದು ನ್ಯಾಯವಾದದ್ದೋ ಅದನ್ನು ವಿಚಾರ ಮಾಡಿ ಆ ಪ್ರಕಾರ ಮಾಡುವುದು ಉತ್ತಮವಾದದ್ದೇ ಹೊರತು ಅಮೂಲ್ಯವಾದ ಕಾಲವನ್ನು ಈ ರೀತಿ ಕಾಲ ಕಳೆಯುತ್ತಾ, ಇರುವುದನ್ನು ನೋಡಿದರೆ ಇದೇನು ಅಸೆಂಬ್ಲಿಯೊ ಅಥವಾ ಇನ್ನೇನಾದರು ಒಂದು ಸಂತೆಯೋ ಅನ್ನ ತಕ್ಕ ಭಾವನೆ ಬರುತ್ತದೆ. ಈ ರೀತಿ ಮಳೆ ಹೋಗಿ ಬೆಳೆ ಹೋಗಿ ದೇಶದಲ್ಲಿ ಅಭಾವ ಪರಿಸ್ಥಿತಿ ಉದ್ಭವವಾಗಿರುವಾಗ ಯಾವುದೋ ಒಂದು ವಿಚಾರವನ್ನು ತೆಗೆದುಕೊಂಡು ಕಾಲಹರಣ ಮಾಡುವುದು ಸರಿಯಲ್ಲ. ನಾವಾಗಲಿ ಅವರಾಗಲಿ ಇರತಕ್ಕ ವಿಚಾರ ನ್ಯಾಯವಾಗಿದ್ದರೆ ಚರ್ಚೆ ಮಾಡೋಣ. ಅದನ್ನು ಬಿಟ್ಟು ಈ ರೀತಿ ಎಲ್ಲಾ ಚರ್ಚೆಮಾಡಿಕೊಂಡು ಊರಿಗೆ ಹೋದರೆ ಹುಚ್ಚುಮುಂಡೇಗಂಡರಾ ಅಸೆಂಬ್ಲಿಗೇಕೋ ಹೋಗ್ತಿರಿ ಅಂತ ಊರಿನಲ್ಲಿ ಜನ ಹೇಳ್ತಾರೆ (ನಗು) ; ಈ ರೀತಿ ಮಾಡಬಾರದು ನ್ಯಾಯವಾಗಿ ನಡೆಯಬೇಕು ಎಂದು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

**Sri B.P.GAGNADHAR :** Now the position is very clear. A particular notification has been issued by the Government and that particular notification has been stayed by a competent High Court. All these facts are admitted. As I have already submitted, in the eye of law there is no such notification issued even though it may be there on printed paper. In the eye of law there is no

such Notification issued. If there is no Notification issued, it can't be placed on the table of the House. And if they place the notification on the table of the House it will amount to contempt of the High court by the Government and the House will be liable for it. So even now I request the Government to be wise enough to see that the laying of the Notification here is withdrawn.

**ಶ್ರೀ ಅಜೀಜ್ ಸೇಟ್ (ನರಸಿಂಹರಾಜ) :** ಈಗ ಸಾಕಾದಷ್ಟು ಚರ್ಚೆಯಾಗಿದೆ. ಲೀಡರ್ ಆಫ್ ದಿ ಅಪೋಸಿಷನ್ ಅಡ್ವೋಕೇಟ್ ಜನರಲ್‌ರವರನ್ನು ಕರೆಯಿಸಿಕೊಂಡು ಅವರ ಅಭಿಪ್ರಾಯ ತೆಗೆದುಕೊಳ್ಳೋಣ ಎಂದು ಹೇಳಿದರು. ಆದರೂ ಕೂಡ ಅಡಮೆಂಟಾ ನೋಟಿಫೀಕೇಶನ್ ಮೂವ್ ಮಾಡಿಯೇ ಮಾಡುತ್ತೇವೆ ಎಂದರೆ ರೂಲ್ 116 ಹಾಗೂ 117 ರ ಪ್ರಕಾರ ನೋಟಿಫಿಕೇಶನ್‌ನ್ನು ಇಟ್ಟರೆ ಒಪ್ಪುತ್ತೇನೆ. 117 ರ ಪ್ರಕಾರ ಚರ್ಚೆ ಮಾಡುವುದಕ್ಕೆ ಅವಕಾಶ ಇದ್ದೇ ಇರುತ್ತದೆ. ಪಾರ್ಲಿಮೆಂಟರಿ ಮಿನಿಷ್ಟರು ಚರ್ಚೆ ಮಾಡುವುದಕ್ಕೆ ಅವಕಾಶ ಇದ್ದೇ ಇರುತ್ತದೆ. ಪಾರ್ಲಿಮೆಂಟರಿ ಮಿನಿಷ್ಟರು ಚರ್ಚೆ ಮಾಡುವುದಕ್ಕೆ ಅವಕಾಶವಿಲ್ಲ, ಅಬ್ಜಕ್ಷನ್ ಬರುತ್ತದೆ. ಹೈಕೋರ್ಟ್ ಹೇಳಿದೆ ಇದನ್ನು ಒಪ್ಪಿಕೊಳ್ಳಿ. ಈಗ ನೊಟಿಫಿಕೇಷನ್ ಇಟ್ಟು ಬಿಡುತ್ತೇವೆ. ಮೂರು ತಿಂಗಳ ಮೇಲೆ ಬೇಕಾದರೆ ಚರ್ಚೆ ಮಾಡೋಣ ಎಂದು ಹೇಳಿದರು.ಹಾಗಾದರೆ ಇದನ್ನು ಈ ಸೆಷನ್‌ನಲ್ಲಿ ಅಲ್ಲದೆ ಇದ್ದರೆ ಇನ್ನೊಂದು ಸೆಷನ್‌ನಲ್ಲಿ ಇಡಬಹುದು. ಏಕೆ ಆತುರ ಆತುರವಾಗಿ ಮಾಡಬೇಕು ಅನ್ನುವುದು ಅರ್ಥವಾಗುವುದಿಲ್ಲ.ಪ್ರೊಸೀಜರ್ ಇದೆ. ಬೇಕಾದರೆ ಈಗ ಹೌಸ್‌ನ್ನು ಅಡ್‌ಜರ್ನ್ಡ್ ಮಾಡಿ ಲೀಡರ್ ಆಫ್ ದಿ ಹೌಸನ್ನು ಅಡಜರ್ನ್ಡ್ ಮಾಡಿ ಲೀಡರ್ ಆಫ್ ದಿ ಅಪೋಸಿಷನ್ ಮತ್ತು ಲೀಡರ್ ಆಫ್ ದಿ ಹೌಸ್ ಇಬ್ಬರನ್ನು ಕರೆಸಿಕೊಂಡು ತಾವು ಒಂದು ತೀರ್ಮಾನವನ್ನು ಮಾಡಬಹುದು. ಜಾಯಿಂಟ್ ಕೌನ್ಸಿಲ್, ರೆಸ್‌ಪಾನ್ಸಿಬಿಲಿಟಿ ಇರುತ್ತದೆ. ಶ್ರೀಮಾನ್ ವಿರೇಂದ್ರ ಪಾಟೀಲ್‌ರವರೇ ಪಾರ್ಲಿಮೆಂಟರಿ ಮಂತ್ರಿಗಳೊಡನೇ ಮಾತನಾಡಿ ಇದನ್ನು ಬಗೆಹರಿಸಬಹುದು.ಅದು ಬಿಟ್ಟು ನನಗೇನು ಜವಾಬ್ದಾರಿ ಇಲ್ಲ ಎಂದು ಅವರು ಸುಮ್ಮನೆ ಕುಳಿತಿರುವುದನ್ನು ನೋಡಿದರೆ ಬಹಳ ಆಶ್ಚರ್ಯವಾಗುತ್ತದೆ. ಈ ನೋಟಿಫಿಕೇಶನ್‌ನ್ನು ಇನ್ನು ಒಂದು ತಿಂಗಳ ಮೇಲೆ ಇಟ್ಟರೆ ಸರ್ಕಾರದ ಬಂಡವಾಳ ಏನೂ ಹೋಗುವುದಿಲ್ಲ.

## ಬರಗಾಲ ಪರಿಸ್ಥಿತಿಯಲ್ಲಿ ಅಧಿಕಾರಿಗಳಿಗೆ ಬಣಕಾರರ ಉವಾಚ

## 9th September 1968

## 5.30 P.M

**ಶ್ರೀ ಮಹದೇವ್ ಜಿ. ಬಣಕಾರ್ (ಬ್ಯಾಡಗಿ) :** ಮಾನ್ಯ ಅಧ್ಯಕ್ಷರೇ, ಇಲ್ಲಿಯವರೆಗೆ ಅನೇಕ ವಿರೋಧಪಕ್ಷದ ಮತ್ತು ಆಡಳಿತ ಪಕ್ಷದ ಸದಸ್ಯರು ಅಭಾವ ಪರಿಸ್ಥಿತಿಯ ಬಗ್ಗೆ ಹೆಚ್ಚು ವಿವರಗಳನ್ನು ನೀಡಿದ್ದಾರೆ. ನನಗೆ ತಿಳಿದ ಮಟ್ಟಿಗೆ ಈ ದೇಶದಲ್ಲಿ ಮಂತ್ರಿಗಳಿಗೆ ಮಾತ್ರ ಅಭಾವವಿಲ್ಲ. ಅವರ ಸಂಖ್ಯೆ ಬಲವಾಗಿದೆ. ಉಳಿದ ಎಲ್ಲದಕ್ಕೂ ಅಭಾವವಿದೆ. ಮಂತ್ರಿಗಳ ಸಂಖ್ಯೆ ಮಾತ್ರ ದಿನೇ ದಿನೇ ಬೆಳೆಯುತ್ತಿದೆ. ಅಧ್ಯಕ್ಷರೇ, ಇಂದು ಪ್ರಾಮುಖ್ಯವಾಗಿ ದೇಶಕ್ಕೆ ಬಂದಿರುವ ಬರಗಾಲವನ್ನು ನಿವಾರಣೆ ಮಾಡಬೇಕಾಗಿದೆ. ಈ ಪರಿಸ್ಥಿತಿಯಲ್ಲಿ ಪಕ್ಷ ಪಂಗಡಗಳ ಬೇಧವಿಲ್ಲದೆ ನೇರವಾಗಿ ಎಲ್ಲರೂ ಕೂಡ ಜನಹಿತ ಕಾರ್ಯದ ಕಡೆ ಲಕ್ಷ ಕೊಡಬೇಕಾಗಿದೆ. ಈ ಸಂದರ್ಭದಲ್ಲಿ ಎರಡು ಮಾತುಗಳನ್ನು ಹೇಳುತ್ತೇನೆ. ಈ ಅಭಾವ ಪರಿಸ್ಥಿತಿ ತಲೆದೋರುವುದಕ್ಕೆ ಸರಕಾರದ ಕಾರ್ಯ ದೌರ್ಬಲ್ಯ ಮತ್ತು ಸಾಮಾಜಿಕ ಮುಖಂಡರ ಅನೈತಿಕ ವ್ಯವಹಾರ ಇವೆರಡು ಕಾರಣ. ಸರಕಾರಿ ದೌರ್ಬಲ್ಯಕ್ಕೆ ಒಂದು ನಿದರ್ಶನ ಕೊಡುತ್ತಿದ್ದೇನೆ. ಸರಕಾರಿ ಅಡಿಟ್ ವರದಿಯಲ್ಲಿ ಒಂದು ಕಡೆ ಈ ರೀತಿ ಇದೆ:

"Through the annual reports of financil stock taking are due by the first week of September each year, the reports for 1964-65 in respect of 16 project schemes, total expenditure incurred being Rs 100.29 crores out of 53 project schemes, we have not received even at the end of August 1966"

ಸ್ವಾಮೀ, ನೂರು ಕೋಟಿ ರೂಪಾಯಿಗಳ ಲೆಕ್ಕ ಸರಕಾರಕ್ಕೆ ಇನ್ನೂ ಬಂದಿಲ್ಲ ಎಂದು ತಿಳಿಸಿದ್ದಾರೆ. ಇಂದು ಅಭಾವ ಪರಿಸ್ಥಿಯನ್ನು ಹೋಗಲಾಡಿಸಲು ಕೇಂದ್ರ ಸರಕಾರವನ್ನು ಕೇಳಿರುವುದು 10 ಕೋಟಿ. ಆದರೆ ವಸೂಲಿ ಇಲ್ಲದೆ, ಸರಕಾರಕ್ಕೆ ಇಲಾಖೆಗಳಿಂದ ಮಾಹಿತಿ ಇಲ್ಲದೆ 100 ಕೋಟಿ ರೂಪಾಯಿ ಲೆಕ್ಕ ಬರಬೇಕಾಗಿದೆ. ಎಂದ ಮೇಲೆ ಕೇಂದ್ರ ಸರಕಾರ ಎಷ್ಟು ಸಾವಿರ ಕೋಟಿ ಕೊಟ್ಟರು ಪ್ರಯೋಜನವೇನು? ಲೆಕ್ಕವಿಡುವ ಪದ್ಧತಿ ಮೈಸೂರು ಸರಕಾರದಲ್ಲಿಲ್ಲ ಎಂದು ಹೇಳಬಹುದು.1963 ರಿಂದ 1965ರ ವರೆಗೆ 15 ಮೇಜರ್ ಮತ್ತು ಮೈನರ್ ನೀರಾವರಿ ಕೆಲಸಗಳನ್ನು ಕೈಗೊಂಡು 13 ಲಕ್ಷ 5 ಸಾವಿರ ಎಕರೆ ಭೂಮಿಯನ್ನು ನೀರುಣಿಸಲು ಸುಮಾರು

80 ಕೋಟಿ ರೂಪಾಯಿಗಳನ್ನು ಈ ಸರಕಾರ ಖರ್ಚು ಮಾಡಿದೆ. ಆದರೆ ಇದರ ಪರಿಣಾಮವಾಗಿ ಕೇವಲ 6 ಲಕ್ಷ ಎಕರೆ ಮಾತ್ರ ನೀರಾವರಿಯಾಗಿದೆಯೇ ಹೊರತು ಯೋಜನೆ ಪ್ರಕಾರ ಆಗಿಲ್ಲ, ಹಣ ಮಾತ್ರ ಖರ್ಚಾಗಿದೆ. ಇಂಥ ಬೇಜವಾಬ್ದಾರಿ ಪರಿಸ್ಥಿಯಲ್ಲಿ ಸರಕಾರಕ್ಕೆ ಸಾಲ ಕೊಡಲು ಯಾರಾದರೂ ಮುಂದೆ ಬರುವರೇ ಎಂಬುದನ್ನು ಯೋಚನೆ ಮಾಡಬೇಕು. 64 ಫ್ಯಾಮಿನ್ ರೀಲಿಫ್ ವರ್ಕ್ಸ್ ಎಂಬ ಬಾಬ್ತಿಗೆ ಕೆಂದ್ರ ಸರಕಾರ ಕೊಟ್ಟ 7 ಲಕ್ಷ 42 ಸಾವಿರ ರೂಪಾಯಿಗಳಲ್ಲಿ ಬೆಂಗಳೂರು ಡಿವ್ಹಿಜನ್ನಿಗೆ 3 ಲಕ್ಷ 41 ಸಾವಿರ ರೂಪಾಯಿ , ಚಿತ್ರದುರ್ಗಕ್ಕೆ 6 ಲಕ್ಷ 48 ಸಾವಿರ ರೂಪಾಯಿ ಹೀಗೆಲ್ಲಾ ಕೊಟ್ಟಿದ್ದರಲ್ಲಿ ಅರ್ಧ ಕೂಡ ಖರ್ಚು ಮಾಡಲಿಲ್ಲ. ಇದರಿಂದ ಕೇಂದ್ರ ಸರಕಾರಕ್ಕೆ ಸಾಲ ಕೊಡಲು ಅನುಮಾನವಾಗಿದೆ. ಕೊಟ್ಟ ಹಣ ಸರಿಯಾಗಿ ಉಪಯೋಗವಾಗುವುದಿಲ್ಲ ಎಂಬ ಸಂದೇಹ ಇರುವಂತೆ ತೋರುತ್ತದೆ. ಅದು ಸ್ವಾಭಾವಿಕವಾಗಿಯೇ ಸರಿ.

ಇನ್ನೊಂದು ಮಾತು. ಈ ಕೆಲಸದ ಜವಾಬ್ದಾರಿ ಸಾರ್ವಜನಿಕರ ಕೈಲಿರಬಾರದು, ಅಧಿಕಾರಿಗಳ ಕೈಲಿರಬೇಕು. ನೇರವಾಗಿ ಅವರಿಂದಲೇ ಕೆಲಸ ನಡೆಯಬೇಕು, ತಾಲ್ಲೂಕು ಬೋರ್ಡಿನಲ್ಲಿ ಬಹಳ ಕಾಂಗ್ರೆಸ್ಸಿನವರಿರುವುದರಿಂದ ಕೊಡುವ ಸೌಲಭ್ಯತಪ್ಪಿ ಹೋಗಬಹುದು ಎಂದು ಹೇಳಿದ್ದಾರೆ. ನನಗೆ ತಿಳಿದ ಹಾಗೆ ಈ ದೇಶದಲ್ಲಿ ಬರಗಾಲ ಬಂದಾಗಲೂಕೆಲವರು ಸುಖವಾಗಿಯೇ ಇರುವರು. ಎರಡು ಉದಾಹರಣೆ ಕೊಡುತ್ತೇನೆ. ಧೈರ್ಯವಿದ್ದರೆ ಒಂದು ಕಮಿಷನ್ ನೇಮಿಸಿ ಅವರನ್ನು ಬೈಲಿಗೆ ತರಬೇಕು. ಹಿಂದೆ ಅಲಸೂರು ದುರಂತವು ಹಾವೇರಿ ಬಳಿ ನಡೆಯಿತು. ವರದಾನದಿ ಫ್ಲಡ್ ರಿಲೀಫ್‌ಗೆ ಇದು ಸಂಬಂಧಪಟ್ಟಿದೆ. ಆ ಹಳ್ಳಿ ನೀರಿನಲ್ಲಿ ಕೊಚ್ಚಿ ಹೋಯಿತು. ಅರೆಬೆತ್ತಲೆ ಇರುವ ಹೆಣ್ಣುಮಕ್ಕಳ ಚಿತ್ರವಿದೆ. ಕೋಸನ್ನು ನಡು ನೀರಿನಲ್ಲಿ ಹೊತ್ತವರು ಕೆಲವರಿದ್ದರು. ತೊಟ್ಟಿಲುಗಳು ಗಿಡಕ್ಕೆ ನೇತು ಬಿದ್ದಿದ್ದವು. ಆಗ ಕೆಲವರು ಅವರಿಗೆ ಬಟ್ಟೆ, ರವಿಕೆ ಹಣ ಕೊಟ್ಟರು. ಆ ಭೀಕರ ಪರಿಸ್ಥಿಯನ್ನು ಸಹಿಸದಾದರು. ಉದಾರವಾಗಿ ಮುಂದೆ ಬಂದರು. ಆದರೆ ಅದು ನೊಂದವರಿಗೆ ಸರಿಯಾಗಿ ಹಂಚಿಕೆಯಾಗಲಿಲ್ಲ. ಆ ಸಮಿತಿಯ ಅಧ್ಯಕ್ಷರ ಹೆಸರನ್ನು ಹೇಳುವುದಕ್ಕಾಗುವುದಿಲ್ಲ. ಅವರು ಮತ್ತೊಂದು ಮನೆಯ ಸದಸ್ಯರು. ಅವರು ಯಾರಿಗೋ ಬೇಕಾದವರಿಗೆ ಕೊಟ್ಟು ಉಳಿದುದನ್ನು ಮಾರಾಟ ಮಾಡಿಕೊಂಡಿದ್ದಾರೆ. ಅರೆ ಬೆತ್ತಲೆಯಿದ್ದು ಮಾನ ಮುಚ್ಚಿಕೊಳ್ಳುವುದಕ್ಕೆ ಅವಕಾಶವಿಲ್ಲದೆ ಇದ್ದವರಿಗೂ ಸಹ ಬಟ್ಟೆ ಕೊಡದೇ ಅವರಿಗೆ ಬೇಕಾದ್ದನ್ನು ತಮ್ಮ ಮನೆಗೆ ಉಪಯೋಗಿಸಿಕೊಂಡಿದ್ದಾರೆ. ಇಂಥವರಿಗೆ ಮುಖಂಡತ್ವವಹಿಸಿದರೆ ಸರಿಯಾಗಿ ಜನರಿಗೆ ಹಂಚಿಕೆಯಾಗುವುದೇ? ಸರಿಯಾದವರಿಗೆ ಅವಕಾಶ ಕೊಡಬೇಕು.

ಇನ್ನು ಎರಡನೆಯದಾಗಿ ಚೈನಾದುರಾಕ್ರಮಣದ ಸನ್ನಿವೇಶದಲ್ಲಿ ದೇಶಕ್ಕೆ ಗಂಡಾಂತರ ಪರಿಸ್ಥಿತಿ ಒದಗಿತ್ತು. ಆಗ ವಿಜಾಪೂರ ಜಿಲ್ಲೆಯ ಉಪಾಧ್ಯಾಯರು ಹೆಂಡತಿಯ ಮಾಂಗಲ್ಯವನ್ನು ರಕ್ಷಣಾನಿಧಿಗೆ ಕೊಟ್ಟ ಬಂಗಾರವನ್ನು ದುರುಪಯೋಗ ಮಾಡಿಕೊಂಡು ಅದರಲ್ಲಿ ಕೆಲವು ಭಾಗ ಹಿತ್ತಾಳೆಯಾಯಿತು ಎಂದು ಹೇಳಿರುವುದುಂಟು. ಹೀಗಾದರೆ ಜನತೆ ಸರಕಾರದಲ್ಲಿ ಮುಖಂಡರಲ್ಲಿ ವಿಶ್ವಾಸವನ್ನಿಡಲು ಸಾಧ್ಯ? ಇನ್ನೊಂದು ಸಣ್ಣ ಉದಾಹರಣೆ, ಈಗ ತಾಲ್ಲೂಕಾ ಬೋರ್ಡುಗಳಿಗೆ ಪರಿಹಾರ ಕಾರ್ಯವಹಿಸಿದರೆ ಏನು ಅನ್ಯಾಯವಾಗುತ್ತದೆ ಎಂಬ ಬಗ್ಗೆ ಹೇಳುತ್ತೇನೆ. ಬ್ಯಾಡಗಿ ತಾಲೂಕಿನಲ್ಲಿ ಅಳಲಗೆರೆ ಎಂಬ ಸಣ್ಣ ಗ್ರಾಮವಿದೆ. ಕೇರ್ ಸಂಸ್ಥೆಯ ಗೋದಿಯ ನುಚ್ಚಿನಿಂದ ಅಲ್ಲಿ ಒಂದು ಶಾಲಾ ಕಟ್ಟಡ ಕಟ್ಟಿದ್ದಾರೆ. ಆದರೂ ಅದಕ್ಕೆ ಸರಕಾರದ ಹಣ, ತಾಲೂಕು ಬೋರ್ಡಿನ ಹಣ, ಜನರ ವಂತಿಕೆ ಇವೆಲ್ಲ ರೀತಿಯಿಂದ ದೊರೆತ ಹಣವನ್ನು ಖರ್ಚು ಹಾಕಿದ್ದಾರೆ. ಅಲ್ಲಿ ಹಣ ದುರುಪಯೋಗವಾಗಿದೆ. ಆದರೆ ಅದಕ್ಕೆ ಸಂಬಂಧಪಟ್ಟ ಅಧಿಕಾರಿಗಳು ಯಾವ ಕ್ರಮವನ್ನು ಕೈಗೋಂಡಿಲ್ಲ. ಹೀಗೆಲ್ಲಾ ಆಗುತ್ತಿರುವುದರಿಂದ ಜನರೆಲ್ಲ ಮುಖಂಡರಲ್ಲಿ ವಿಶ್ವಾಸ ಕಳೆದುಕೊಂಡಿದ್ದಾರೆ. ಆದುದರಿಂದ ಪರಿಹಾರ ಕಾರ್ಯಗಳನ್ನು ಸರಕಾರಿ ವಲಯದಲ್ಲಿ ಅಧಿಕಾರಿ ವಲಯದಲ್ಲಿ ಕೈಗೊಳ್ಳುವುದು ಸೂಕ್ತ. ಅಂಗರಗಟ್ಟೆಯಲ್ಲಿ ಒಂದು ಕೆಲಸ ನಡೆಯುತ್ತಿದ್ದಾಗ ಕೆಲಸಕ್ಕಾಗಿ 15 ನೂರು ಜನರು ಹೋದರು ಆದರೆ ಅಲ್ಲಿ ನಾನೂರು ಜನರಿಗೆ ಮಾತ್ರ ಕೆಲಸ ದೊರೆಯುವುದು, ಬೇಕಾದ ಇನ್ನು ಕೆಲವು ಸಾಮಾನುಗಳು ಬಂದರೆ 2 ಸಾವಿರ ಜನರಿಗೆ ಕೆಲಸ ಒದಗಿಸಬಹುದು ಎಂದು ಹೇಳಿ ಅನೇಕರನ್ನು ಅಲ್ಲಿಂದ ವಾಪಾಸು ಕಳಿಸಿದರು. ರೋಲರ ಮತ್ತು ಟಿಪ್ಪರಗಳಿಲ್ಲದ್ದರಿಂದ ಹೆಚ್ಚು ಮಂದಿಗೆ ಕೆಲಸ ಒದಗಿಸಲಾಗಲಿಲ್ಲ. ಆದರೆ ಇನ್ನು ಸರಕಾರವು ಪ್ರತಿಯೊಂದಕ್ಕೂ ಸಮಿತಿಗಳನ್ನು ಮಾಡಿ ಬೇಕಾದವರನ್ನು ಅಲ್ಲಿಗೆ ಹಾಕುತ್ತಾರೆ. ಆದರೆ ಅದರಿಂದ ಹಣ ವ್ಯಯವಾಗುತ್ತಿದೆಯೇ ಹೊರತು ಜನತೆಗೆ ಸಾಕಷ್ಟು ಸಹಾಯವಾಗುತ್ತಿಲ್ಲ. ಕೆಲಸಮಾಡಲು ಬರುವವರಿಗೆ ಕೆಲಸ ದೊರೆಯುತ್ತಿಲ್ಲ. ಈ ಬಗ್ಗೆ ಸ್ಟಡಿ ಟೀಮಿನವರು ರಾಜ್ಯ ಸರಕಾರಕ್ಕೆ ಕೆಲವು ಸೂಚನೆಗಳನ್ನು ಕೊಟ್ಟಿದ್ದಾರೆ. ರಾಜ್ಯ ಸರಕಾರದವರು ಕೆಲವು ಸಲಹೆಗಳನ್ನು ಕೊಟ್ಟಿದ್ದಾರೆ. ಯೋಜನೆಗಳನ್ನು ರೂಪಿಸುವದರಲ್ಲಿ ಪ್ರಾಯಶ: ಮೈಸೂರ ರಾಜ್ಯ ಪ್ರಾಸಸ್ತ್ಯವನ್ನು ಪಡೆಯಬಹುದೋ, ಏನೋ, ಈ ದೃಷ್ಟಿಯಿಂದ ಯಾರು ಯಾರಿಗೆ ಶಕ್ತಿ ಇದೆಯೋ, ಯಾರು ಯಾವುದರಲ್ಲಿ ಬುದ್ಧಿವಂತರೋ, ಯಾರು ಯಾವುದರಲ್ಲಿ ನಿಷ್ಠಾವಂತರೋ ಅಂಥವರನ್ನು ಮೆರಿಟ್ ಮೇಲೆ ಫ್ಯಾಮಿನ್ ರಿಲೀಫ್ ಸಮಿತಿಗೆ ಒಪ್ಪಿಸಬೇಕು ಎಂದು ಹೇಳುತ್ತಿದ್ದೇನೆ.

ಕೊನೆಯದಾಗಿ ಈ ರಾಜ್ಯದ ಮಂತ್ರಿಮಂಡಲದ ಮೇಲೆ ನಾನು ಒಂದು ಕವನವನ್ನು ರಚಿಸಿದ್ದೇನೆ. ಅದನ್ನು ಓದಿ ನನ್ನ ಭಾಷಣವನ್ನು ಮುಕ್ತಾಯ ಮಾಡುತ್ತೇನೆ.

ಜಾತಿಗೂ ಜಿಲ್ಲೆಗೂ ಪ್ರಾತಿನಿಧ್ಯ ?
ಬರಿಯ ಯೋಗ್ಯತೆ ಇರಲು ಏನು ಸಾಧ್ಯ
ವನವಾಸ ಕೈಗೊಂಡ ಕಲಿಯುಗದ ರಾಮ
ಹಳೆಯ ಹುಲಿಗಳಿಗಿಟ್ಟ ಮೂರು ನಾಮ !
ಅರೆ ಮಂತ್ರಿ, ಸರಿ ಮಂತ್ರಿ ಮಂತ್ರಿಗಳ ದಂಡು
ಕಂಡು ನಿಂತಿದೆ ಜನತೆ ದಿಗಿಲುಗೊಂಡು
ಮಳೆಯಿಲ್ಲ, ಬೆಳೆಯಿಲ್ಲ ಅನ್ನವಿಲ್ಲ
ಮಂತ್ರಿಮಾನ್ಯರಿಗಿದರ ಅರಿವೆ ಇಲ್ಲ.
ಕೇಂದ್ರದಲ್ಲಿ ಹಣವಿಲ್ಲ ಯೋಜನೆಗೆ ಬಲವಿಲ್ಲ
ಸಚಿವಸೇನೆಗೆ ಇರಲು ಜಾಗೆಯಿಲ್ಲ.
ಹೀಗಿರಲು ಬರಗಾಲ ಕೊನೆಗೊಳ್ಳಬಹುದೆ?
ಶುಭಕಾಲ ಸನಿಹದಲಿ ಸುಳಿಯಬಹುದೆ !

ಭ್ರಷ್ಟಾಚಾರ ನಿರ್ಮೂಲನೆ ಮಾಡುತ್ತೇವೆಂದು ಹೇಳುವವರು ಶುದ್ಧಹಸ್ತರಾಗಲಿ, ಜನತೆಯ ವಿಶ್ವಾಸವನ್ನು ಪಡೆಯಲು ದೇಶಕ್ಕೆ ಬಂದಿರುವ ಗಂಡಾಂತರವನ್ನು ಪರಿಹರಿಸಲು ದೇವರು ಸರ್ವ ಶಕ್ತಿಯನ್ನೂ ಕೊಡಲಿ ಎಂದು ಪ್ರಾರ್ಥಿಸಿ ನನ್ನ ಮಾತನ್ನು ಮುಕ್ತಾಯ ಮಾಡುತ್ತೇನೆ.

**ಶ್ರೀ ಬಿ. ನಂಜಪ್ಪ :** ಸನ್ಮಾನ್ಯ ಸಭಾಪತಿಗಳೇ, ಮಾನ್ಯ ಮುಖ್ಯಮಂತ್ರಿಗಳು ಅಭಾವ ಪರಿಸ್ಥಿತಿಯ ವಿಚಾರದಲ್ಲಿ ಇಟ್ಟಿರುವ ನಿರ್ಣಯವನ್ನು ಅನುಮೋದನೆ ಮಾಡುತ್ತಾ ಎರಡು ಮಾತುಗಳನ್ನು ಹೇಳಲು ಇಚ್ಛಿಸುತ್ತೇನೆ.

ಸ್ವಾಮಿ, ನಾಲ್ಕು ವರ್ಷಗಳಿಂದ ಮಳೇ ನಮ್ಮ ರಾಜ್ಯದಲ್ಲಿ ಸರಿಯಾಗಿ ಆಗದೆ ಇವೊತ್ತಿನ ದಿವಸ ಪರಿಸ್ಥಿತಿ ಏನಾಗಿದೆ ಎನ್ನುವುದು ದೇಶದ ಎಲ್ಲ ಜನಗಳಿಗೂ ಹಾಗೂ ನಮಗೂ ಸಾಕಷ್ಟು ಮನವರಿಕೆಯಾಗಿದೆ. ರೈತಾಪಿ ಜನಗಳು ಅಭಾವ ಪರಿಸ್ಥಿತಿಯನ್ನು ಎದುರಿಸಲು ತಮ್ಮಲ್ಲಿದ್ದಂತಹ ದನಕರುಗಳು, ಪಾತ್ರೆಪಡಿಗೆಯಾದಿಯಾಗಿ ಮಾರಾಟ ಮಾಡಿ ತಮ್ಮ ಜೀವನವನ್ನು ಇಲ್ಲಿಯವರೆಗೂ ನಡೆಸುತ್ತಾ ಬಂದಿರುತ್ತಾರೆ. ಇವೊತ್ತು ಅವರಿಗೆ ತಿನ್ನುವುದಕ್ಕೆ ಅನ್ನವಿಲ್ಲ. ಕೂಲಿ ಮಾಡುವುಕ್ಕೆ ಕೆಲಸ ಕೂಡ

ಸಿಗುತ್ತಿಲ್ಲ. ಈಗ ಅಭಾವ ಪರಿಸ್ಥಿತಿ ಸಂಬಂಧವಾಗಿ ಅಲ್ಲಲ್ಲಿ ಕೆಲವು ಕೆಲಸ ಕಾರ್ಯಗಳನ್ನು ಏರ್ಪಾಟು ಮಾಡಿದ್ದಾರೆ. ಈ ಕೆಲಸ ಕಾರ್ಯಗಳು ಏನೇನು ಸಾಲದಾಗಿರುತ್ತವೆ. ಜನಗಳು ಕೆಲಸಕ್ಕೆ ಹೋದರೆ ಕೇವಲ 50 ಜನಗಳಿಗೆ ಹೀಗೆ ಕೆಲಸ ಸಿಕ್ಕುತ್ತವೆ. ಬಾಕಿ ಜನಗಳಿಗೆ ಕೆಲಸ ಸಿಕ್ಕುತ್ತಿಲ್ಲ ಆದುದರಿಂದ ಹೆಚ್ಚು ಹೆಚ್ಚಾಗಿ ಕೆಲಸಗಳನ್ನು ಜನಗಳಿಗೆ ಒದಗಿಸಿ ಕೊಡುವುದು ಜರೂರಾಗಿ ಮಾಡಬೇಕಾದ ಕೇಲಸ.

ಜನಗಳು ಕೂಲಿ ಮಾಡಿ ಕೆಲಸಕ್ಕಾಗಿ ಜೀವನವನ್ನು ನಡೆಸುತ್ತಿರುವ ಸಂದರ್ಭದಲ್ಲಿ ಕಂದಾಯವನ್ನು ಮತ್ತು ರೈತರಿಗೆ ಕೊಟ್ಟಿರುವ ಸಾಲಗಳನ್ನು ವಸೂಲ ಮಾಡುವುದಕ್ಕಾಗಿ ಸರ್ಕಾರದವತಿಯಿಂದ ಜರೂರ ಆಜ್ಞೆಗಳು ಪ್ರತಿ ಜಿಲ್ಲೆಗೂ ಕೂಡ ಬರುತ್ತಿದೆ. ಇದು ಬಹಳ ಆಶ್ಚರ್ಯವಾಗಿ ಕಾಣುತ್ತದೆ.ಒಂದು ಕಡೆ ದೇಶದಲ್ಲಿ ಮಳೆ ಬಾರದೆ ಅಭಾವದಿಂದ ತೊಂದರೆ ಯಾಗಿರುವ ವಿಷಯವನ್ನು ಚರ್ಚೆ ಮಡುತ್ತಿದ್ದರೆ ಇನ್ನೊಂದು ಕಡೆ ಕಂದಾಯ ಮತ್ತು ಸಾಲ ಗಳನ್ನು ಜರೂರಾಗಿ ವಸೂಲು ಮಾಡಬೇಕೆಂದು ಆಜ್ಞೆ ಗಳು ಬರುತ್ತಿದ್ದು ವಿರೋಧಾಭಾಸವನ್ನು ಕಾಣುತ್ತಿದ್ದೇವೆ. ಈಗ ಹಾಸನ ಜಿಲ್ಲೆಯ ವಿಷಯ ಹೇಳುವುದಾದರೆ ಸುಮಾರು ಒಂಭತ್ತೂವರೆ ಲಕ್ಷ ರೂಪಾಯಿಗಳವರೆಗೂ ರಿಮಿಷನ್ ಆಗಬೇಕೆಂದು ಅಧಿಕೃತವಾಗಿ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಬರೆದು ಕಳಿಸಿದ್ದರೂ ಕೂಡ ಇದುವರೆಗೆ ರಿಮಿಷನ್ ಆಜ್ಞೆ ಬಂದಿಲ್ಲ. ಪದೇ ಪದೇ ಒತ್ತಾಯ ಮಾಡಿದರೂ ಸರ್ಕಾರದವರೂ ಜರೂರಾಗಿ ರಿಮಿಷನ್ ಆಜ್ಞೆ ಮಾಡಿ ಕಂದಾಯ ಮತ್ತು ಸಾಲದ ವಸೂಲಿ ಕ್ರಮವನ್ನು ತಾತ್ಕಾಲಿಕವಾಗಿಯಾದರೂ ತಡೆಹಿಡಿಯಬೇಕೆಂದು ನಾನು ಮುಖ್ಯ ಮಂತ್ರಿಯವರನ್ನು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಎಲ್ಲಿ ನೋಡಿದರೂ ಕುಡಿಯುವ ನೀರಿನ ಅಭಾವ ಹೆಚ್ಚಾಗಿದೆ. ಸುಮಾರು 40–50 ಅಡಿ ಆಳವಿರುವ ಬಾವಿಗಳಲ್ಲಿ ಕೂಡ ಕುಡಿಯುವ ನೀರಿಲ್ಲ. ಕುಡಿಯುವ ನೀರಿನ ಬಾವಿಗಳನ್ನು ಕೊಡಲು ಮತ್ತು ಇರುವ ಬಾವಿಗಳನ್ನು ಆಳ ಮಾಡಲು 64, ಫ್ಯಾಮಿನ್‌ನಲ್ಲಿ ಹಣವನ್ನು ಒದಗಿಸಿಲ್ಲ. ಕುಡಿಯುವುದಕ್ಕೆ ನೀರನ್ನಾದರೂ ಸಾಕಾದಷ್ಟು ಒದಗಿಸಿ ಕೊಡಬೇಕಾಗಿದೆ. ಇದಕ್ಕಾಗಿ ಸರ್ಕಾರದವತಿಯಿಂದ ಜಾಗ್ರತೆಯಾಗಿ ಕ್ಷಾಮ ಪರಿಹಾರ ನಿಧಿಯಲ್ಲಿ ಕುಡಿಯುವ ನೀರಿನ ಬಾವಿಗಳನ್ನು ಅಳವಡಿಸುವುದಕ್ಕೆ ಆಜ್ಞೆ ಕಳುಹಿಸಿಕೊಡಬೇಕು ಎಂದು ಪ್ರಾರ್ಥನೆ ಮಾಡುತ್ತಿದ್ದೇನೆ.

ಕ್ಷಾಮ ಪರಿಹಾರದ ವಿಚಾರದಲ್ಲಿ ಎರಡು ವಿಧವಾಗಿ ಮಾಡಬೇಕು. ಜರೂರಾಗಿ ಏನು ವ್ಯವಸ್ಥೆ ಮಾಡಬೇಕು ಎಂದರೆ ಕುಡಿಯುವ ನೀರನ್ನು ಒದಗಿಸುವುದು ಮತ್ತು ವ್ಯವಸಾಯ ಕೂಲಿಕಾರರಿಗೆ ಕೆಲಸವನ್ನು ಒದಗಿಸಿ ಅವರು ಮಾಡುವಂಥಹ

ಕೆಲಸಕ್ಕೆ ಕೂಲಿ ಮತ್ತು ಅದರ ಜೊತೆಗೆ ಆಹಾರ ಧಾನ್ಯಗಳನ್ನು ಅವರು ಎಲ್ಲಿ ಕೆಲಸ ಮಾಡುತ್ತಾರೆಯೋ ಅಲ್ಲಿಯೇ ವಿತರಣೆ ಮಾಡತಕ್ಕದ್ದು. ಅದನ್ನು ಮಾಡಿದರೆ ತಾತ್ಕಾಲಿಕವಾಗಿ ಸಹಾಯ ಮಾಡಿದಂತಾಗುತ್ತದೆ. ತಾತ್ಕಾಲಿಕವಾಗಿ ಕೆಲಸವನ್ನು ಕೂಡ ನಾವು ಮಾಡುತ್ತಿಲ್ಲ. ಎಲ್ಲೋ ಒಂದು ಪಂಚಾಯಿತಿ ಮುಖ್ಯ ಸ್ಥಳದಲ್ಲಿ ಅಥವಾ ಹೋಬಳಿಯಲ್ಲಿ ಒಂದರೆಡು ಕಡೆ ಕೆಲಸ ನಡೆಯುತ್ತಿದೆ. ಅಲ್ಲಿಗೆ ಹೋಗಿ ಕೆಲಸ ಮಾಡಿ ಎಂದು ಹೇಳುತ್ತಾರೆ; ಲೋಕೋಪಯೋಗಿ ಇಲಾಖೆಯಲ್ಲಿ ಕಾಮಾಗಾರಿಗಳು ನಡೆಯುತ್ತಿವೆ, ಅಲ್ಲಿ ಹೋಗಿ ಕೆಲಸ ಮಾಡಿ ಎಂದು ಹೇಳುತ್ತಾರೆ. ನಾಲ್ಕೈದು ಮೈಲಿ, ಹತ್ತಾರು ಮೈಲಿ ದೂರ ಹೋಗಿ ರೈತಾಪಿ ಜನಗಳು ಕೆಲಸ ಮಾಡಿ ಸಾಯಂಕಾಲದ ವೇಳೆಗೆ ಮನೆಗೆ ವಾಪಾಸ್ಸು ಬರುವುದಕ್ಕೆ ಸಾಧ್ಯವೇ? ಆದುದರಿಂದ ಜನಗಳು ಎಲ್ಲೆಲ್ಲಿ ಕೆಲಸ ಮಾಡುವುದಕ್ಕೆ ಮುಂದೆ ಬರುತ್ತಾರೆ; ಯಾವ ಯಾವ ಹಳ್ಳಿಗಳಲ್ಲಿ ಮುಂದೆ ಬರುತ್ತಾರೆ; ಯಾವ ಯಾವ ಹಳ್ಳಿಗಳಲ್ಲಿ ಮುಂದೆ ಬರುತ್ತಾರೆ ಅಂಥ ಸ್ಥಳಗಳನ್ನೇ ಕೇಂದ್ರವಾಗಿ ಮಾಡಿ ಅವರಿಗೆ ಬೇಕಾದಷ್ಟು ಆಹಾರ ಮತ್ತು ಕೆಲಸಗಳನ್ನು ಜರೂರಾಗಿ ಏರ್ಪಾಟು ಮಾಡಬೇಕೆಂದು ಈ ಸಂದರ್ಭದಲ್ಲಿ ಹೇಳುತ್ತೇನೆ.

ಶಾಶ್ವತವಾದ ಪರಿಹಾರ ಕಾರ್ಯಗಳ ವಿಚಾರವಾಗಿ ಹೇಳಬೇಕಾದರೆ ಕ್ಷಾಮ ಎನ್ನುವುದು ಇವೊತ್ತು ಹೊಸದಾಗಿ ಬಂದಿಲ್ಲ. ಸಾಮಾನ್ಯವಾಗಿ ನೂರಾರು ವರ್ಷಗಳಿಂದ ಒಂದಲ್ಲ ಒಂದು ಪ್ರದೇಶ, ಒಂದು ದೇಶವಲ್ಲ ಇನ್ನೊಂದು ದೇಶ ಒಂದೊಂದು ಸಾರಿ ಕ್ಷಾಮಕ್ಕೆ ಇಡಾಗುತ್ತಿವೆ. ಇದಕ್ಕೆ ನಾವು ಮುಂಜಾಗ್ರತೆ ಕ್ರಮಗಳನ್ನು ತೆಗೆದುಕೊಂಡು ಕ್ಷಾಮ ನಿವಾರಣೆ ಮಾಡಬೇಕು. ಒಂದೆರಡು ಮಳೆ ಬಂದರೆ ಸಾಕು, ದೇಶದಲ್ಲಿ ಕ್ಷಾಮವಿಲ್ಲ ಎಂದು ಕ್ಷಾಮ ಪರಿಹಾರ ಕಾರ್ಯವನ್ನು ನಿಲ್ಲಿಸುವುದು, ಕ್ಷಾಮ ಕಾಲದಲ್ಲಿ ಏನೇನು ವ್ಯವಸ್ಥೆಯನ್ನು ಮಾಡುತ್ತೀರಿ ಅದನ್ನೆಲ್ಲ ಕೈ ಬಿಟ್ಟು ಮಾಮೂಲಾದ ಕೆಲಸಗಳು ಏನಿವೆ ಅವುಗಳನ್ನು ಮಾತ್ರ ಮಾಡುತ್ತೀರಿ. ಹಾಗೆ ಮಾಡಿದರೆ ಶಾಶ್ವತವಾದ ಪರಿಹಾರವನ್ನು ಮಾಡಿದಂತಾಗದೆ ಹೋಗುವುದರಿಂದ ಇನ್ನು ಹತ್ತು ವರ್ಷಕ್ಕಾದರೂ ಕ್ಷಾಮ ತಲೆದೋರುತ್ತದೆ. ಎಂದು ತಿಳಿದುಕೊಂಡು ಶಾಶ್ವತವಾದ ಪರಿಹಾರ ಕಾರ್ಯಗಳನ್ನು ಮಾಡಬೇಕು.

ಹಾಸನ ಜಿಲ್ಲೆಯಲ್ಲಿ ಬೇಕಾದಷ್ಟು ನೀರಾವರಿ ಕಾಮಗಾರಿಗಳನ್ನು ಮಾಡಲು ಅವಕಾಶವಿದೆ. ಹಾರಂಗಿ. ಯಗಚ್ಚಿ, ಮಾಟೇನಹಳ್ಳಿ, ಹೇಮಾವತಿ ಇಂಥ ದೊಡ್ಡ ದೊಡ್ಡ ಪ್ರಾಜೆಕ್ಟ್‌ಗಳ ಕೆಲಸ ಕಾರ್ಯಗಳನ್ನು ಮಾಡಬೇಕೆಂದು ಅಂದಾಜು ಮಾಡಿದ್ದಾರೆ.

ಬಹುಶ; ಐದಾರು ವರ್ಷಗಳಿಂದಲೂ ಕೂಡ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಕ್ಕೆ ಪತ್ರ ವ್ಯವಹಾರ ನಡೆಯುತ್ತಿದೆ. ಈ ವ್ಯವಹಾರವೇನಾದರೂ ನಿಧಾನವಾಗುತ್ತಿದಯೇ ಎನ್ನುವುದು ಗೊತ್ತಾಗುವುದಿಲ್ಲ. ಒಂದು ಕೆಲಸವನ್ನು ಮಾಡಬೇಕೆಂದು ತೀರ್ಮಾನ ಮಾಡಿದರೆ ಅದನ್ನು ಜರೂರಾಗಿ ಸರ್ಕಾರದವರು ಮಾಡಬೇಕು. ದಯವಿಟ್ಟು ನಮ್ಮ ಮಾನ್ಯ ಮುಖ್ಯಮಂತ್ರಿಗಳು ಈ ಯೋಜನೆಗಳ ವಿಚಾರದಲ್ಲಿ ಜರೂರಾಗಿ ಕೆಲಸ ಕಾರ್ಯಗಳನನು ಮಾಡಿದರೆ ಅದರಿಂದ ಖಾಯಂ ಆ ಪರಿಹಾರ ಸಿಕ್ಕುತ್ತದೆ ಎಂದು ಈ ಸಂದರ್ಭದಲ್ಲಿ ಅವರಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

## ತುಂಗಾ ಮೇಲ್ದಂಡೆ ಯೋಜನೆ

### 31st march 1969 to 10th april 1969

**ಶ್ರೀ ಎಂ.ಜಿ.ಬಣಕಾರ:** ಉತ್ತರದಲ್ಲಿ ತುಂಗಾ ಮೇಲ್ದಂಡೆ ಯೋಜನೆಯ ಸರ್ವೆ ಕೆಲಸ ಮುಗಿದಿಲ್ಲವೆಂದು ಹೇಳಿದೆ. ಹಾಗಾದರೆ ಈ ಯೋಜನೆಯನ್ನು ಕೈಬಿಡಲಾಗಿದೆಯೇ? ಕೈಬಿಡದಿದ್ದರೆ ಇದರ ಕೆಲಸ ಯಾವ ಹಂತದಲ್ಲಿದೆ? ಹಿಂದೆ ಒಂದು ಪ್ರಶ್ನೆಗೆ ಉತ್ತರ ಕೊಟ್ಟಿರುವುದರ ಬಗ್ಗೆ ಏನು ಹೇಳುತ್ತೀರಾ?

**ಶ್ರೀ ಡಿ. ಪರಮೇಶಪ್ಪ :** ಸ್ವಾಮಿ, ಅವರು ಪ್ರಶ್ನೆ ಕೇಳಿರುವುದು ಅಪ್ಪರ ತುಂಗ ಯೋಜನೆಯ ಸರ್ವೆ ಮುಗಿದಿದೆಯೇ ಅಂತ, ಸರ್ವೆ ಕಾರ್ಯ ಮುಗಿದಿಲ್ಲ ಎಂದು ಉತ್ತರದಲ್ಲಿ ಸ್ಪಷ್ಟವಾಗಿದೆ.

**ಶ್ರೀ ಎಂ.ಜಿ. ಬಣಕಾರ್:** ತಾವು ಕೊಟ್ಟಿರುವ ಉತ್ತರ ನೋಡಿದರೆ ಯೋಜನೆ ಕೈಬಿಟ್ಟಿದ್ದಾರೆ ಎಂಬ ಅರ್ಥವಾಗುತ್ತದೆ.

**ಶ್ರೀ ಡಿ.ಪರಮೇಶ್ವರಪ್ಪ :** ತಾವು ಪ್ರಶ್ನೆ ಕೇಳಿರುವುದು ನೋಡಿದರೆ ಸರಿಯಾದ ಉತ್ತರ ಅಲ್ಲೇ ಸಿಕ್ಕುತ್ತದೆ.

**ಅಧ್ಯಕ್ಷರು :** ಈಗ ಅದನ್ನು ಕೈಬಿಟ್ಟಿದ್ದೀರಾ ಅಂತಾ ಕೇಳುತ್ತಾರೆ.

**ಶ್ರೀ ಡಿ. ಪರಮೇಶ್ವರಪ್ಪ :** ಕೈ ಬಿಟ್ಟಿಲ್ಲ, ಸರ್ವೆ ಕಾರ್ಯ ಪೂರ್ತಿಯಾಗಿ ಮುಗಿದಿಲ್ಲ.

**ಶ್ರೀ ಸಿದ್ದಯ್ಯ ಕಾಶಿಮಠ :** ಮೇಲ್ದಂಡೆ ಯೋಜನೆಯನ್ನು ಮಾಡುವುದರಿಂದ ಸತತವಾಗಿ ಬರಗಾಲಕ್ಕೆ ತುತ್ತಾಗುವ ಬ್ಯಾಡಗಿ, ಶಿರಹಟ್ಟಿ, ಮುಂಡರಗಿ, ತಾಲ್ಲೂಕುಗಳಿಗೆ

ಬಹಳ ಉಪಯೋಗವಾಗುವುದರಿಂದ ಈ ಯೋಜನೆಯನ್ನು ಬಹಳ ತೀವ್ರವಾಗಿ ತೆಗೆದುಕೊಳ್ಳುವುದಕ್ಕೆ ಮನಸ್ಸು ಮಾಡುತ್ತೀರಾ?

**Sri D. PARMESWARAPPA :** That depends upon the availability of funds and technical clearance to be given by the C.W.P.C

**Sri C.K. RAJAIAH SHETTY :** When do you expect the survey work to be compeleted and when did it commence, sir?

**Sri D. PARAMESWARAPPA :** The survey work commenced just about six months ago and it going on.

**Sri H.N.NANGEGOUDA :** May I know the stage of Survey of the said project and may I know the approximate irrigable area if the project is compeleted.

**Sri D.PARAMESWARAPPA:** Unless the survey is compeleted,it is not possible to give all the details.

**ಶ್ರೀ ಎನ್.ಎಲ್. ಬೆಲ್ಲದ್ :** ಇದು ಅಪ್ಪರ್‌ತುಂಗಾಕ್ಕೆ ಸಂಬಂಧಿಸಿದ ಯೋಜನೆ ಆದ್ದರಿಂದ ನಿರ್ಧಿಸ್ಟವಾದ ಉತ್ತರ ಕೊಟ್ಟರೆ ತೃಪ್ತಿಕರವಾಗುತ್ತದೆ.

**ಅಧ್ಯಕ್ಷರು:** ಮಾನ್ಯ ಸದಸ್ಯರು ಕುಳಿತುಕೊಳ್ಳಬೇಕು.

**ಶ್ರೀ ಎಂ.ಜಿ.ಬಣಕಾರ:** ಬೈರಂಪಾದ ಮತ್ತು ಗಾಜನೂರು ಈ ಎರಡು ಅಪ್ಪರ್ ತುಂಗಾಕ್ಕೆ ಸಂಬಂಧಪಟ್ಟದ್ದು, ಸರ್ವೆ ಕಾರ್ಯ ನಡೆದಿದೆ. ಮಾರ್ಚ 1968 ಕ್ಕೆ ಮುಕ್ತಾಯವಾಗುತ್ತದೆ ಎಂದು ಈ ಮನೆಯಲ್ಲಿ ಹಿಂದೆ ಉತ್ತರ ಕೊಟ್ಟಿದ್ದಾರೆ. ಗಾಜನೂರಾಗಲಿ ಬೈರಂಪಾದ ಆಗಲಿ ಅಪ್ಪರ್ ತುಂಗಾಕ್ಕೆ ಬಿಟ್ಟಿದ್ದಲ್ಲ ಅದಕ್ಕೆ ಒಳಪಟ್ಟಿದೆ. ಆದ್ದರಿಂದ ಈ ಸರ್ವೆ ಕಾರ್ಯ ಎಲ್ಲಿಗೆ ಮುಗಿಯುತ್ತಿದೆ ಎಂಬುದನ್ನು ಹೇಳಬೇಕು ಮಾರ್ಚ 1968 ರಲ್ಲಿ ಮುಕ್ತಾಯವಾಗಿಲ್ಲ.

**ಶ್ರೀ ಡಿ.ಪರಮೇಶ್ವರಪ್ಪ :** ಸರ್ವೆ ಕಾರ್ಯ 1968 ಮಾರ್ಚನಲ್ಲಿ ಮುಕ್ತಾಯವಾಗುತ್ತದೆ ಎಂದು ಯಾವ ಸಂದರ್ಭದಲ್ಲಿ ಹೇಳಿದ್ದಾರೋ ಕಾಣೆ, ಏಕೆಂದರೆ ಸರ್ವೆ ಕಾರ್ಯ ಮುಗಿಯುವುದಕ್ಕೆ ಟೈಂ ಎಷ್ಟಾಗುತ್ತದೆ. ಎಂದು ನಿರ್ಧಿಷ್ಟವಾಗಿ ಹೇಳುವುದಕ್ಕೆ ಸಾಧ್ಯವಿಲ್ಲ.ಆದ್ದರಿಂದ ಆದಷ್ಟು ಆಸಕ್ತಿ ವಹಿಸಿ ಪೂರ್ತಿಯಾಗಿ ಸರ್ವೆ ಆಗಬೇಕೆಂದು ಸರ್ವೆ ಕಾರ್ಯ ಮಾಡಿಸುತ್ತಾ ಇದ್ದೇವೆ.

## 8th april 1969

Advocate appointed to appear before Mahajan Commission on behalf of Mysore Government.

**Sri MAHADEV BANAKAR (Byadgi):-** Will the chief Minister be pleased to state:-

a) the amount of remuneration paid by Government to the Advocates who argued before Mahajan Commission on behalf of Mysore State;

b) whether it is fact that the said Advocates had argued on behalf of Maharastrians in one of the cases relating to Nippani Muncipality.

c) If so, whather it is a fact that it amounts to revealing the secrets of Government of Mysore and therby betraying the Mysore state also;

d) The action taken by them against the said Advocates?

**Sri VEERANDRA PATIL ( Chief Minister):-**

a) A total sum of Rs 2,00,170,45 as detailed below

1) To Sri M.K.Nambyar ..... Rs 1,19, 574,00

2) To Sri H.B.Datar ..... Rs 27,753, 35

3) To Sri P.S.Kamath ..... Rs 12,793,10

4) To Sri B.R.L. Iyengar ...... Rs 15,050,00

5) To Sri T.Krishna Rao ...... Rs 25,000,00

b) Yes Sri, S.B.Datar, Advocate appeared for some of the respondents in writ Pettion No.1964/68 relating to Nippani Municipality. Government is not aware whether these respondent are Mharashtrians.

c) State Government is also not aware whetherthe Counsel made use of any information furnished to him for a appearing before the mahajan commission in respect of Nippani Municipality case.

d) Does not arise in view of replises to clauses (b) and (c)

**ಶ್ರೀ ಎಂ.ಜಿ. ಬಣಕಾರ್ :** (ಅ) ಪ್ರಶ್ನೆಗೆ ಉತ್ತರವಾಗಿ 2,00,170–45 ರೂಪಾಯಿಗಳನ್ನು ಕೊಡಲಾಗಿದೆ. ಅದರಲ್ಲಿ ಶ್ರೀ ಎಚ್. ಬಿ ದಾತಾರ್ ಅವರು ಸಹ ಸೇರಿದ್ದಾರೆಂದು ಒಪ್ಪಿಕೊಂಡಿದ್ದೀರಿ. (ಅ) ಪ್ರಶ್ನೆಗೆ ಉತ್ತರ ಕೊಡುತ್ತಾ ಸರಿಯಾದ ಉತ್ತರವನ್ನು ಕೊಟ್ಟಿಲ್ಲ. ನಿಪ್ಪಾಣಿ ಪುರಸಭೆಗೆ ಕನ್ನಡಿಗರು ಯಾರೂ ಸಹ ಆರಿಸಿ ಬರದಂತೆ ವಾರ್ಡ್‌ನ್ನು ವಿಲೇವಾರಿ ಮಾಡಿದ ಬಗ್ಗೆ ಒಂದು ರಿಟ್ ಕೇಸ್ ಫೈಲ್ ಆಗಿತ್ತು. ಈ ಕೇಸ ಬಗ್ಗೆ ಶ್ರೀ ದಾತಾರ್ ಅವರು ಒಕಾಲತ್ತು ವಹಿಸಿದ್ದರು. ಬೇರೆ ಕನ್ನಡದ ಅಡ್ವಕೇಟ್ ಇದ್ದರೂ ಕೂಡ ನಿಪ್ಪಾಣಿ ಪುರಸಭೆಗೆ ಸಂಬಂಧಿಸಿದಂತೆ ಕೆಲವು ಮಂದಿ ಸದಸ್ಯರುಗಳು ಶ್ರೀ ದಾತಾರ್ ಅವರನ್ನೇ ತಮ್ಮ ವಕೀಲರನ್ನಾಗಿ ಮಾಡಿಕೊಂಡರು. ಈ ರೀತಿ ಶ್ರೀ ದಾತಾರ್ ಅವರು ಮಹಾರಾಷ್ಟ್ರದವರು ಎಂದು ತಿಳಿದಿದ್ದರೂ ಕೂಡ ಮಹಾಜನ್ ಕಮಿಷನ್ ಮುಂದೆ ಮೈಸೂರ ಪರ ವಾದಿಸಲು ಇವರನ್ನು ನೇಮಕ ಮಾಡಿಕೊಂಡಿದ್ದೀರಿ. ಶ್ರೀ ದಾತಾರ್ ಅವರು ಮೈಸೂರ ಸರ್ಕಾರದಿಂದ ಮತ್ತು ಮಹಾರಾಷ್ಟ್ರ ಸರ್ಕಾರದಿಂದ ಅಂದರೆ ಎರಡು ರಾಜ್ಯಗಳಿಂದಲೂ ಕೂಡ ಬೆನಿಫಿಟ್ ಪಡೆದಿದ್ದಾರೆ. ಈಗ ನಮ್ಮ ಸರ್ಕಾರದವರು ಕೊಟ್ಟಿರುವ 27,753–35 ರೂಪಾಯಿಗಳನ್ನು ವಸೂಲಿ ಮಾಡಲಿ ಕ್ರಮ ಕೈಗೊಳ್ಳುತ್ತಾರೆಯೇ?

**ಶ್ರೀ ವಿರೇಂದ್ರ ಪಾಟೀಲ್ :** ನಿಪ್ಪಾಣಿ ಮುನಿಸಿಪಾಲಿಟಿ ಎಲೆಕ್ಸನ್ ಮೇಲೆ ಅಂದು ರಿಟ್ ಕೇಸು ಇತ್ತು. ಇದರಲ್ಲಿ ಶ್ರೀ ದಾತಾರವರೂ ಅಪಿಯರು ಆಗಿರಬಹುದು. ಮಾನ್ಯ ಶ್ರೀ ದಾತಾರ್‌ವರು ಒಬ್ಬರು ಸಿನಿಯರ್ ಅಡ್ವಕೇಟ್‌ರಾಗಿರುವುದರಿಂದ ಅದರಲ್ಲೂ ಒಂದು ಸ್ಟಾಂಡರ್ಡ್ ಇವರಿಗಿರುವುದರಿಂದ ಅವರು ನಮ್ಮ ಕೇಸುಗಳನ್ನು ಸರಿಯಾಗಿ ನೋಡಿಕೊಳ್ಳುತ್ತಾರೆ ಇದರಲ್ಲಿ ನಮ್ಮ ಕೇಸಿನ ಬಗ್ಗೆ ಸರಿಯಾಗಿ ಕೆಲಸ ಮಾಡುವುದಿಲ್ಲ ಎನ್ನುವ ಅನುಮಾನವನ್ನು ಯಾರೂ ಒಪ್ಪಿಕೊಳ್ಳುವುದಕ್ಕೆ ಆಗುವುದಿಲ್ಲ. ಅವರು ಒಬ್ಬರು ಸೀನಿಯರ್ ಆಡ್ವೋಕೇಟ್‌ರಾಗಿರುವುದರಿಂದ ಮೈಸೂರು ಕೇಸಿಗೆ ವಿರೋಧವಾಗಿ ಅಭಿಪ್ರಾಯ ಕೊಡುತ್ತಾರೆ ಎನ್ನುವುದಕ್ಕೆ ಯಾವ ಸಂಶಯವೂ ಇಲ್ಲ ಮತ್ತು ಸಕಾರಣಗಳೂ ಇಲ್ಲ.

## 1.30 P.M

**Sri SIDDAIAH KASSHIMATH :** May I know whether these advocates were appointed daily or monthly fees basis ?

**Sri VEERENDRA PATIL:** About this, I can give some details. So far as Sri M.K.Nambbyar is concerned. His fees was Rs. 25,000 to study the case and to enable scrutiny and finalization of the memorandum, and Rs 2,500 for every day he is out of head quarters,i.e., Madras , for taking instructions , security of memorandum and arguments before the Mahajan Commission. So far as Sri Datar is concerned, the fee is, for reading the memorandum Rs 5,000 and Rs 500 per day during hearing before the Mahajan Commission, whether he is required to go out of Bangalore. The fee of Sri P.S. KAMATH is Rs. 500 per day for arguments. Sri B.R.L. Iyenger was also appointed to help Sri Nambyar to argue the case of Sholapur and akkalkot, and he was paid a reading fees of Rs 3,200 a daily fee of Rs 1,600 and a consolidated allowance including car hire, etc. at Ooty, of Rs 650.

**Sri, SiDDVEERAPPA :** Is it not a fact that the the Government themselves approached Sri,H.B.Datar and requested him to argue the case on be half of Mysore Government ? Is not also a fact that he is one of the respected senior advocates of the Mysore High Court, and that the govermment is aware that there is no prohibition for a lawyer to appear in another case if the parties and cases are not identical?

**Sri VEERENDRA PATIL :** I Fully agree with the Hon.Member Sri Siddaveerappa.In fact, in my reply to a supplementary, I said that he is one of our senior most respected lawyers with lucrative practice and it is least expect that they will represent the case

correctly and they will not abuse the faith that we have reposed in them.

**Sri N.B.SIRDESAI :** Is it not a fact that the expenditure incurred towards remuneration to the advocates was improper and unwarranted and it was a burden on the public money as the advocates argued for establishing the case of places which ordinarily never belong to mysore?

**Mr. DEPUTY SPEAKER :** How does it arise? It is disallowed.

**Sri B.P.GANGADHAR:** It was stated that five persons were appointet for the purposeof representing the case of Mysore state before the commission.Here,I do not see the name of the Advocate General or the Government Pleaders.Is it the opinion of the Government that the Advocate –General of the state was incapable of pressing the claims of Mysore or explaining the case before the commission or whether the government considered that these five persons are the only persons capable of up holding the case of the government before the Mahajan commission?

**Sri VEERENDRA PATIL :** Sir, If the Hon.Member looks to the replies furnished, the Advocate-General, Sri, T.Krishna Rao is also there.

## Sanction of Special pay to officials qualified in kannada Shorthand and Typewriting

**Sri M.G.BANAKAR (Byadgi):** Will the Chief Minister be pleased to state :-

a) the number of kannada Typewriters purchased by the Government ;

b) in order to encourage those who have qualified themselves in Kannada Typewrting and Shorthand whether they would pay them more than it present;

c) If not ,the reason there for whether they intend to give more pay?

**Sri VEERENDRA PATIL(Chief Minister) :**

a) 200

b) Yes, Government have directed that I divison Clerks who are qualified in Kannada shorthand and Typewriting may be paid a special pay of Rs 30 per month while II divison Clerks who are qualified in kannada Shorthand and Typewriting may be paid a special pay of Rs 20 per month.

c) Does not arise.

**ಎಂ.ಜಿ. ಬಣಕಾರ್ :** ನಾನು ಕನ್ನಡ ಟೈಪಿಸ್ಟ್ಸ್ ವಿಷಯದಲ್ಲಿ ಪ್ರಶ್ನೆಕೇಳಿದ್ದೇನೆ. ಸರ್ಕಾರದವರು ಗುಮಾಸ್ತರ ವಿಷಯದಲ್ಲಿ ಉತ್ತರ ಕೊಟ್ಟಿದ್ದಾರೆ. ಇದಕ್ಕೆ ಕಾರಣವೇನು?

**ಶ್ರೀ ವಿರೇಂದ್ರ ಪಾಟೀಲ್ :** (ಅ) ಗೆ ಉತ್ತರವಾಗಿ ಕನ್ನಡ ಟೈಪರೈಟರ್‌ಗಳು 200 ಇವೆಯೆಂದು ಹೇಳಿದೆ. ಮೊದಲನೆಯ ಗುಮಾಸ್ತರಿಗೆ 30 ರೂಪಾಯಿಗಳಂತೆಯೂ, ಎರಡನೆಯ ದರ್ಜೆಯ ಗುಮಾಸ್ತರಿಗೆ 20 ರೂಪಾಯಿಗಳಂತೆ ವಿಶೇಷ ವೇತನವನ್ನು ಕೊಡಬಹುದೆಂದು ಹೇಳಿದೆ.

**ಶ್ರೀ ಎಂ.ಜಿ.ಬಣಕಾರ್ :** ಪ್ರಥಮ ದರ್ಜೆ ಮತ್ತು ಎರಡನೆಯ ದರ್ಜೆ ಗುಮಾಸ್ತರು ಕನ್ನಡ ಟೈಪಿಸ್ಟ್ಸ್‌ಗಳಾಗಿ ಕೆಲಸ ಮಾಡುತ್ತಿದ್ದರೆ, ಅಂತಹವರಿಗೆ ವಿಶೇಷ ವೇತನವನ್ನು ಕೊಡುತ್ತೇವೆಂದು ಹೇಳುತ್ತೀರಿ ನಾನು ಬರಿ ಕನ್ನಡ ಟೈಪಿಸ್ಟ್ಸ್ ಆಗಿರುವವರ ಬಗ್ಗೆ ಪ್ರಶ್ನೆ ಕೇಳಿದ್ದೇನೆ. ಅದಕ್ಕೇನು ಹೇಳುತ್ತೀರಿ ?

**ಶ್ರೀ ವಿರೇಂದ್ರ ಪಾಟೀಲ್:** ಇದರಲ್ಲಿ ಬರೇ ಟೈಪಿಸ್ಟ್ಸ್ ಆಗಿರುವ ಪ್ರಶ್ನೆ ಬರುವುದಿಲ್ಲ.

**ಶ್ರೀ ಎಂ.ಜಿ.ಬಣಕಾರ :** ನಾನು ಕೇಳಿರುವ ಪ್ರಶ್ನೆ ಕನ್ನಡ ಟೈಪರೈಟಿಂಗ್ ಮತ್ತು ಕನ್ನಡ ಶೀಘ್ರ ಲಿಪಿಗಳಲ್ಲಿ ಪರಿಣಿತರಾದವರಿಗೆ ವಿಶೇಷ ಸಂಭಾವನೆಯನ್ನು

ನೀಡುವ ವಿಚಾರ. ಸರ್ಕಾರದವರು ಗುಮಾಸ್ತರಾಗಿದ್ದು ಕನ್ನಡ ಟೈಪ್ ಮಾಡುವವರ ಬಗ್ಗೆ ಉತ್ತರ ಕೊಟ್ಟಿದ್ದೀರಿ.

**Mr. SPEAKER:** What will be the policy if he is merely a Typist or a Steeno learns it? Is it the policy to pay more?

**ಶ್ರೀ ವಿರೇಂದ್ರ ಪಾಟೀಲ್ :** ಸಬ್ಜೆಕ್ಟ್‌ಟು ವೆರಿಫಿಕೇಶನ್, ಸೈಟಾಗಿ ಪಾಸಾಗಿ ಬರುವವರು ಕಡಿಮೆ. ಕನ್ನಡ ಟೈಪಿಸ್ಟ್ಸ್ ಯಾರು ಇದ್ದಾರೆಯೋ ಅವರು ಕನ್ನಡ ಶೀಘ್ರಲಿಪಿಯನ್ನು ಕಲಿತವರ ಅಂತಹವರಿಗೆ ಇನ್‌ಸೆಂಟಿವ್ ಕೊಡೋಣ. ಯಾರ‍್ಯಾರು ಇದರಲ್ಲಿ ಪರಿಣತರಾಗಿದ್ದಾರೆಯೋ ಅಂತಹವರಿಗೂ ಇನ್‌ಸೆಂಟಿವ್ ಕೊಡುತ್ತೇವೆ.

**ಶ್ರೀ ಸಿದ್ಧಯ್ಯ ಕಾಶಿಮಠ :** ಕನ್ನಡ ಟೈಪಿಸ್ಟುಗಳಿಗೆ ವಿಶೇಷ ಭತ್ಯವನ್ನು ಕೊಡುವ ಬಗ್ಗೆ ಆಜ್ಞೆಯನ್ನು ಮಾಡಿದ ನಂತರ ಅದನ್ನು ಜಾರಿಗೆ ತರುವುದಕ್ಕೆ ಪ್ರಯತ್ನ ಮಾಡುತ್ತೀರಾ?

**ಶ್ರೀ ವಿರೇಂದ್ರ ಪಾಟೀಲ್ :** ಈಗ ಯಾರು ಯಾರು ಪ್ರಥಮ ದರ್ಜೆಯ ಗುಮಾಸ್ತರು ಮತ್ತು ಎರಡನೆಯ ದರ್ಜೆಯ ಗುಮಾಸ್ತರು ಕನ್ನಡ ಟೈಪ್‌ರೈಟರ್ ಮತ್ತು ಕನ್ನಡ ಶೀಘ್ರಲಿಪಿಯಲ್ಲಿ ಪರಿಣಿತರಾಗಿ ಆ ಕೆಲಸವನ್ನು ಮಾಡುತ್ತಾರೆಯೋ ಅವರಿಗೆ ಮಾಹೆಯಾನ 20–30 ರೂಪಾಯಿಗಳ ವಿಶೇಷ ವೇತನ ಸಿಕ್ಕುತ್ತದೆ.

**ಶ್ರೀ ಎಂ.ಜಿ.ಬಣಕಾರ್:** ಸ್ವಾಮಿ, ನಾನು ಕೇಳಿರತಕ್ಕ ಪ್ರಶ್ನೆಯಲ್ಲಿ ಪ್ರಥಮ ದರ್ಜೆಯ ಗುಮಾಸ್ತರು ಮತ್ತು ಎರಡನೆ ದರ್ಜೆಯ ಗುಮಾಸ್ತರು ಕನ್ನಡ ಟೈಪಿಂಗ್ ಮತ್ತು ಶೀಘ್ರಲಿಪಿ ಬರತಕ್ಕವರು ಯಾರು ಇದ್ದಾರೆಯೋ ಅವರು ಈ ರಾಜ್ಯದಲ್ಲಿ ಯಾವುದೇ ಡಿಪಾರ್ಟಮೆಂಟ್‌ನಲ್ಲಿ ಇರಲಿ ಅವರಿಗೆ ಹೆಚ್ಚಿನ ವೇತನವನ್ನು ಕೊಡುತ್ತೀರಾ ಎಂದು ಕೇಳಿದ್ದೇನೆ. ಈ ಪ್ರಶ್ನೆ ಸ್ವಲ್ಪ ದೊಡ್ಡದಾದರೂ ಇದನ್ನು ಪರಿಶೀಲನೆ ಮಾಡಿ ಇದಕ್ಕೆ ಸಮಗ್ರವಾದ ಉತ್ತರವನ್ನು ಕೊಡುತ್ತೀರಾ.

**ಶ್ರೀ ವಿರೇಂದ್ರ ಪಾಟೀಲ್:** ಈಗ ಮಾನ್ಯ ಸದಸ್ಯರು ಕೇಳಿರತಕ್ಕಂತಹ ಪ್ರಶ್ನೆ ಏನಿದೆ ಇದು ಜನರಲ್ ಪ್ರಶ್ನೆ. ಆದ್ದರಿಂದ ಇದಕ್ಕೆ ಪ್ರತ್ಯೇಕವಾದ ಪ್ರಶೆಯನ್ನು ಕೇಳಿದರೆ ಉತ್ತರವನ್ನು ತರಿಸಿಕೊಡುತ್ತೇನೆ.

## 27th March 1969

## 4-00P.M

**Sri D.S.KALMANKAR :** What are your views with regard to the observations of the supreme Court that monopolists are being indirectly encouraged?

**Sri D.DEVARAJ URS:** All that has has been started by Sri Nagappa and Idon't want to repeat them.

**Sri H.M.CHANNABASAPPA:** What are the views of the Hon. Member on the views of the supreme Court that Government's bonafides are doubted.

**Sri DEVARAJ URS:** The other day itself I have spoken about it. What is the use of My Hon. Friend asking me to repeat it again and again. The other day I have stated that Caesar's wife must be above board. I assert the same statement again and I stick to the statement I made the other day.

With regard to the Sales Tax, I must compliment the Finance Minister for being able to get more Sals Tax revenue for the year 1968-69 than that was estimated. If I remember the figures, the estimated figures were to the tune of Rs 29 crores and I gather we are going to get more than Rs 32 crores or some thing more; and that goes to the credit of the working of the Department.But I do not mean to say that they have done the very best, and that there is no more possibility of getting more revenues, than we are likely to get. We are aware there are still loopholes to be plugged and there are so many re-adjustments to be made by way of necessary provision or amendment in the Act.

**Sri D.M.SIDDAIAH:** The hon. Member said that one must be above board like caeser. Caeser had Cleopatra also as his wife. So, to which wife the Member reffered ?

**Sri D.DEVARAJ URS :** I reffered to the wedded wife and not to the kudike wife.

**Mr. SPEAKER :** I think he reffered to both the wives.

**Sri D.DEVARAJ URS :** Yes, to both the wives . I Thank you for the suggestion.

I am glad the finance Minister is realising that there is still scope for getting more revenues out of sales Tax and has thought it fit to appoint a committee headed by Sri Boothlingam, who is stated to be an expert.

**Mr. SPEAKER :** Hon. Member must conclude.

**Sri D.M.SIDDIAH :** Some more time may given to sri DevarajUrs.

**Mr. SPEAKER :** Hon.Member must conclude.

**Sri D.M.SIDDIAH :** Some more time may be given to Sri Devaraj urs.

**Mr.SPEAKER:** There is limitation of time.

**Sri DEVARAJ URS:** Since there is no time, I will sit down.

**ಶ್ರೀ ಎಂ.ಜಿ. ಬಣಕಾರ್:** ಮಾನ್ಯ ಅಧ್ಯಕ್ಷರೇ, ಈ ದಿವಸ ಅರ್ಥ ಮಂತ್ರಿಗಳು ಮಂಡಿಸಿರುವ ಸೇಲ್ಸ್ ಟ್ಯಾಕ್ಸ್ ಅಬ್‌ಕಾರಿ ಮತ್ತು ಇತರೇ ತೇಪೆಯ ಎಲ್ಲಾ ಡಿಮ್ಯಾಂಡ್‌ಗಳನ್ನು ವಿರೋಧಿಸುತ್ತಾ ಸೇಲ್ಸ್ ಟ್ಯಾಕ್ಸ್ ವಿಷಯದಲ್ಲಿ ಒಂದು ಮಾತನ್ನು ನಾನು ಸ್ಪಷ್ಟಿಕರಣ ಮಾಡುವುದಕ್ಕೆ ಇಚ್ಛೆ ಪಡುತ್ತೇನೆ. ಕಳೆದ ಅಧಿವೇಶನದಲ್ಲಿ ಬ್ಯಾಡಗಿ ರೆಗ್ಯುಲೆಟೆಡ್ ಮಾರ್ಕೆಟ್‌ನಲ್ಲಿ ಸೇಲ್ಸ್ ಟ್ಯಾಕ್ಸ್‌ನ್ನು ಮೆಣಸಿನಕಾಯಿಯ ಮೇಲೆ ಕೊಡತಕ್ಕವರು ಯಾರು ಎನ್ನುವ ಬಗ್ಗೆ ಬಹು ದೊಡ್ಡ ಜಿಜ್ಞಾಸೆ ಬಂದು

ಸುಮಾರು 15 ದಿವಸಗಳವರೆಗೆ ಮಾರ್ಕೆಟ್ ಬಂದ್ ಆಗಿತ್ತು. ಈ ವಿಚಾರವನ್ನು ನಾನು ಮಾನ್ಯ ಅರ್ಥ ಮಂತ್ರಿಗಳವರಿಗೆ ಬರವಣಿಗೆಯ ಮೂಲಕ ತಿಳಿಸಿದ್ದೆ. ಆದರೆ ಅವರಿಂದ ಇದುವರೆಗೆ ನನಗೆ ಉತ್ತರ ಬಾರದಿರುವುದನ್ನು ನೋಡಿ ನನಗೆ ಕಳವಳವಾಗಿದೆ. ಮೊದಲನೆಯದಾಗಿ ಪೂಜ್ಯ ಗಾಂಧೀಜಿ ಅವರು ಉಪ್ಪಿನ ಮೇಲೆ ತೆರಿಗೆ ವಿಧಿಸಬಾರದು ಏನೋ ಒಂದು ಅಂದೋಲನ ನಡೆಸಿದರೋ ಅದರಲ್ಲಿ ಸಾಮಾನ್ಯವಾಗಿ ಅವಶ್ಯಕ ವಸ್ತುವಿನ ಮೇಲೆ ಕರಭಾರ ಇರಬಾರದು ಎನ್ನವ ಭಾವವೈಶಾಲ್ಯ ಅಡಕವಾಗಿತ್ತು. ಅದೇ ರೀತಿ ಮೆಣಸಿನ ಕಾಯಿಯೂ ಬಡವರ ಆಹಾರವಾಗಿದೆ. ಅದರ ಮೇಲೆ ತೆರಿಗೆ ಇರಬಾರದು. ಮಹಾರಾಷ್ಟ್ರ ರಾಜ್ಯದಲ್ಲಿಯೂ ಕೂಡ ನನಗೆ ತಿಳಿದ ಮಟ್ಟಿಗೆ ಮೆಣಸಿನ ಕಾಯಿಯ ಮೇಲೆ ಸೇಲ್ಸ್ ಟ್ಯಾಕ್ಸ್ ಇಲ್ಲ. ಆದ್ದರಿಂದ ಮೈಸೂರು ರಾಜ್ಯದಲ್ಲಿಯೂ ಕೂಡ ಮೆಣಸಿನ ಕಾಯಿಯ ಮೇಲಿರುವ ತೆರಿಗೆಯನ್ನು ತೆಗೆಯಬೇಕು ಎಂದು ಮೊದಲನೆಯದಾಗಿ ಮಾನ್ಯ ಮುಖ್ಯಮಂತ್ರಿಗಳಲ್ಲಿ ಸೂಚನೆ ಮಾಡುತ್ತೇನೆ. ಈ ಮೆಣಸಿನ ಕಾಯಿ ಬ್ಯಾಡಗಿ ಮಾರ್ಕೆಟ್‌ನಲ್ಲಿ ಎಷ್ಟು ಮಾರಾಟವಾಗುತ್ತಿದೆ ಎಂದರೆ ಗುಂಟೂರು ಮತ್ತು ಪಾಟ್ನಾಗಳನ್ನು ಬಿಟ್ಟರೆ ಬ್ಯಾಡಗಿಯೇ ಮೂರನೇ ಅತೀ ದೊಡ್ಡ ಮೆಣಸಿನಕಾಯಿ ಮಾರಾಟ ಮಾಡುವ ಮಾರ್ಕೆರ್ಟ್ ಆಗಿದೆ. ಕಳೆದ 10 ವರ್ಷಗಳಲ್ಲಿ ಸರಾಸರಿ ಲೆಕ್ಕ ತೆಗೆದುಕೊಂಡರೆ ಪ್ರತಿವರ್ಷ ಒಂದು ಕೋಟಿ ರೂಪಾಯಿಗಳ ಮೇಲೆ ಟರ್ನ್-ಓವರ್ ಆಗುತ್ತಿದೆ. ಕಳೆದ ಸಾರಿ ಈ ಮೆಣಸಿನ ಕಾಯಿಯ ಮೇಲೆ ಸೇಲ್ಸ್ ಟ್ಯಾಕ್ಸ್ ಕೊಡುವವರು ಯಾರು ಎಂಬ ಜಿಜ್ಞಾಸೆ ಬಂತು. ರೈತ ಹೇಳಿದ. ಕಾನೂನು ಬದ್ಧವಾಗಿ ನಾನು ಸೇಲ್ ಟ್ಯಾಕ್ಸ್‌ನಿಂದ ಎಕ್ಸಂಪ್ಟ್ ಆಗಿದ್ದೇನೆ ಎಂದು, ದಲ್ಲಾಳಿ ಹೇಳಿದ, ನಾನು ಖರೀದಿ ಮಾಡುವವನೂ ಅಲ್ಲ, ಕೊಡುವವನೂ ಅಲ್ಲ, ನಾನು ಖರೀದಿದಾರರನ ಏಜೆಂಟ್ ಆಗಿರುವುದರಿಂದ ಸೇಲ್‌ಟ್ಯಾಕ್ಸ್ ನನಗೆ ಅನ್ವಯವಾಗುದಿಲ್ಲ ಎಂದು.ಖರೀದಿದಾರ ಹೇಳಿದ, ಖರೀದಿ ಮಾಡತಕ್ಕವನು ಸೇಲ್ ಪಾಯಿಂಟ್‌ನಲ್ಲಿ ಇರುವುದರಿಂದ ನನಗೆ ಸೇಲ್ ಟ್ಯಾಕ್ಸ್ ಅನ್ವಯಿಸುವುದಿಲ್ಲ ಎಂದು. ಈ ರೀತಿಯಾದರೆ ಸೇಲ್ ಟ್ಯಾಕ್ಸ್ ಕೊಟತಕ್ಕವರು ಯಾರು ಎಂಬುದನ್ನು ಸ್ಪಷ್ಟಪಡಿಸಬೇಕು. ಇತ್ತೀಚೆಗೆ ಅಧಿಕಾರಿಗಳು ಹೇಳಿದರು, ಯಾರು ಇದನ್ನು ಬೆಳೆಯುತ್ತಾರೋ ಅಂತಹವರು ತಾವು ರೈತರು ಎಂದು ಸ್ಥಿರಪಡಿಸಿದರೆ ಅವರು ಸೇಲ್ಸ್ ಟ್ಯಾಕ್ಸ್ ಕೊಡಬೇಕಾಗಿಲ್ಲ ಆ ರೀತಿ ಸ್ಥಿರಪಡಿಸದಿದ್ದರೆ ಕೊಡಬೇಕಾಗುತ್ತದೆ ಎಂದು. ರೈತನಿಂದ ಮೆಣಸಿನಕಾಯಿಯನ್ನು ದಲ್ಲಾಳಿ ತೆಗೆದುಕೊಂಡು ಹೋಗುವುದಕ್ಕಿಂತ ಮುಂಚೆ ಇಂತಹ ಹೊಲದಲ್ಲಿ ಈ ಮೆಣಸಿನಕಾಯಿಯು ಬೆಳೆದಿದೆ ಎಂದು ಒಂದು ಎಕ್ಸ್‌ಟ್ರ್ಯಾಕ್ಟನ್ನು ಸಂಬಂಧಪಟ್ಟ ರೈತನು ಅಧಿಕಾರಿಗಳ ಮುಂದೆ ತೋರಿಸಬೇಕು. ಆ ಮೇಲೆ ದಳ್ಳಾಳಿ ಚಿಲ್ಲಿ

ಮಾರ್ಕೆಟ್‌ನಲ್ಲಿ ಮೂರು ಪರ್ಸೆಂಟ್ ಸೇಲ್ಸ್ ಟ್ಯಾಕ್ಸ್ ಕೊಡಬೇಕು. ಈಗ ರೈತನು 30 ರೂಪಾಯಿಗಳನ್ನು ತಲಾಟಿಗೆ ಕೊಟ್ಟರೂ ಕೂಡ ಅವನು ಒಂದು ಎಕ್ಸ್‌ಟ್ರ್ಯಾಕ್ಟ್‌ನ್ನು ಕೊಡುವುದಿಲ್ಲ. ಅಗಸರ ನಾಯಿ ಹಳ್ಳ ಕಾಣಲಿಲ್ಲ, ಮನೆ ಕಾಣಲಿಲ್ಲ ಎನ್ನುವ ರೀತಿಯಲ್ಲಿ, ದಲ್ಲಾಳಿ ಕೈಲ್ಲಿ ಉರಿಯಬೇಕೋ, ತಲಾಟಿ ಕೈಯಲ್ಲಿ ಸಾಯಬೇಕೋ ಎನ್ನುವ ಸ್ಥಿತಿ ರೈತನಿಗೆ ಬಂದೊದಗಿದೆ. ವಿರೋಧ ಪಕ್ಷದವರು ರಚನಾತ್ಮಕ ಸಲಹೆಗಳನ್ನು ಕೊಟ್ಟರೂ ಅದನ್ನು ಆಡಳಿತ ಪಕ್ಷದವರು ಅಂಗೀಕಾರ ಮಾಡುವುದಿಲ್ಲ. ಸಾಮಾನ್ಯವಾಗಿ ಲೆಕ್ಕ ಪತ್ರಗಳ ಹೊಂದಾಣಿಕೆಗೆ ಹೆಚ್ಚು ವೇಳೆಯನ್ನು ಕಳೆಯುತ್ತಾರೆ. ಇದು ಕಬ್ಬಿಣ ಅಂಗಡಿಗೆ ನೊಣ ಹೋದರೆ ಏನು ಪ್ರಯೋಜನವಾಗುತ್ತದೆಯೋ ಅದಾಗುತ್ತದೆ. ಎನ್ನುವ ಭಾವನೆ ಇದೆ. ಮಾನ್ಯ ಸಚಿವರು ಕರ್ತವ್ಯ ದೃಷ್ಟಿಯಿಂದ ಮೆಣಸಿನ ಕಾಯಿ ಮೇಲಿನ ತೆರಿಗೆಯನ್ನು ತೆಗೆದುಹಾಕಬೇಕು. ಇಲ್ಲದಿದ್ದರೆ ಸೇಲ್ ಪಾಯಿಂಟ್ ತೆಗೆದು ಪರ್ಚೇಸ್ ಪಾಯಿಂಟಿಗೆ ಬದಲಾಯಿಸಬೇಕು ಮತ್ತು ಮಲ್ಟಿ ಪಾಯಿಂಟಿಗೆ ಬದಲಾಗಿ ಸಿಂಗಲ್ ಪಾಯಿಂಟಿಗೆ ಬದಲಾಯಿಸಬೇಕು. ಈ ರೀತಿ ಮಾಡಿದರೆ ರೈತ ತಕ್ಕ ಮಟ್ಟಿಗೆ ಬದುಕಬಹುದೋ ಏನೋ ಎನ್ನುವ ಸಲಹೆಯನ್ನು ಮಾನ್ಯ ಸಚಿವರಿಗೆ ಅಧ್ಯಕ್ಷರ ಮೂಲಕ ಕೊಡಬಯಸುತ್ತೇನೆ.

ಸತ್ಯಾಗ್ರಹ ಮಾಡಿ, ಯಾರು ಸೇಲ್ಸ್ ಟ್ಯಾಕ್ಸ್ ಕೊಡಬೇಕು ಎಂಬ ಸಂದರ್ಭ ಬಂದಾಗ ಎಲ್ಲ ವ್ಯವಹಾರವೂ ಬಂದ್ ಆದಾಗ ಸುಮಾರು ಒಂದೂವರೆ ಕೋಟಿ ರೂಪಾಯಿ ಟರ್ನ್ ಓವರ್ ಆಗ ಬೇಕಾಗಿತ್ತು ಬಂದ್‌ನ ಕಾರಣದಿಂದಾಗಿ ಸುಮಾರು 40 ಸಾವಿರ ಕ್ವಿಂಟಾಲ್ ಮೆಣಸಿನಕಾಯಿ ಮುಂಬೈನಲ್ಲಿ ಮಾರಾಟವಾಯಿತು. ಸರ್ಕಾರಕ್ಕೆ ಬರಬೇಕಾದ ಮೂರು ಲಕ್ಷ ರೂಪಾಯಿ ಒಂದೇ ವರ್ಷದಲ್ಲಿ ಅದೂ ತಮ್ಮಿಂದ ನಷ್ಟವಾಯಿತು. ಇಂಥ ಅನೇಕ ಉದಾಹರಣೆಗಳನ್ನು ಒಳಗೊಂಡಿರತಕ್ಕ ವಿವಾದಾತ್ಮಕವಾದ ಈ ವಿಷಯದಲ್ಲಿ ನನ್ನ ಅನೇಕ ಮಿತ್ರರು ಮಾತನಾಡುವವರಿದ್ದಾರೆ.

ಅಬ್ಕಾರಿ ಖಾತೆಯ ಬಗ್ಗೆ ತೆಗೆದುಕೊಂಡರೆ, ತಾವು ಅಧಿಕಾರಕ್ಕೆ ಬಂದ ಮೇಲೆ ತಮ್ಮ ಅದ್ಭುತ ಹಸ್ತದಿಂದ ಹೆಂಡದ ಮಾರಾಟ ಪ್ರಾರಂಭವಾಯಿತು. ಸಾಯಿಬಾಬಾನ ಕೆಲವು ಭಕ್ತರು ಉಂಗುರದಲ್ಲಿ ಅವರ ಪೋಟೋ ಇಟ್ಟುಕೊಳ್ಳುತ್ತಾರೆ ಕುಡಿಯುವ ಭಕ್ತರು ತಮ್ಮ ಪೋಟೋ ಇರುವ ಉಂಗುರವನ್ನು ಇಟ್ಟುಕೊಳ್ಳಬೇಕು. ಅಂತಹ ಜನಪ್ರಿಯರು ತಾವು ಹೆಂಡತಿಯ ಮಾಂಗಲ್ಯವನ್ನು ಮಾರಾಟ ಮಾಡಿ ಕುಡಿದು ಮತ್ತನಾಗಿ, ಮದಾಂಧನಾಗಿ, ಮನೆಯನ್ನು ದುಃಖದ ದಳ್ಳುರಿಗೆ ನೂಕತಕ್ಕ ಬಡವನ ದಾರುಣ ಚಿತ್ರವನ್ನು ಸ್ವಲ್ಪ ಹಳ್ಳಿ ಕಡೆ ಬಂದಾಗ ಕಾಣಬಹುದು. ದೊಡ್ಡ

ಊರುಗಳಲ್ಲಿ ಬ್ರಾಂದಿ ಅಥವಾ ದೊಡ್ಡ ದೊಡ್ಡ ಮಟ್ಟದ ಪೇಯಗಳನ್ನು ಕುಡಿದು, ದೊಡ್ಡ ಅಂತಸ್ತು ಇರುವುದರಿಂದ ಬೀದಿಯಲ್ಲಿ ಬೀಳುವುದಿಲ್ಲ. ಸೋಫ ಮೇಲೆ ಬೀಳಬಹುದು, ಅದು ಜನಗಳಿಗೆ ಕಾಣುವುದಿಲ್ಲ. ಹಳ್ಳಿಗಳ ಕಡೆ ಕುಡಿತದ ದುಷ್ಪರಿಣಾಮವೇನಾಗಿದೆ ಎಂದರೆ, ಬೇಸಿಗೆ ಕಾಲದಲ್ಲಿ ಮನೆಯ ಮುಂದೆ ಅಂಗಳದಲ್ಲಿ ಮಲಗುವ ಜನ ತಿಗಣೆ ಕಡಿಯಲಿ,ಸೆಖೆ ಇರಲಿ, ಯಾವುದೇ ರೀತಿ ತೊಂದರೆ ಇರಲಿ ಭದ್ರವಾಗಿ ಕದ ಹಾಕಿಕೊಂಡು ಒಳಗೆ ಮಲಗತಕ್ಕ ಪರಿಸ್ಥಿತಿ ಬಂದಿದೆ. ಕುಡುಕರ ತೊಂದರೆ, ಹಾವಳಿ ಆ ರೀತಿ ಇದೆ. ಅಬ್ಕಾರಿ ಬಾಬ್ತಿನಲ್ಲಿ ಉಳಿತಾಯವಾಗುತ್ತದೆಯೇ ಇಲ್ಲವೇ,ಸಣ್ಣ ಕಂಟ್ರಾಕ್ಟರಿಗೆ ಕೊಡುತ್ತೀರಿ ಎನ್ನುವ ವಿಷಯಗಳ ಚರ್ಚೆಗೆ ನಾನು ಹೋಗುವುದಿಲ್ಲ. ಈ ಕರಾಳ ಶಾಸನವನ್ನು ನಾವು ಒಪ್ಪುತ್ತಿಲ್ಲ. ಕಪ್ಪು ದಿನ, ಕರಾಳ ದಿನ, ಪಾಪದ ಕೃತ್ಯದಲ್ಲಿ ನಾವು ಭಾಗವಹಿಸುವುದಿಲ್ಲ ಎಂದು ನಮ್ಮ ನಾಯಕರು ಹಿಂದೆ ಹೇಳಿದ್ದಾರೆ. ಅದೇ ರೀತಿ ನಾನು ಹೇಳುತ್ತೇನೆ. ವರನನ್ನೇ ಒಪ್ಪುವುದಿಲ್ಲ ಎಂದ ಮೇಲೆ ವರೋಪಚಾರದ ಪ್ರಶ್ನೆ ಎಲ್ಲಿ ಬರುತ್ತದೆ? ಸರ್ಕಾರ ಇಷ್ಟೊಂದು ಅನೀತಿ ಮಟ್ಟಕ್ಕೆ ಇಳಿದು, ಹಣವನ್ನು ಗಳಿಸುವ ಮಾರ್ಗವನ್ನು ಹಿಡಿಯಬಾರದಾಗಿತ್ತು. ಕೇವಲ ಭೂ ಕಂದಾಯವನ್ನು ತೆಗೆದು ಬಿಟ್ಟರೆ ಅದರಿಂದ ಬರುವ ನಾಲ್ಕು ಕೋಟಿ ವರಮಾನ ಕಡಿಮೆಯಾಗಿ ದೇಶ ಎಲ್ಲಿ ಕಳಚಿಬಿಳುತ್ತದೆಯೋ ಎನ್ನುವಷ್ಟು ನಷ್ಟವಾಗುತ್ತದೆ., ಅದನ್ನು ತುಂಬುವುದಕ್ಕೆ ಹೆಂಡ ಮಾರಾಟ ಮಾಡುತ್ತೇವೆ ಎಂದು ಆಶ್ವಾಸನೆ ಕೊಟ್ಟಿದ್ದಾರೆ. ಅನೇಕ ಕಡೆ ಹೇಳಿದ್ದಾರೆ. ಕಂದಾಯದ ಹೊರೆ ಹೋಗಲಿಲ್ಲ. ಕುಡಿತದ ಹೊರೆ ಹೆಚ್ಚಾಯಿತ್ತು ಕುಡಿತಕ್ಕೆ ಅವಕಾಶ ಕೊಟ್ಟಿದ್ದರಿಂದ ಆಗಿರುವ ಉಪಕಾರವೆಂದರೆ ಎಲ್ಲ ಚುನಾವಣೆಗಳಲ್ಲಿ, ತಾಲ್ಲೂಕು ಬೋರ್ಡ್ ಚುನಾವಣೆಯನ್ನು ಒಂದು ನಿದರ್ಶನವಾಗಿ ತೆಗೆದುಕೊಂಡರೆ ಕಳೆದ ಚುನಾವಣೆಗಿಂತ ಈ ಸಲ ತಾಲ್ಲೂಕು ಬೋರ್ಡ್ ಚುನಾವಣೆಗಳಲ್ಲಿ ಕಾಂಗ್ರೆಸ್ ಪಕ್ಷದವರು ಹೆಚ್ಚಿನ ಸಂಖ್ಯೆಯಲ್ಲಿ ಆರಿಸಿ ಬರುವುದಕ್ಕೆ ತಾವು ದಯಪಾಲಿಸಿರುವ ಸುರಪಾನ ಬಹಳ ಪ್ರಾಮುಖ್ಯವಾದ ಕೆಲಸವನ್ನು ಮಾಡಿದೆ. ಮುಂದಿನ ಮಹಾ ಚುನಾವಣೆಗಳಲ್ಲಿ ತಾವು ಅಧಿಕಾರದಲ್ಲಿ ಇದ್ದರೆ ಬಾಟಲಿ ಪ್ರಭಾವ ಹೆಚ್ಚಾಗಬಹುದೋ ಏನೋ, ಪೂಜ್ಯ ಪಿತಾಮಹ ಗಾಂಧೀಜಿಯವರ ಹೆಸರನ್ನು ಹೇಳಿ, ಅವರ ನೀತಿಗೆ ವಿರುದ್ಧವಾಗಿರುವ ಕೆಲಸವನ್ನು ಮಾಡುತ್ತಿದ್ದಿರಿ. ಅವರು ಹೇಳುತ್ತಿದ್ದರು, ನನ್ನ ಕೈಯಲ್ಲಿ ಈ ದೇಶದ ಅಧಿಕಾರವನ್ನು ಕೊಟ್ಟರೆ ನಾನು ಮಾಡುವ ಮೊದಲನೇ ಕೆಲಸವೆಂದರೆ ಹೆಂಡದ ಅಂಗಡಿಗಳನ್ನು ಬಂದ್ ಮಾಡಿಸುವುದು ಎಂದಿದ್ದರು. ಅಂಥ ಗಾಂಧೀಜಿಯವರ ಹೆಸರನ್ನು ಹೇಳಿ, ರಾಜ್ಯವನ್ನು ಆಳತಕ್ಕ ಪಕ್ಷದವರಾದ ತಾವು ಅವರ ಮೂಲ ತತ್ವಗಳಿಗೆ ತಿಲಾಂಜಲಿಯನ್ನಿತ್ತರೆ ಅವರ ಆತ್ಮಕ್ಕೆ ಶಾಂತಿ ಎಲ್ಲಿಂದ

ಬಂದೀತು. ಎಂದು ಕೇಳಬಯಸುತ್ತೇನೆ. ಅವರು ತತ್ವಕ್ಕಾಗಿ ದುಡಿದು ಹೋರಾಟ ಮಾಡಿದವರು.

ಹೊನ್ನಿಗಾಗಿ ಸತ್ತವರು ಕೋಟಿ

ಹೆಣ್ಣಿಗಾಗಿ ಸತ್ತವರು ಕೋಟಿ

ನಿನಗಾಗಿ ಸತ್ತವರೊಬ್ಬರ ನಾ ಕಾಣೆ.

ಅವರು ಇದ್ದದ್ದು ತತ್ವಕ್ಕೆ, ಹಣ ಗಳಿಸುವುದಕ್ಕಲ್ಲ. ಗಾಂಧೀಜಿಯವರ ಹೆಸರನ್ನು ಹೇಳದೆ ಇದ್ದರೆ ಉತ್ತಮವೇನೋ ನಾನು ಸಲಹೆ ಮಾಡುತ್ತೇನೆ. ಅದರ ಜೊತೆಗೆ ಹೆಂಡದ ಮಾರಾಟವನ್ನು ಖುಲ್ಲಾ ಮಾಡಿ ಅದರಿಂದ ರಾಜ್ಯಕ್ಕೆ ಹಣ ಬರುತ್ತದೆ ಎಂದರೆ ಅದು ಒಪ್ಪುವುದಕ್ಕೆ ಅಸಾಧ್ಯವಾಗಿರತಕ್ಕ ಮಾತು. ಇದರ ಪರಿಣಾವೇನಾಗಿದೆ ಎನ್ನುವುದರ ಬಗ್ಗೆ ನಾನು ಒಂದು ಕವಿತೆಯನ್ನು ಬರೆದಿದ್ದೇನೆ. ಅದನ್ನು ತಮ್ಮ ಗಮನಕ್ಕೆ ತರುವುದಕ್ಕೆ ಇಚ್ಛೆ ಪಡುತ್ತೇನೆ.

ಹೆಂಡದಂಗಡಿಯಾಯಿತೇ!
ನಾವು ಗಾಂಧಿಯ ಮಕ್ಕಳೆನ್ನುವ
ಹಕ್ಕು ನಮಗೀಗೆಲ್ಲಿದೆ!
ಹೆಣ್ಣು ಕಂಡರೆ ಸುತ್ತು ಸುಳಿಯುವ
ಹದ್ದಿನಾಗತಿ ಸಂದಿದೆ!
ಹಣಕ್ಕೆ ಹೆಣ್ಣನ್ನು ಮಾರಿ ಬದುಕುವ
ಗಂಡನೊಲು ಸರ್ಕಾರವು
ಪಿತನ ತತ್ವದ ಪತನ ಮಾಡುತ್ತಾ
ಪಡೆಯುತಿಹ ಆದಾಯವು
ದುಡಿದು ದಣಿಯುವ ಬಡವನೊಡಲನು
ಹೀರಿ ಬದುಕುವ ಸಾಧನ
ದೀನ ದಲಿತರ ಮುರುಕು ಮನೆಯಲಿ
ಸುರೆಯ ಸೇವಿಸಿ ಕ್ರೋಧನ
ಎಲ್ಲಿ ಹೋಯಿತು ನಾಡ ಸಂಸ್ಕೃತಿ
ಹೆಂಡದಂಗಡಿಯಾಯಿತೇ?

ಸಮತೆ ಮಮತೆಯ ವೀರ ಚರಿತ್ರೆಯ
ನೀತಿ ಸಾವನು ಕಂಡಿತೇ?
ಪ್ರಜರ ಸುಲಿಗೆಯ ಸಾವು ನೋವಿನ
ಶಾಪ ಮಂತ್ರಿಗೆ ತಟ್ಟದೆ?
ಕಡುಕರಾಳಿಗೆ ಮುಗಿಯಲೆನ್ನುವ
ಕೂಗು ಗಾಂಧಿಗೆ ಮುಟ್ಟದೆ?

ಇವುತ್ತೊ ತಮಗೆ ಬಹುಮತವಿದೆ ಎಂದು ತಿಳಿದುಕೊಂಡಿರಬಹುದು. ಬಹುಮತವೇನೋ ಇದೆ.ಇಷ್ಟು ಬೇಡಿಕೆಗಳನ್ನು ಸಭೆಯ ಮುಂದೆ ಒಂದೇ ದಿನ ಮಂಡಿಸಿರುವುದರ ಧೈರ್ಯವನ್ನು ನೋಡಿದರೆ ನನಗೆ ಆಶ್ಚರ್ಯವಾಗುತ್ತದೆ. ಈವೊತ್ತು ಬಜೆಟ್ಟಿನ ಅರ್ಧಬಾಗದ ಹಣವನ್ನು ಸಪ್ಲಿಮೆಂಟರಿ ಡಿಮ್ಯಾಂಡ್ ಮೂಲಕ ಕೇಳಿದ್ದೀರಿ ಎರಡು ಮೂರು ದಿವಸಗಳಲ್ಲಿ ಮಾರ್ಚ ತಿಂಗಳು ಮುಗಿಯುತ್ತದೆ. ಆ ಅವಧಿಯಲ್ಲಿ ಇಷ್ಟು ಹಣವನ್ನು ಖರ್ಚು ಮಾಡಲು ಸಾಧ್ಯವೇ? ನಿಮಗೆ ಅರ್ಧಗಂಟೆ ಸಿಕ್ಕಿದರೂ ಸಾಕು ಎಂದು ಕಾಣುತ್ತದೆ. ಬಹುಮತಕ್ಕೆ ಬೇಕಾಗುವಷ್ಟು ಜನ, ಕೈ ಎತ್ತುವುದಕ್ಕೆ ಜನ ನಿಮ್ಮ ಕಡೆ ಇರುವುದರಿಂದ ನೀವು ಈಮನೆಯಲ್ಲಿ ಯಾವ ವೇಳೆಗೆ ಬೇಕಾದರೂ ಕೇಳಬಹುದು. ಅದನ್ನು ನಾನು ಒಪ್ಪಿಕೊಳ್ಳುತ್ತೇನೆ. ಆದರೆ ತಮ್ಮ ಅಗಾಧವಾದ ಶಕ್ತಿಯ ಪ್ರಯೋಗವನ್ನು ಈ ರಾಕ್ಷಸರಂತೆ ಶಕ್ತಿಯನ್ನು ಗಳಿಸಿಕೊಳ್ಳಿ, ಆದರೆ ರಾಕ್ಷಸನಂತೆ ಕೆಲಸಗಳನ್ನು ಮಾಡಬೇಡಿ: ಹೆಂಡ ಮಾರಿ ಸರ್ಕಾರ ನಡೆಸಿದರೆ ನಡೆಯುತ್ತದೆಯೇ? ಎಲ್ಲಿ ನೀತಿ ಇಲ್ಲವೋ ಅಲ್ಲಿ ಶಾಂತಿ ಇಲ್ಲ. ಯಾವ ರಾಜ್ಯದಲ್ಲಿ ನೀತಿಗೆ ಆಸ್ಪದ ಕೊಡುವುದಿಲ್ಲವೋ ಅಲ್ಲಿ ಸುಖವಿಲ್ಲ, ಶಾಂತಿ ಇಲ್ಲ. ಆದುದರಿಂದ ಹೆಂಡವನ್ನು ಮಾರಿ ಹಣವನ್ನು ಗಳಿಸುವುದು ಮೂಲಭೂತ ನೀತಿಗೆ ವಿರೋಧವಾಗಿರುವುದರಿಂದ ಈ ರಾಜ್ಯ ಬಹಳ ದಿನ ಬದುಕಲಾರದು, ಬದುಕುವ ಲಕ್ಷಣಗಳಿಲ್ಲ. ಈಗಾಗಲೇ ಕೋರುಮಿನ್ ಇಂಜೆಕ್ಷನ್ ಕೊಡಬೇಕಾಗಿದೆ. ನಾವು ನಮ್ಮ ಮುಂದಿರುವ ಈ ಡಿಮ್ಯಾಂಡನ್ನು ಬಹಳ ಬಲವಾಗಿ ವಿರೋಧಿಸಿ ತಮ್ಮ ಕೈಯಲ್ಲಿ ಈ ರಾಜ್ಯ ಬಹಳ ದಿನ ಉಳಿದರೆ ಹುಟ್ಟಿದ ಮಕ್ಕಳಿಗೆ ಬಡ್ಡಿ ರೂಪದಲ್ಲಿ ಭಟ್ಟಿ ಸಾರಾಯಿ ಹಾಕತಕ್ಕ ಸಂದರ್ಭ ಬರಬಹುದೋ ಏನೋ ಇಂಥಹದಕ್ಕೆ ಅವಕಾಶ ಕೊಡಬೇಡಿ ಎಂದು ಹೇಳಿ ನನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ ಮಾತಾನಾಡುವುದಕ್ಕೆ ನನಗೆ ಎರಡು ನಿಮಿಷ ಅವಕಾಶವನ್ನು ನಿನ್ನೆಯ ದಿನ ಕೊಡದೆ ಇದ್ದರೂ ಇವೊತ್ತು ಕೊಟ್ಟಿರುವುದಕ್ಕಾಗಿ ಅವರಿಗೆ ಧನ್ಯವಾದಗಳನ್ನು ಅರ್ಪಿಸಿ ಕೊನೆಯದಾಗಿ ಒಂದು ವಿಷಯವನ್ನು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ ಸ್ವಾಮಿ..

# ಆರೋಗ್ಯ ಮತ್ತು ಶಿಕ್ಷಣ

**ಶ್ರೀ ಬಸವರಾಜ ಪಾಟೀಲ ಶೇಡಂ (ಶಿಕ್ಷಕರ ಕ್ಷೇತ್ರ) :** ಮಾನ್ಯ ಸಭಾ ಪತಿಯವರೇ ಆರೋಗ್ಯ ಇಲಾಖೆಗೆ ಸಂಭಂದಿಸಿದಂತೆ ಚರ್ಚೆ ಈ ಸದನದಲ್ಲಿ ನಿನ್ನೆಯಿಂದ ಪ್ರಾರಂಭವಾಗಿದೆ. ನಮ್ಮ ಆಡಳಿತಾತ್ಮಕ ವ್ಯವಸ್ಥೆಯಲ್ಲಿ ಆರೋಗ್ಯ ಮತ್ತು ಶಿಕ್ಷಣ ಈ ಎರಡೂ ಇಲಾಖೆಗಳು ಅತ್ಯಂತ ಮಹತ್ವ ಪೂರ್ಣ ಇಲಾಖೆಗಳಾಗಿದ್ದು ಹಾಗೂ ಮಾನವೀಯ ಸೇವೆ ಮಾಡತಕ್ಕಂತ ಇಲಾಖೆಗಳೆಂದು ಪರಗಣಿಸುತ್ತಾರೆ. ಅದಕ್ಕಾಗಿ ಸರಕಾರ ಬದ್ದ ಪ್ರಮಾಣದಲ್ಲಿ ಈ ಇಲಾಖೆಗೆ ಹಣವನ್ನು ಖರ್ಚು ಮಾಡುತ್ತದೆ. ಇಲ್ಲಿ ರಿಟರ್ನ ಫೈನಾನ್ಸಿಯಲ್ ಕಡಿಮೆ ಇರುತ್ತದೆ. ಆದರೂ ಸಹ ಮಾನವೀಯತೆ ಅತ್ಯಂತ ಅವಶ್ಯಕವಾದ ಕರ್ತವ್ಯದ ದೃಷ್ಠಿಯಿಂದ ಇದರ ಮೇಲೆ ಬಹಳ ದೊಡ್ಡ ಪ್ರಮಾಣದಲ್ಲಿ ಸರಕಾರ ಹಣ ಖರ್ಚು ಮಾಡುತ್ತಿದೆ. ಆ ದೃಷ್ಠಿಯಿಂದ ಮೊಟ್ಟ ಮೊದಲನೇಯದಾಗಿದೆ. ನನಗನಿಸುತ್ತಿರುವುದೇನೆಂದರೆ ಬಹುಷಃ ಈ ಇಲಾಖೆಯಲ್ಲಿ ಕೆಲಸ ಮಾಡುವ ವೈಖರಿಯಿಂದಿಡಿದು ಪ್ರತಿಯೋಬ್ಬರಿಗೆ ಯಾವ ಮಾನವೀಯ ಕಾರ್ಯಕ್ಕಾಗಿ ನಾವು ಇಲ್ಲಿ ಇದ್ದೇವೆ ಎನ್ನುವುದೇ ಕ್ರಮೇಣ ನನಸಿ ಹೊಗುತ್ತಿದೆಯೆನೋ ಎಂಬ ಭಾವನೆ ನನ್ನ ಮನಸ್ಸಿನಲ್ಲಿ ಬರುತ್ತಿದೆ. ಕಳೆದ ನಾಲ್ಕು ವರ್ಷಗಳಿಂದ ನಮ್ಮ ದೇಶದಿಂದ ಅಮೇರಿಕಾ ದೇಶಕ್ಕೆ ತುಂಬಾ ವೈದ್ಯರುಗಳು ಹೋಗುತ್ತಿದ್ದಾರೆ. ಅಮೇರಿಕಾದ ಒಂದು ಪ್ರಸಿದ್ದ ಆಸ್ಪತ್ರೆಯಲ್ಲಿ 3000 ಭಾರತೀಯ ವೈದ್ಯರುಗಳು ಕೆಲಸ ಮಾಡುತ್ತಾರೆ. ನಮ್ಮ ದೇಶದವರೆಲ್ಲರೂ ಅಲ್ಲಿಗೆ ಹೋಗಿ ಅವರಿಂದ ಶೂಶ್ರೂಷೆ ಮಾಡಿಸಿಕೊಳ್ಳುತ್ತಾರೆ. ಇದಕ್ಕೆ ಕಾರಣವೇನು? ಆದರೆ ಇತ್ತೀಚೆಗೆ ಅಮೇರಿಕಾ ಒಳಗೊಂಡಂತೆ ಬೇರೆ ಬೇರೆ ದೇಶಗಳರವರು ವೈದ್ಯಕೀಯಕ್ಕೆ ಸಂಭಂದಿಸಿದಂತೆ ನಮ್ಮ ದೇಶಕ್ಕೆ ಏಕೆ ಕಳುಹಿಸುತ್ತಿದ್ದಾರೆಂದರೆ ಅಮೇರಿಕಾದ ನಾಲ್ಕು ವರ್ಷಗಳ ಇಂದಿನ ಲೆಕ್ಕದ ಪ್ರಕಾರ ಆ ದೇಶದಲ್ಲಿ ಒಬ್ಬ ವೈದ್ಯರನ್ನು ತಯಾರಿಸಬೇದರೆ ಸುಮಾರು 84 ಲಕ್ಷ ರೂಪಾಯಿಗಳಷ್ಟು ಖರ್ಚಾಗುತ್ತಿತ್ತು. ಈ ಅವರಿಗೆ ಏನನಿಸುತ್ತದೆ ಎಂದರೆ ಭಾರತದಲ್ಲಿ ರೆಡಿಮೇಡ್ ಆಗಿರುವ ಪ್ರಮಾಣಿಕರಾಗಿರುವ ವೈದ್ಯರು ಬಡ್ಡಿಗೆ ವಾರ್ಷಿಕ ಸಂಬಳದಲ್ಲಿ ಸಿಗುತ್ತಾರೆ. ನಾವ್ಯಾಕೆ ಇಷ್ಟು ದೊಡ್ಡ ಮೊತ್ತದ ಬಂಡವಾಳ ಹೂಡಿ ಆಸ್ಪತ್ರೆ ತೆರೆಯಬೇಕು? ಎಂದು ಇವತ್ತೂ ದೊಡ್ಡ ಪ್ರಮಾಣದಲ್ಲಿ ಭಾರತೀಯ ವೈದ್ಯರುಗಳು ಅಮೇರಿಕಾಕ್ಕೆ ಹೋಗಲಿ,ಇಂಗ್ಲೆಂಡಿಗೆ ಹೋಗಲಿ, ಬೇರೆ ಬೇರೆ ದೇಶಗಳಿಗೆ ಹೋಗಲಿ, ಇದ್ದಂಥ ಪ್ರತಿಭಾವಂತ ವೈದ್ಯರುಗಳೆಲ್ಲರೂ ಹೊರಗಡೆ ಹೋಗುತ್ತಿದ್ದಾರೆ ದುರ್ದೈವದಿಂದ ಇಷ್ಟು ದೊಡ್ಡ ಪ್ರಮಾಣದಲ್ಲಿ ಈ ರಾಜ್ಯದ ಜನತೆಯಿಂದ ಸಂಗ್ರಹಿಸಲಾದ ಹಣವನ್ನು ವೈದ್ಯರನ್ನು, ನರ್ಸಗಳನ್ನು ಹಾಗೂ ವೈದ್ಯಕೀಯ

ಇಲಾಖೆಯಲ್ಲಿ ಸೇವೆ ಮಾಡತಕ್ಕಂತವರಿಗೆ ಹಾಗೂ ವಿವಿಧ ರೀತಿ ತಾಂತ್ರಿಕ ವಿದ್ಯಾರ್ಹತೆ ಇರುವವರಿಗೆ ಖರ್ಚು ಮಾಡುತ್ತಾರೆ ಎನ್ನುವ ಕನಿಷ್ಟ ಪರಿಜ್ಞಾನ ಮಾನವೀಯ ದೃಷ್ಟಿಕೋನ ಇಲ್ಲವೇ ಇಲ್ಲ. ಬಹಳವಾದರೆ ಕೊಟ್ಟಿರತಕ್ಕಂತ ಶುಲ್ಕ ಒಂದೆರೆಡು ಲಕ್ಷ ಮಾತನ್ನು ಹೇಳಲಿಕ್ಕೆ ಪ್ರಯತ್ನ ಮಾಡುತ್ತಿದ್ದೇನೆಂದರೆ ದಯವಿಟ್ಟೂ ನೀವು ಈ ಸಮಾಜದ ವ್ಯವಸ್ಥೆ ಏನಿದೆ ....

**ಶ್ರೀ ಎಚ್ ಕೆ ಪಾಟೀಲ್ :** ಸರ್ ಈಗ ಈ ಸದನದಲ್ಲಿ ಯಾರು ಇರುದಿಲ್ಲ ಅವರಿಗೆ ಅವಮಾನಕರವಾಗಿರತಕ್ಕ ಮಾತು ಹೇಳಿದರೆ ಅಂತವರಿಗೂ ರಕ್ಷಣೆ ಕೊಡಬೇಕಾಗಿರತಕ್ಕದ್ದು ನಿಮ್ಮ ಕೆಲಸ ಮಾನ್ಯ ನರಸಿಂಹ ಮೂರ್ತಿಯವರು ಹೇಳಿದರು ಅವರ ಮಗ ಬರ್ಡನ್ ಆಗಿದ್ದಾನೆಂದು ಅವನು ಇಲ್ಲಿ ಇಲ್ಲ ಅವನು ಅದೇ ಶಬ್ದವನ್ನು ಅಲ್ಲಿ ಹೇಳಿದರೆ ಅದು ಉಪಯೋಗವಾಗುದಿಲ್ಲ. ಆದ್ದರಿಂದ ಮಾನ್ಯ ನರಸಿಂಹ ಮೂರ್ತಿಯವರು ವಯಸ್ಸಿಗೆ ಬಂದಂತಹ ಮಗನಿಗೆ ಅವನು ಈಗಾಗಲೇ ನೋಡುತ್ತಿದ್ದಾನೆ ನಿಮ್ಮನ್ನೂ ಕಾಳಜಿ ಮಾಡುತ್ತಿದ್ದಾನೆ. ನೀವು ಇನ್ನೂ ಅವನಿಗೆ ಲಯಬಲೀಟಿ ಆಗಬಹುದು ಅವನು ನಿಮಗೆ ಹೇಗೆ ಲಯಬಲೀಟಿ ಆಗುತ್ತಾನೆ?

**SRI T.N. NARASIMHAMURTHY :** That is also another way of argument. But it is very bad case. ಮಾನ್ಯ ಸಭಾಪತಿಗಳೇ ನಾನು ಏಕೆ ಈ ಮಾತನ್ನು ಹೇಳುತ್ತಿದ್ದನೆಂದರೆ,

**ಶ್ರೀ ಮಹದೇವ ಬಣಕಾರ :** ಮಾನ್ಯ ನರಸಿಂಹ ಮೂರ್ತಿಗಳೇ ಒಂದು ನಿಮಿಷ ತಾವು ಬಾಷಣದಲ್ಲಿ ಹೇಳಿದ್ದಿರಿ ಇನ್ನೂ ಪ್ರಯತ್ನ ಮಾಡುತ್ತೀದ್ದೇನೆಂದು .....

**ಶ್ರೀ ಟಿ.ಎನ್ ನರಸಿಂಹಮೂರ್ತಿ :** ಯಾವುದಕ್ಕೆ ?

**ಶ್ರೀ ಮಹದೇವ ಬಣಕಾರ :** ಯಾವ ವಿಷಯದಲ್ಲಿ ಎಂಬುವದನ್ನು ನಿಮ್ಮನ್ನು ಕೇಳಿದೆ?

**ಶ್ರೀ ಟಿ.ಎನ್ ನರಸಿಂಹಮೂರ್ತಿ :** ಅದರಲ್ಲಿ ತಾವು ನಿಸ್ಸಂಕೋಚವಾಗಿ ಇರಬಹುದು ನಮ್ಮ ಪ್ರಯತ್ನ ಯಾವುದೂ ಇಲ್ಲ. ನಾನು ಯಾಕೆ ಈ ಮಾತನ್ನು ಹೇಳುತ್ತಿದ್ದೆನೆಂದರೆ ಒಳ್ಳೊಳ್ಳೆಯ ಜಾಗಗಳು ಅಂದರೆ ಸಮಾಜದ ವ್ಯವಸ್ಥೆ ಕುರಿತು ನಾನು ಮೂರನ್ನು ಅನೇಕ ಸಾರಿ ಹೇಳುತ್ತಿದ್ದೇನೆ ಆದರೆ ಪತ್ರಿಕೆಯವರು ಯಾರೂ ಸರಿಯಾಗಿ ಹಾಕುತ್ತಿಲ್ಲ. ಏನೆಂದರೆ ಸಮಾಜದ ವ್ಯವಸ್ಥೆ ಏನಿದೆ? ಹೆಣ್ಣು ಮಕ್ಕಳು ಹುಟ್ಟುವುದೇ ಈ ದೇಶದಲಿ ಶಾಪ ಗೌರ್ನಮೆಂಟ್ ಆಫೀಸಿಯಲ್ಸ್ ಆಗಿರುವವರು ಮಿತಿ ಮೀರಿ ಮಾಡುತಿದ್ದಾರೆ ಕೆಲವರು ಇದು ಆಗದಿದ್ದರೆ ನಾವು

ಬದುಕುವುದಕ್ಕಾಗುವುದಿಲ್ಲವೆಂದು ಆದ್ದರಿಂದ ಇವತ್ತು ಭ್ರಷ್ಠಚಾರಕ್ಕೆ ಅವಕಾಶವಾಗಿದೆ. ಚುನಾವಣೆ ವ್ಯವಸ್ಥೆ ಟಿ.ಎನ್.ಶೇಷನ್‌ರವರ ಕೆಲವು ವಿಷಯಗಳಲ್ಲಿ ಬಿಟ್ಟರೆ I always remember him (Mr. Seshan) a very competent person. ನಾನು ಇದನ್ನು ಕಾಮನ್‌ವೆಲ್ತ್ ಕಂಟ್ರೀಸನಲ್ಲಿ ಇಂಡೀಯನ್ ಡೆಲಿಗೆಟ್ ಆಗಿ ಹೋದಾಗ ದೆಹಲಿಯಲ್ಲಿ ಈ ಮಾತನ್ನು ಹೇಳಿದಾಗ ಪಾಕಿಸ್ತಾನ ಮತ್ತು ಬಾಂಗ್ಲಾದೇಶ ಡೆಲಿಗೇಟ್ಸ್ ಎಲ್ಲ ಮೆಚ್ಚಿದರು. ನಮ್ಮ ರಾಷ್ಟ್ರದಲ್ಲಿ ಚುನಾವಣಾ ವೆಚ್ಚ ಏನಿದೆ ಅದು ಕುಗ್ಗಿ ಬಿಟ್ಟಿದೆ. ಪೊಲಿಟಿಷನಲ್ಲೂ ಕೂಡ ಲಂಚ ಅಟೋಮೆಟಿಕ್ಕಾಗಿ ಕಡಿಮೆ ಆಗಿದೆ. ಈಗ ಅದಕ್ಕೆ ಬೆಲೆ ಇಲ್ಲದ ಹಾಗೆ ಆಗಿದೆ. ಇನ್ನೊಂದು ಇಲೆಕ್ಷನ್ ಮಾತ್ರ ಪಾಟೀಲರೇ ನಿಮಗೂ ಅನುಭವವಾಗಿರಬೇಕು. ಹೆಚ್ಚಿಗೆ ದುಡ್ಡು ಖರ್ಚು ಮಾಡುವುದಕ್ಕೆ ಆಗಲೇ ಇಲ್ಲ ಆದರೂ ಕೆಲವರು ಮಾಡಿಕೊಂಡಿದ್ದಾರೆ. ದುಡ್ಡು ಜಾಸ್ತಿ ಇತ್ತು. ಇನ್ನೋಂದು ಎರೆಡು ಸಾರಿ ಸೆಷನ್ ಉಳಿಯುವದು ಕಷ್ಠವಾಗುತ್ತದೆ. ಎಕೆಂದರೆ ಅವರಿಗೆ ವಯಸ್ಸಾಗಿದೆ. ಆ ಟೈಪನವರು ಬರಬೇಕು. ಪುನಃ ಅವರುಗಳನ್ನು ಕ್ಯೂರಿಫೈ ಆಗಿ ಪರಫೆಕ್ಟಾಗಿ ಯಾವುದಕ್ಕೂ ಅವಕಾಶ ಇಲ್ಲದ ಹಾಗೆ ಮಾಡಬೇಕು. ಮತ್ತು ಹಬ್ಬಗಳು ನಮಗಿರುವ ಹಬ್ಬಗಳು ಕ್ಯಾಲೆಂಡರ್ ತೆಗೆದರೆ ದಿವಸ ಹಬ್ಬಗಳು ಅದರಿಂದ ನಮ್ಮ ಬಡತನಗಳು ನಮ್ಮ ಸಮಾಜದ ವ್ಯವಸ್ಥೆಗಳು ಈ ಬ್ರಷ್ಠಾಚಾರಕ್ಕೆ ನಾನಾ ತರಹದ ದುರ್ದೈವವಾದಂತಹ ವಾತಾವರಣಕ್ಕೆ ಅವಕಾಶ ಮಾಡಿಕೊಟ್ಟಿದೆ. ಆದ್ದರಿಂದ ನಾನು ಸಮಾಜಕ್ಕೆ ಬುದ್ದಿ ಹೇಳುವುದಕ್ಕೆ ಹೋಗುವುದಿಲ್ಲ ಸಮಾಜ ಯಾವಾಗ ಸುಧಾರಣೆಯಾಗುತ್ತದೆಯೋ ಆಗಲಿ ಇಷ್ಟು ಮಾತನ್ನು ಹೇಳಿ ಈಗಗಲೇ ಒಂದು ಗಂಟೆಯಾಗಿದೆ ನಾನು ಹೆಚ್ಚು ಮಾತು ಹೇಳಲಿಕ್ಕೆ ಹೋಗುವುದಿಲ್ಲ ನಮ್ಮ ನಾಯಕರೂ ಕೂಡ ನಾನು ಮಾತನಾಡುತ್ತೇನೆಂದು ನನಗೆ ಚೀಟಿ ಕಳಿಸಿದ್ದಾರೆ. ಎರೆಡೂವರೆ ಗಂಟೆಗೆ ಮತ್ತೆ ಅದ್ಯಕ್ಷರು ವಾಪಸ್ ಬರುತ್ತಾರೆ ಪ್ರಶ್ನೋತ್ತರ ವೇಳೆ ಅದೆಲ್ಲ ಪ್ರಾರಂಭವಾಗುತ್ತದೆ. ಮಾನ್ಯ ಸುದರ್ಶನ ರವರೇ ನಿಮಗೆ ಏನಾದರೂ ಬೇಜಾರ ಆಯಿತಾ ಆದ್ದರಿಂದ ನಾನು ಅದರ ಮೇಲೆ ಮಾತನಾಡಲೇಬೇಕೆಂದು ಪ್ರಚೋದನೆ ಮಾಡಿದರು ನಮ್ಮ ನಾಯಕರು ನಾನು ಮಾತನಾಡುತ್ತೇನೆಂದು ಹೇಳಿದರು. ನಾನು ಮಾತನಾಡಲಿಕ್ಕೆ ಅವಕಾಶ ಮಾಡಿಕೊಟ್ಟಿದ್ದಾರೆ ನಾನು ಸಭಾಪತಿಯವರಿಗೆ ನಿಜವಾಗಲೂ ಕೂಡ ಅಭಿನಂದನೆಯನ್ನು ಸಲ್ಲಿಸುತ್ತೇನೆ,. ನಾನು ಮಾತನಾಡುವಾಗ ತಾವೂ ಏನೂ ಅಡ್ಡಿ ಮಾಡಲಿಲ್ಲ. ಬೆಲ್ ಕೈಗೆ ತೆಗೆದುಕೊಳ್ಳಲಿಲ್ಲ. ನೀವು ನನಗೆ ಬೆಲ್ ಅಂದರೆ ಅದನ್ನ ತಾವು ಮುಂದೆ ಇಟ್ಟುಕೊಂಡರೆ ನನಗೆ ಸ್ಪೂರ್ತಿ ಕಡಿಮೆಯಾಗುತ್ತದೆ ಆದ್ದರಿಂದ ತಾವು ನಾನು ಮಾತನಾಡುವ ಕಾಲದಲ್ಲಿ ಬಹಳ ಅಭಿಮಾನ ಪೂರಕವಾಗಿ ಸದವಕಾಶ ಮಾಡಿಕೊಟ್ಟೀದ್ದಿರಿ ನಾನು ಸುಧೀರ್ಘವಾಗಿ

ಎಲ್ಲವನ್ನೂ ಚರ್ಚೆ ಮಾಡಲಿಕ್ಕೆ ಹೋಗಲಿಲ್ಲ. ಸಮಯ ಬಂದಾಗ ಮಾತನಾಡುತ್ತೇನೆ. ಆದರೆ ಕೆಲವು ಮೂಲ ಭೂತವಾದಂತಹ ಸಿದ್ಧಾಂತಗಳು ರಾಷ್ಟ್ರೀಯ ನೀತಿಗಳು ಇವೆ. ಅದರ ಬಗ್ಗೆ ನಾನು ಪ್ರಸ್ಥಾಪ ಮಾಡಿದ್ದೇನೆ. ಮಾನ್ಯ ಮಂತ್ರಿಗಳು ಅದನ್ನು ಕೇಳಿಸಿಕೊಂಡಿದ್ದಾರೆ. ಈ ಸುದ್ದಿಯ್ನನು ಪತ್ರಿಕೆಯವರು ಸರಿಯಾಗಿ ಹಾಕಿದರೆ ಅದು ರಾಷ್ಟ್ರದ ಪ್ರಧಾನ ಮಂತ್ರಿಗಳಿಗೂ ಕೂಡ ಏಕೆಂದರೆ ನಾನು ಹೇಳಿದ್ದೇನೆ ಮೆಡಿಕಲ್ ಕಾಲೇಜುಗಳ ಬಗ್ಗೆ ಆ ಸುದ್ದಿಗಳು ಅಲ್ಲಿ ಹೋದಾಗ ಪರವಾಗಿಲ್ಲ ನಮ್ಮ ಪ್ರಧಾನ ಮಂತ್ರಿಗಳು ಕ್ರಮ ಕೈಗೊಂಡಿದ್ದಾರೆಂದು ನನಗೆ ಸಂತೋಷವಾಗುತ್ತದೆ. ಆ ಕಾರ್ಯವನ್ನು ಮಾಡಬೇಕೆಂದು ಕೇಳಿಕೊಂಡು ನಿಮಗೆ ವಂದಿಸಿ ಮಾನ್ಯ ಸದಸ್ಯರು ಸಾವಧಾನದಿಂದ ನನ್ನ ಮಾತುಗಳನ್ನು ಕೇಳಿದ್ದಾಕ್ಕಾಗಿ ತಮಗೂ ವಂದಸಿ ನನ್ನ ಮಾತನ್ನು ಮುಗಿಸುತ್ತಿದ್ದೇನೆ.  ಜೈ ಹಿಂದ್.

**ಶ್ರೀ ಮಹದೇವ ಬಣಕಾರ (ನಾಮ ನಿರ್ದೇಶನ ಹೋಂದಿದವರು) :** ಮಾನ್ಯ ಸಭಾಪತಿಯವರೇ, ಇದುವರೆಗೆ ಹಿರಿಯ ಸದಸ್ಯರು ಅನೇಕ ಸಲಹೆಗಳನ್ನು ಕೊಟ್ಟಿದ್ದಾರೆ. ಅದರ ಮೇಲೆ ನಾನು ಇಲ್ಲಿ ಬಾಷಣ ಮಾಡುವುದಿಲ್ಲ. ಕೆಲವು ಅನಿಸಿಕೆಗಳು ಮತ್ತು ಮೂಲಭೂತವಾಗಿ ಕೆಲವು ವಿಷಯಗಳನ್ನು ನಾನು ಇಲ್ಲಿ ಪ್ರಸ್ತಾಪಿಸಬೇಕಾಗಿದೆ. ಈ ಸಲಹೆಗಳ ಪೈಕಿ "ಆರತಿಗೊಬ್ಬ ಮಗಳು ಕೀರ್ತಿಗೊಬ್ಬ" ಮಗ ಅನ್ನುವುದು ಏನಿದೆ ಅದನ್ನು ಬಿಟ್ಟು "ಆಸರೆಗೊಬ್ಬ ಮಗಳು ಆಸ್ತಿಗೊಬ್ಬ ಮಗ" ಎಂದು ತಿದ್ದಿಕೊಂಡುಬಿಟ್ಟರೆ, ಬಹಳ ಒಳ್ಳೆಯದಾಗುತ್ತದೆ. ಇದು ಏನಾಗಿದೆ ನಮ್ಮ ಗೋಡೆಗಳ ಮೇಲೆಲ್ಲ, ಜನನ ನಿಯಂತ್ರಣದ ಬಗ್ಗೆ ಸಾಕಷ್ಟು ಪ್ರಚಾರಗಳು ನಡೆದಿದ್ದರೂ ಸಹ ನಾನು ಮೊನ್ನೆ ಒಂದು ಸಂದರ್ಭದಲ್ಲಿ ಹೇಳಿದ ಕೇಂದ್ರ ಸರಕಾರದವರು For every three seconds, two babies are born in India ಅನ್ನುವ ಮಾತು ಮುಂದಿಟ್ಟಿ ಪ್ರತೀ ವರ್ಷ 1 ಕೋಟಿ 40 ಲಕ್ಷ ಜನ ಹುಟ್ಟುತ್ತಾರೆ ಅದರಲ್ಲಿ 80 ಲಕ್ಷ ಜನ ಯಾವುದೇ ಕಾರಣದಿಂದ ಸಾಯುತ್ತಾರೆ. ಇನ್ನುಳಿದ ಪಾಪುಲೇಷನ್ ಏನಿದೆ That Population is equivalent to the population of Austrelia. One Austrelia will be added on to India with the original Population. ಅವರು ಯಾವತ್ತೂ ಈ ಮಾತನ್ನು ನಮಗೆ ಹೇಳುತ್ತಿದ್ದಾರೆ. ನಾವು ಆಸ್ಪತ್ರೆಗಳಿಗೆ ಹೋದಾಗ ಔಷಧಿ ಕೊಡುವುದರ ಜೊತೆಗೆ, ಈ ಜನನ ನಿಯಂತ್ರಣದ ಬಗ್ಗೆ ಕೂಡ ಹೇಳಬೇಕು ಅದರ ಜೊತೆಗೆ ಪಠ್ಯ ಪುಸ್ತಕದಲ್ಲಿ ಕೂಡ ನಾವು ಅದನ್ನು ಪ್ರತಿಯೊಂದು ಯಾವುದೇ ಕ್ಲಾಸಿರಬಹುದು ಅದನ್ನು ತಿಳಿಸಿಕೊಡುವುದರಿಂದ ಬಹಳ ಉಪಕಾರವಾಗುತ್ತದೆ. ಏಕೆಂದರೆ ಜನಸಂಖ್ಯೆ ಬೆಳದಂತೆ ಭೂಮಿ ಬೆಳೆಯುವುದಿಲ್ಲ. ಇವತ್ತಿನ ಪರಿಸ್ಥಿತಿಯಲ್ಲಿ ಅದು ಎಲ್ಲಿಗೆ ಹೋಗಿ ಮುಟ್ಟುತ್ತದೆ.

ಎನ್ನುವುದನ್ನು ನಾವು ಸುಲಭವಾಗಿ ಹೇಳುವುದಕ್ಕಾಗುವುದಿಲ್ಲ. ಇಷ್ಟು ಆದ ಮೇಲೂ ಈಗ ಪಟ್ಟಣ ಪ್ರದೇಶಗಳಲ್ಲಿರತಕ್ಕ ಆಸ್ಪತ್ರೆಗಳಲ್ಲಿ ಈಗ ನಾನು ನೋಡುತ್ತಿದ್ದೇನೆ, ಏನೂ ಎಕ್ಸಪರ್ಟ ಆಗಿರತಕ್ಕ ಎಲ್ಲೋ ಐದು ನಿಮಿಷ ಬಂದು ಹೋಗುತ್ತಾರೆ. ಬಹಳ ಪ್ರಭಾವ ಇರತಕ್ಕವರು ಅವರಲ್ಲಿನೆ ಹೋಗಲಿ ಅಥವಾ ಅವರು ಇವರಲ್ಲಿನೆ ಬರಲಿ, ಸಾಮಾನ್ಯವಾಗಿ ಎಲ್ಲ ದೊಡ್ಡ ಆಸ್ಪತ್ರೆಗಳಲ್ಲಿ ಹೌಸ ಸರ್ಜನ್ ಎಂದು ಎನು ಇರುತ್ತಾರೆ, ಅವರಿಂದಲೇ ಆಸ್ಪತ್ರೆ ನಡೆಯುತ್ತಿದೆ ಏನೋ ಎಂದು ನನಗನಿಸುತ್ತಿದೆ. ಅದರಿಂದ ನಮಗೆ ಎನೂ ತೊಂದರೆ ಅಂದರೆ ಒಬ್ಬನು ಬರುತ್ತಾನೆ. ನಿಮಗೆ ಏನಾಗುತ್ತಿದೆ ಎಂದು ಕೇಳುತ್ತಾನೆ ನಿಮಗೆ ಏನಾಗಿದೆ 10 ಜನ ಕೊನೆಯ ಪಕ್ಷ ನಿಮಗೆ ಏನಾಗಿದೆ ಅಂತಾ ಕೇಳುತ್ತಾರೆ. ನಮಗೆ ಏನಾಗಿದೆ ಅನ್ನುವುದು ಗೊತ್ತಿದ್ದರೆ, ನಾವು ಆಸ್ಪತ್ರೆಗೆ ಏಕೆ ಹೋಗುತ್ತದ್ದೆವು ಆದ್ದರಿಂದ ಇದು ಒಂದು ಸೈಡ್ ಇನ್ನೊಂದು ಸೈಡ್ ಹಳ್ಳಿಯಲ್ಲಿ ಏನಾಗಿದೆ ಅಂದರೆ, ನಾನು ಬಾಕಿ ವಿಷಯಗಳನ್ನು ಹೇಳುವುದ್ದಕೆ ಹೋಗುದಿಲ್ಲ. ಬಹಳ ಆಸ್ಪತ್ರೆಗಳಲ್ಲಿ ಡಾಕ್ಟರುಗಳು ಇಲ್ಲ. ಅಲ್ಲಿ ಆಸ್ಪತ್ರೆ ನಡೆಸತಕ್ಕವರು ಸಾಮಾನ್ಯವಾಗಿ ಕಾಂಪೌಂಡರು. ಅವರಿಗೆ ಔಷಧಿ ಹೆಸರು ಗೊತ್ತಿರುವುದಿಲ್ಲ. ಆ ಬಣ್ಣಗಳನ್ನು ನೋಡಿ ಅವರು ಮಾತ್ರೆಗಳನ್ನು ಕೊಡುತ್ತಾರೆ. ಸಾಮನ್ಯವಾಗಿ ಹಳ್ಳಿಗಳಲ್ಲಿ ನಡೆಯತಕ್ಕ ಆಸ್ಪತ್ರೆಗಳಲ್ಲಿ ಕಾಂಪೌಂಡರು ಎರೆಡು ಮಾತ್ರೆಕೊಡುತ್ತಾನೆ. ಡಾ॥ ಬರುದಿಲ್ಲ 8 ದಿವಸಕ್ಕೋ 15 ದಿವಸಕ್ಕೋ ಬರುತ್ತಾನೆ ಎರೆಡು ಮಾತ್ರೆ ಕೊಟ್ಟು ಹೊಟ್ಟೆನುಯ್ಯುತ್ತದೆ ಎಂದು ಹೇಳಿದರೆ, ಇದೊಂದು ತೆಗೆದುಕೊಳ್ಳಿ ನಿಮಗೆ ಗುಣವಾಗುತ್ತದೆ. ಆಗಲಿಲ್ಲವೆಂದು ಇಟ್ಟುಕೊಳ್ಳಿ ಬದುಕಿದ್ದರೆ ಇನ್ನೊಮ್ಮೆ ಇನ್ನೊಂದು ತೆಗೆದುಕೊಳ್ಳಿ ಎಂದು ಹೇಳುತ್ತಾನೆ. ಅಂದರೆ ಒಂದೇ ಗುಳಗಿಯಲ್ಲಿ ಅವನು ನೆಗೆದು ಬೀಳುವುದು ಗ್ಯಾರಂಟಿನೇ. ಈ ಬಣ್ಣಗಳ ಮೇಲಿಂದ ಔಷಧ ಕೊಡತಕ್ಕ ಕಾಂಪೌಂಡರು ಮೇಲಾಗಲಿ ಹೌಸ ಸರ್ಜನಗಳ ಮೇಲೆ ನಡೆಯತಕ್ಕ ಆಸ್ಪತ್ರೆಗಳು ಮೊದಲು ದುರಸ್ತಿಯಾಗಬೇಕು. ಇಷ್ಟರವರೆಗೆ ಅಲ್ಲಿ ನಡೆಯತಕ್ಕ ಡಾಕ್ಟರಗಳದ್ದು ಆಗಲಿ ಅಥವಾ ಸ್ಕುರಿಯಸ್ ಬ್ಲಡ್ಸ್ ಮಾರಾಟ ಇದೆಲ್ಲ ಇದೆ, ಆ ವಿಷಯಕ್ಕೆ ನಾನು ಹೋಗುದಿಲ್ಲ. ಅದನ್ನು ಎಲ್ಲರೂ ಹೇಳಿ ಬಿಟ್ಟಿದ್ದಾರೆ. ಬೋರಿಂಗ್ ಆಸ್ಪತ್ರೆಯಲ್ಲಿ ನಡೆದ ಒಂದು ಘಟನೆ ಹೇಳುವುದಾದರೆ, ಒಬ್ಬ ಹುಡುಗನಿಗೆ ಗಡ್ಡೆಯಾಗಿತ್ತು ಅವನು ನನ್ನ ಸಂಭಂದಿಗ. ಗಡ್ಡೆಯಾದರೆ ಎಲ್ಲ ಡಾಕ್ಟರಗಳು ನೋಡಿದರೂ, ಕೊನೆಗೆ ಸ್ಕ್ಯಾನಿಂಗ್‌ನಲ್ಲಿಯೂ ನೋಡಿದರೂ, ಯಾವುದೇ ಒಂದು ಗಡ್ಡೆ ಇದೆ ಅದು ಆಪರೇಷನ್ ಆಗಬೇಕು ಎಂದು ಹೇಳಿದರು. ಕೊನೆಗೆ ಆಪರೇಷನ್‌ಗಾಗಿ ಹೊಟ್ಟೆ ಕುಯ್ದು ಮೇಲೆ ಒಳಗೆ ಏನೂ ಇಲ್ಲ. ಎಂದು ತಿಳಿದು ಬಂದಿತು. ಈ ಒಂದು ಅನಾಧರವಾದ  ವ್ಯವಸ್ಥೆ ಕೂಡ ಆಸ್ಪತ್ರೆಗಳಲ್ಲಿದೆ. ಅದನ್ನು ತಾವು ದಯವಿಟ್ಟೂ ಸರಿಪಡಿಸುವುದರ ಕಡೆ ಗಮನ ಹರಿಸಬೇಕು. ನನಗೆ ಅನ್ನಿಸುತ್ತದೆ.

ನಮ್ಮ ಮಂತ್ರಿಗಳಿಗಾಗಲಿ ಅಥವಾ ಇಲ್ಲಿರತಕ್ಕಂತ ನಿರ್ದೇಶಕರು, ನಮ್ಮ ಕಾರ್ಯದರ್ಶಿಗಳಾಗಲೀ ಅವರಿಗೆ ನಮಗಿಂತ ಹೆಚ್ಚಿಗೆ ಅಲ್ಲಿ ನಡೆಯತಕ್ಕಂಥಾದ್ದು ಗೊತ್ತಿದೆ. ಪಾಪ, ಅವರದು ಕೈ ಮೀರಿ ಬಿಟ್ಟಿದೆ. ಇದರ ರೀಪೆರಿಯನ್ನೆ ಮಾಡುವುದಕ್ಕೆ ಸಾಧ್ಯವಿಲ್ಲವೇನೋ ಅನ್ನುವ ಮಟ್ಟಕ್ಕೆ ಬಂದುಬಿಟ್ಟಿದೆ. ಒಂದು ಮುಖ್ಯವಾದ ವಿಷಯ ಹೇಳುತ್ತೇನೆ. ಬ್ಯಾಡಗಿ ತಾಲೂಕಿನಲ್ಲಿ ಶಂಕರಿಪುರ ಅಂತಾ ಒಂದು ಊರು ಇದೆ. 1976 ರಲ್ಲಿ ಆ ಊರಿನಲ್ಲಿ ಒಂದು ಆಸ್ಪತ್ರೆ ಕಟ್ಟಿಸಬೇಕು ಅನ್ನತಕ್ಕಂತ ವಿಚಾರ ಬಂದಾಗ 1979 ರಲ್ಲಿ ಪಿ.ಹೆಚ್.ಯು ಪ್ರಾರಂಭವಾಯಿತು ಈ ಮಧ್ಯೆ ಊರಿನ ವಂತಿಗೆ 15 ಸಾವಿರ ಕಟ್ಟಬೇಕು ಎಂದು ಅಲ್ಲಿನ ವೈದ್ಯಾಧಿಕಾರಿಗಳು ಹೇಳಿದರು. ಅದರಂತೆ 1988 ರಲ್ಲಿ 15 ಸಾವಿರ ಕಟ್ಟಿದರು. ಈಗ ಅದು 34 ಸಾವಿರ ರೂಪಾಯಿಯಾಗಿದೆ. ಅವರು 1988ರವರೆಗೂ ಬಡ್ಡಿ ಕೊಟ್ಟರು. ಅಲ್ಲಿಂದಿಚೆಗೆ ಕೊಡುದಿಲ್ಲ ಎಂದು ಹೇಳುತ್ತಾರೆ. ಈಗ ಅಲ್ಲಿ 38 ಸಾವಿರ ಚಿಲ್ಲರೆ ಹಣ ಮತ್ತು ಆ ಪಾಸ್ ಬುಕ್ ಕೂಡ ನನ್ನ ಹತ್ತಿರವಿದೆ. ಅದನ್ನ ಈ ವರೆಗೆ ಯಾರೂ ತೆಗೆದುಕೊಂಡಿಲ್ಲ. ಆಸ್ಪತ್ರೆ ಕಟ್ಟಡದ ಕೆಲಸ ಮುಗಿದಿದೆ. ಆಗ ಕಟ್ಟಡ ಇರಲಿಲ್ಲ, ವೈದ್ಯರು ಇದ್ದರು. ಈಗ ಕಟ್ಟಡ ಇದೆ. ವೈದ್ಯರು ಇಲ್ಲ. ಆದ್ದರಿಂದ ಈ ಶಂಕರೀಪುರದವರು ನನಗೆ ಒಂದು ಕಾಗದ ಬರೆದಿದ್ದಾರೆ. ಆ ಕಾಗದ ಮತ್ತು ಜೆಕ್‌ಬುಕ್ ಇವರೆಡನ್ನೂ ನಾನು ತಮಗೆ ಒಪ್ಪಿಸುತ್ತೇನೆ ಮಂತ್ರಿಗಳಿಗೆ ನಾನು ಅವರ ಕಡೆಗೇ ಕೊಡುತ್ತೇನೆ. ಇನ್ನೂ, ಆ ಆಸ್ಪತ್ರೆಯ ಲೋಪದೋಷಗಳ ಬಗ್ಗೆ ಹೇಳುವುದಾದರೆ, ನನ್ನ ಆಯುಷ್ಯದಲ್ಲಿ ನಾನು ಹೆಚ್ಚಿಗೆ ಆಸ್ಪತ್ರೆಯಲ್ಲಿಯೇ ಸಮಯ ಕಳೆದಿರುವುದು. ಅದು ತಮಗೆ ಗೊತ್ತಿದೆ. ನಾನು ಎರೆಡು ಮಹಾಕಾವ್ಯಗಳನ್ನು ಬರೆದಿದ್ದು ಆಸ್ಪತ್ರೆಯಲ್ಲೇ. ಆದ್ದರಿಂದ ಆಸ್ಪತ್ರೆಗೆ ಮೊದಲಿಗೆ ನನ್ನ ನಮಸ್ಕಾರ, ಡಾಕ್ಟರಗಳ ಬಗ್ಗೆಯೂ ಅಷ್ಟೇ ನನ್ನ ಗೌರವ ಇದೆ. ನಾನೂ ಎನನ್ನೂ ಟೀಕೆ ಮಾಡುವ ಗೊಡವೆಗೆ ಹೋಗುದಿಲ್ಲ. ಸಾದ್ಯವಾದಷ್ಟು ತಾವು ಹೆಚ್ಚಿನ ಜವಾಬ್ದಾರಿಯನ್ನು ಹೊತ್ತು, ಈಗ ನಡೆಯುತ್ತಾ ಇರತಕ್ಕಂಥ ಅವ್ಯವಹಾರಗಳ ಬಗ್ಗೆ ತನಿಖೆ ಮಾಡಲು ಸಮಿತಿಯನ್ನು ನೇಮಿಸಬೇಕು ಎಂದು ಹಿರಿಯ ಸದಸ್ಯರು ಏನು ಹೇಳಿದ್ದಾರೆ, ಅದು ಉತ್ತಮವಾದಂಥ ಸಲಹೆ, ಇನ್ನೊಂದು, ನಮ್ಮ ಜಯದೇವ ಕಾರ್ಡಿಯಾಲಜಿಯಲ್ಲಿ ಹಾರ್ಟ ಟ್ರಬಲ್ ಆಗಿತಕ್ಕಂಥವರಿಗೆ, ಕೊನೆಗೆ ಇನ್ನೆನು ಅವನು ಸಾಯುತ್ತಾನೆ ಅನ್ನುವ ಸ್ಥಿತಿಯಲ್ಲಿ ಒಂದು ಇಂಜೆಕ್ಷನ್ ಕೊಡುತ್ತಾರೆ. ಅದು ಯಾವುದೂ ಅಂತಾ ನನಗೆ ನೆನಪು ಇಲ್ಲ. ಅದರ ಬೆಲೆ 2500 ರೂಪಾಯಿಗಳು ಅಲ್ಲಿನ ನಿಯಮ ಏನಿದೆ ಎಂದರೆ, ಆ ಎರೆಡೂವರೆ ಸಾವಿರ ರೂಪಾಯಿಗಳನ್ನು ಕಟ್ಟಿ, ರಸೀದಿ ತಂದ ಮೇಲೆ ಅವರು ಇಂಜೆಕ್ಷನ್ ಕೊಡುತ್ತಾರೆ. ಇವರು ರಸೀದಿ ಬರೆಯುವುದರೊಳಗೆ, ಅವರ ದುಡ್ಡು

ಜೋಡಿಸುವುದರೊಳಗೆ ಅಲ್ಲಿ ಅವರು ಇರುದಿಲ್ಲ, ಅವರ ಪ್ರಾಣ ಹೋಗಿ ಬಿಟ್ಟಿರುತ್ತದೆ. ನನಗೆ ಹಾರ್ಟ ಟ್ರಬಲ್ ಇದ್ದಾಗ, ಇವರದು ಮುಗಿದಿದೆ, ನೀವು ತೆಗೆದುಕೊಂಡು ಹೋಗಿ ಎಂದು, ನನಗೆ ಹೇಳಿದ್ದು. ನಾನು ಮೂರನೇ ದಿವಸ ಡಾಕ್ಟರಿಗೆ ಹೇಳಿದೆ. ಎನು ಡಾಕ್ಟರ್ ನನಗೆ ಹಾರ್ಟ ಟ್ರಬಲ್ ಆಯಿತು, ಸಂತೋಷ ಆಯಿತು. ಏಕೆಂದರೆ ನನಗೆ ಹಾರ್ಟ ಇರೋದು ಡೆಫನೇಟ್ ಆಯಿತು. ಈಗ ಅನುಮಾನ ಇರುವುದು ನಿಮ್ಮದೆ ಎಂದು ಹೇಳಿ ಅವರಿಗೆ ತಮಾಷೆ ಮಾಡಬೇಕಾಯಿತು. ಆದುದರಿಂದ ಬಡವರಿಗೆ 2.500 ರೂಪಾಯಿ ಕೊಟ್ಟು ಚುಚ್ಚು ಮದ್ದನ್ನು ಹಾಕಿಸುವುದರೊಳಗಾಗಿ, ಪ್ರಾಣ ಹೋಗುವ ಸಂಭವಿರುದರಿಂದ ಸಾರ್ವಜನಿಕರ ಹಣ ಸೇರಿಸಿಯಾಗಲಿ ಅಥವಾ ಬಡವರಿಗಾಗಿ ಯಾವುದಾದರೂ ಒಂದು ರೂಪದಲ್ಲಿ ಇಂಜೆಕ್ಷನ್ ಕೊಡತಕ್ಕಂತ ವ್ಯವಸ್ಥೆಯನ್ನು ತಾವು ಮಾಡುವುದಾದರೆ, ನಾನು ಮೋದಲನೇಯದಾಗಿ ಐದು ಸಾವಿರ ರೂಪಾಯಿ ವಂತಿಗೆಯನ್ನು ನಿಮಗೆ ಕೊಡುತ್ತೇನೆ. ಅದನ್ನು ದಯವಿಟ್ಟೊ ನಾಳೆ ಇಂದಲೇ ತಾವು ಪ್ರಾರಂಭ ಮಾಡಬೇಕು ಅಲ್ಲಿ ಜನ ಬಹಳ ಸಂಕಷ್ಠದಲ್ಲಿ ಇದ್ದಾರೆ. ವಿರೋಧ ಪಕ್ಷದ ನಾಯಕರು ಮಾತನಾಡುತ್ತಾರೆ. ಮಂತ್ರಿಗಳು ಇನ್ನೂ ಉತ್ತರ ಕೊಡುವುದು ಇದೆ. ನಾನು ಹೇಳಿದ್ದೆ ಹೇಳಬೇಕಾಗುತ್ತದೆ. ಆದ್ದರಿಂದ ಹೆಚ್ಚು ಹೇಳುವುದಕ್ಕೆ ನನಗೆ ಇಷ್ಟ ಇಲ್ಲ ಇಷ್ಟು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ. ಮತ್ತೆ ಬಂದಿತೆನೋ ಎಂದು ನಾನು ಸರಕಾರದವರಲ್ಲಿ ಪ್ರಾರ್ಥನೆ ಮಾಡುತ್ತಿದ್ದೇನೆ., ಈ ವದಂತಿಗೆ ಇತಿಶ್ರೀಯನ್ನು ಹಾಕಬೆಕು. ಇದರ ಹಿಂದೆ ಒಂದು ಜಾಲ ಇದೆ. ಇದು ಜನರ ಮೌಢ್ಯವನ್ನು ದುರುಪಯೋಗ ಮಾಡಿಕೊಳ್ಳುತ್ತಿದೆ. ಇದರ ಸತ್ಯಾಸತ್ಯತೆಯನ್ನು ಕಂಡುಹಿಯಬೇಕು ಕೆಲವು ಖೊಟಾ ಬಾಬಾಗಳು, ಸುಳ್ಳು ಸ್ವಾಮಿಗಳು ಇದನ್ನು ನಾವೇ ಮಾಡಿಸಿದ್ದು ಎಂದು ಹೇಳಿಕೊಳ್ಳುತ್ತಿದ್ದಾರೆ. ಇದರಿಂದ ಅವರಿಗೆ ಭಕ್ತಾದಿಗಳು ಜಾಸ್ತಿ ಆಗಬಹುದು. ಆದರೆ ಇದರಿಂದ ಜನತೆಗೆ ಕಿರುಕುಳ ಜಾಸ್ತಿಯಾಗುತ್ತದೆ. ಇದರ ಬಗ್ಗೆ ತಜ್ಞ ವಿಜ್ಞಾನಿಗಳ ಒಂದು ಸಮಿತಿಯನ್ನು ಮಾಡಿ ಯಾರು ಈ ಜಾಲದ ಹಿಂದೆ ಇದ್ದಾರೆ ಯಾರು ಇದನ್ನು ಪ್ರಚಾರ ಮಾಡುತ್ತಿದ್ದಾರೆ ಎಂದು ತಿಳಿದು ಜನರಿಗೆ ಜೈಲು ಮಾಡಬೇಕು ಜನರಿಗೆ ಆಗುತ್ತಿರುವ ಆತಂಕ ಅನಾವಶ್ಯಕ ಕುತೂಹಲವನ್ನು ನಿರ್ಮೂಲನೆ ಮಾಡಬೇಕು ಇದು ಒಂದು ಸಮೂಹ ಸನ್ನಿ ಮನೋವ್ಯಾಧಿ ಎಂದು ವಿಜ್ಞಾನಿಗಳು ಹೇಳಿದ್ದಾರೆ. ಈ ವ್ಯಾಧಿ ಆಗಾಗ ಮರಿಕಳುಸುತ್ತದೆ ಅದು ಇವತ್ತು ಈ ರೂಪದಲ್ಲಿ ಮರುಕಳಿಸಿದೆ. ಎಂದು ವಿಜ್ಞಾನಿಗಳು ಹೇಳಿದ್ದಾರೆ. ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಜಾಲದವರು ಇದನ್ನು ಪ್ರಚಾರ ಮಾಡುತ್ತಿದ್ದಾರೋ ಎನೋ ಎಂದು ಕಂಡುಹಿಡಿದು ಆ ಜಾಲದವರಿಗೆ ಶಿಕ್ಷೆ

ಮಾಡಬೇಕು ಹಾಗೂ ಜನಗಳಿಗೆ ವೈಜ್ಞಾನಿಕ ಮನೋಭಾವನೆ ಬೆಳೆಸುವುದಕ್ಕೆ ಸರಕಾರ ಕ್ರಮ ತೆಗೆದುಕೊಳ್ಳಬೇಕೆಂದು ಪ್ರಾರ್ಥನೆ ಮಾಡುತ್ತೇನೆ.

## 22 ಸೆಪ್ಟೆಂಬರ್ 1995

## 28 ಡಿಸೆಂಬರ್

**ಶ್ರೀ ಬಿ ಎಸ್ ಹೊರಟ್ಟಿ :** ಮಾನ್ಯ ಸಭಾಪತಿಯವರೇ ಮಾನ್ಯ ಸಿದ್ದಲಿಂಗಯ್ಯನವರು ಮನೆಗೆ ಫೋನ್ ಮಾಡಿ ಗಣಪತಿಗೆ ಹಾಲು ಕುಡಿಸಿದ್ದಾರೆ ನನ್ನ ಎದುರಿಗೆ ಫೋನ್ ಮಾಡಿ ಗಣಪತಿ ಹಾಲು ಕುಡಿಸು ಎಂದು ಹೇಳಿದ್ದಾರೆ ಹಾಗೆಯೇ ಮಾನ್ಯ ಸಭಾನಾಯಕರ ಗಣಪತಿಗೆ ಸರಾಯಿ ಕುಡಿಸಿದ್ದಾರೆ.

**ಶ್ರೀ ಎಸ್ ಪಾಟೀಲ್ (ಸಹಕಾರ ಸಚಿವರು) :** ಮಾನ್ಯ ಸಭಾಪತಿಯವರೇ ಇವರು ತಪ್ಪು ಅರ್ಥ ಮಾಡಿಕೊಂಡಿದ್ದಾರೆ ಅವರು ಫೋನ್ ಮಾಡಿರುವುದು ಏನೆಂದರೆ ಮನೆಯವರ ದೃಷ್ಠಿಯಿಂದ ನಾನೇ ಗಣಪತಿ ನನಗೆ ಹಾಲು ಕುಡಿಸಿ ಎನ್ನುವ ದೃಷ್ಠಿಯಿಂದ ಹೇಳಿದ್ದನ್ನು ಇವರು ತಪ್ಪು ಅರ್ಥ ಮಾಡಿಕೊಂಡಿದ್ದಾರೆ...

**ಡಾ॥ ಎಮ್ ಪಿ ನಾಡಗೌಡ :** ಸುದ್ದಿಯು ಸುಮಾರು ನಿನ್ನೆ 8 ಗಂಟೆಗೆ ಪ್ರಾರಂಭವಾಯಿತು ಬೆಂಗಳೂರಿನ ಎಲ್ಲ ಗಣಪತಿ ಗುಡಿಯ ಮುಂದೆ ತುಂಬಾ ಜನ ಬಂದಿದ್ದರು. ನಾನು ಕೂಡ ಹೋಗಿದ್ದೇನೆ ನನಗೂ ಗಣಪತಿಯ ಮೇಲೆ ಭಕ್ತಿ ಇದೆ. ನಾನು ಯಾವಾಗಲೂ ಹೋಗುತ್ತೇನೆ. ಹಾಲು ಕುಡಿಯುವ ಈ ಘಟನೆ ಆಗಿದ್ದು ಒಳ್ಳಯದೆಂದು ನನಗನ್ನಿಸುತ್ತೆ. ಆದರೆ ದುರಂತ ಅಂದರೆ ಈಡೀ ದೇಶದಲ್ಲಿ ಎಲ್ಲ ಕಡೆಗಳೆಲ್ಲಿಯೂ ಇದು ಹಬ್ಬಿದ್ದು, ಟಿ ವಿ, ರೇಡಿಯೋ ಮುಂತಾದ ಮಾದ್ಯಮಗಳಲ್ಲಿ ತೋರಿಸಿದ್ದು, ಒಂದು ರೀತಿಯಲ್ಲಿ ಹಿಸ್ಟೇರಿಯಾ ಟೈಪ್‌ನಲ್ಲಿ ದೇಶದಾದ್ಯಂತ ತುಂಬಾ ಪ್ರಚಾರವಾಯಿತು. ಒಂದು ವಿಶೇಷವೆಂದರೆ ಎಲ್ಲ ಗಣಪತಿಗಳು ಹಾಲು ಕುಡಿದಿದ್ದಾವೆ. ಒಂದೆ ಗಣಪತಿ ಎನಾದರೂ ಹಾಲು ಕುಡಿದಿದ್ದರೆ ಅದನ್ನು ಜನರು ಮೋಸ ಇತ್ಯಾದಿಗಳೆಂದು ಹೇಳಲು ಅವಕಾಶವಿತ್ತು. ಇದು ಎಲ್ಲಿಗೆ ಹೋಯಿತೆಂದರೆ ಒಬ್ಬ ಷೂ ತಯಾರು ಮಾಡುವವನು ತನ್ನ ಬಳಿ ಇರುವ ಸರಾಯಿಕೂಡ ಕುಡಿಸಿಬಿಟ್ಟಿದ್ದಾನೆ. There is a scientific saying that it will

ಜನರಲ್ಲಿರುವ ಮೂಡ ನಂಬಿಕೆಯು ಹೊರಗೆ ಹೋಗಲಿಕ್ಕೆ ಒಳ್ಳೆಯದಾಯಿತು. ಆದರೆ ಆಗುವುದಿಲ್ಲ. ಎಂಬ ವಿಶ್ವಾಸವು ಇದೆ. ನನಗೆ ಇರುವ ಆತಂಕ ಅಂದರೆ

ಹಾಲು ಕುಡಿಯುವುದನ್ನು ಬಿಟ್ಟು ಆಲ್ಕೋಹಾಲು ಕುಡಿಸಿದ್ದರೆ ಬೆಲೆ ಜಾಸ್ತಿಯಾಗುತ್ತಿತ್ತೋ ಏನೋ? ಹಾಲಿನ ಬೆಲೆಯು 10 ಇದ್ದದ್ದು 100 ಆಗಿದೆ ಆದರೆ ಪೀಟರ್ ಸ್ಕ್ಯಾಚ್ ಬೆಲೆ ಎಷ್ಟಾಗಿರುತ್ತಿತ್ತು? ಆದರೆ ಹಾಗೆ ಆಗಿಲ್ಲ ಎಂಬುದು ಒಳ್ಳೆಯದು.

**ಶ್ರೀ ವಿ ಆರ್ ಸುದರ್ಶನ್ (ವಿಧಾನಾ ಸಭಾ ಕ್ಷೇತ್ರ) :** ಮಾನ್ಯ ಸಭಾಪತಿಗಳವರೇ ನಾನು ದಿನದ ಕೆಲಸ ಕಾರ್ಯಗಳನ್ನು ಗಣಪತಿಗೆ ಕೈ ಮುಗಿದ ನಂತರವೇ ಪ್ರಾರಂಭ ಮಾಡುವಂತಾಹುದು ಇದೆ. ಆದರೆ ಇಂತ ವಿಷಯಗಳ ಬಗ್ಗೆ ನನ್ನಲ್ಲಿ ಯಾವುದೇ ನಂಬಿಕೆ ಇಲ್ಲ ನಗರ ಪ್ರದೇಶಗಳಲ್ಲಿ ಇದು ವ್ಯಾಪಕವಾಗಿ ಹಬ್ಬಿತ್ತು ಟಿ ವಿ ನ್ಯೂಸ್ ಮುಂತಾಗಿ ಎಲ್ಲಾ ಪ್ರಚಾರವಾಗುತ್ತಾ ಇತ್ತು ಗ್ರಾಮಾಂತರ ಪ್ರದೇಶದ ಗಣಪತಿ ಹಾಲು ತೆಗೆದುಕೊಳ್ಳುತ್ತಾನೋ ಎಂಬುದನ್ನು ತಿಳಿದುಕೊಳ್ಳುವುದಕ್ಕೆ ನಾಲ್ಕಾರು ಕಡೆಗಳಲ್ಲಿ ಫೋನ್ ಮಾಡಿ ಮಾಹಿತಿ ಸಂಗ್ರಹಕ್ಕೆ ಪ್ರಯತ್ನಸಿ ಇರುವುದು ನಿಜ. ಇದನ್ನು ಉತ್ಪ್ರೇಕ್ಷ ಮಾಡಿ ಸದನಕ್ಕೆ ಬೇರೆ ತಪ್ಪು ಮಾಹಿತಿಯನ್ನು ಕೊಡುವುದು ಬೇಡ ನಾಣಯ್ಯನವರು ಹೇಳಿದ್ದು ನಿಜ ಆಲ್ಕೋ ಹಾಲಿನ್ನು ಕೂಡ ಪ್ರಯತ್ನ ಮಾಡೋಣ ಎಂದು ಮಾಡಿದ್ದು ನಿಜ.... ಇದೊಂದು ಮಾಸ್ ಹಿಸ್ಟೀರಿಯಾ ನಿನ್ನೆ ರಾತ್ರಿ 12 ಗಂಟೆಯವರೆಗೂ ಎಲ್ಲ ಮನೆಗಳಲ್ಲಿಯೂ ಕೂಡ ಏನೊಂದು ಕೂತಹಲವಿತ್ತು ಅದನ್ನು ಎಲ್ಲ ಕಡೆಗಳಲ್ಲಿಯೂ ನಾವು ನೋಡಿದ್ದೇವೆ. ಬೆಳಿಗ್ಗೆ ಪತ್ರಿಕೆಗಳನ್ನು ಗಮನಿಸಿದಾಗ ಇದಕ್ಕೆ ಚಂದ್ರಸ್ವಾಮಿಯವರು ನಾವೇ ಕಾರಣ ಎಂಬ ರೀತಿಯಲ್ಲಿ ಅವರು ಶಿಷ್ಯರು ಹೇಳಿಕೊಂಡುರುವುದನ್ನು ಪತ್ರಿಕೆಗಳಲ್ಲಿ ನೋಡಿದ್ದೇವೆ. ಇದೇ ರೀತಿಯಲ್ಲಿ ಬೇರೆ ಬೇರೆ ಸಂಘ ಸಂಸ್ಥೆಗಳರವರು ಕೂಡ ಕ್ಲೇಮ್ ಮಾಡಿದ್ದಾರೆ. ವೈಜ್ಞಾನಿಕವಾಗಿ ಇದು ಸರ್‌ಫೇಸ್‌ಟೆನ್‌ಷನ್ ಎಂದು ವಿಜ್ಞನಾನಿಗಳು ಹೇಳಿದ್ದಾರೆ ಇದರ ಮೂಲಕ ಸಾರ್ವಜನಿಕರ ಮೇಲೆ ದುಷ್ಪಪರಿಣಾಮ ಆಗತಕ್ಕಂಥ ಸಾದ್ಯತೆಗಳಿವೆ. ಅನೇಕ ಅನಾಹುತಗಳು ಆಗಿವೆ. ಎಂಬ ಸಿದ್ದಲಿಂಗಯ್ಯನವರ ಮಾತುಗಳನ್ನು ನಾನು ಕೂಡ ಒಪ್ಪುತ್ತೇನೆ. ಉನ್ನತ ಮಟ್ಟದ ವಿಜ್ಞಾನಿಗಳು ನಮ್ಮ ರಾಜ್ಯದಲ್ಲಿಯೂ ಕೂಡ ಇದ್ದಾರೆ ಅವರನ್ನು ಕೂಡಲೇ ಸಂಪರ್ಕ ಮಾಡಿ ಸಾರ್ವಜನಿಕರಿಗೆ ಇದರ ಬಗ್ಗೆ ಮಾಹಿತಿಗಳನ್ನು ಕೊಡತಕ್ಕಂಥ ಅವಶ್ಯಕತೆ ವೈಜ್ಞಾನಿಕವಾಗಿ ಮತ್ತು ವೈಚಾರಿಕವಾಗಿ ಇದೆ. ಎಂಬ ಮಾತನ್ನು ಹೇಳಿ ದಯಾಮಾಡಿ ಸರಕಾರ ಇದರ ಬಗ್ಗೆ ಸ್ಪಂದಿಸಬೇಕೆಂಬ ಮಾತನ್ನು ಹೇಳ ಬಯಸುತ್ತೇನೆ.

**ಆರ್ ಎಲ್ ಜಾಲಪ್ಪ (ಕಂದಾಯ ಸಚಿವರು) :** ಮಾನ್ಯ ಸಭಾಪತಿಯವರೇ ಹಿಸ್ಟೀರಿಯಾ ಇನ್ನೂ ಮೂರು ತಿಂಗಳ ಕಾಲ ಮುಂದುವರೆದರೆ ಹಾಲು ಮಾರುವವರಿಗೆ

ಸ್ವಲ್ಪ ದುಡ್ಡಾದರೂ ಸಿಗುತ್ತದೆ ಆದ್ದರಿಂದ ಹೀಗೇ ಇದು ಮೂರು ತಿಂಗಳ ಕಂಟಿನ್ಯೂ ಆಗಲಿ ಎಂದು ಗಣಪತಿಯನ್ನು ಬೇಡುತ್ತೇನೆ.

**ಶ್ರೀ ಮಹದೇವ್ ಬಣಕಾರ್ (ನಾಮ ನಿರ್ದೇಶನ ಹೊಂದಿದವರು) :** ಮಾನ್ಯ ಸಭಾಪತಿಯವರೇ ಗಣಪತಿ ಹಾಲು ಕುಡಿದ ಎಲ್ಲ ಕಡೆಗಳಲ್ಲಿ ಕುಡಿಯುತ್ತಾ ಇದ್ದಾನೆ ಎಂಬ ವಿಷಯದಲ್ಲಿ ಮಾನ್ಯ ಸಿದ್ದಲಿಂಗಯ್ಯನವರಿಗೆ ಯಾವ ಒಂದು ಕುತೂಹಲ ಮತ್ತು ಆಶ್ಚರ್ಯ ಇದೆಯೋ ಅದರ ಜೊತೆಯಲ್ಲಿ ನನ್ನ ಒಂದು ಮನಸ್ಸಿನ ಶಂಕೆ ಎನೇಂದರೆ ಏನೋ ಒಂದು ಓಣಿಯಲ್ಲಿ ನಡೆದ ಪ್ರಸಂಗವಲ್ಲ. ಏಕ ಕಾಲದಲ್ಲಿ ಇಡೀ ರಾಷ್ಟ್ರದಾದ್ಯಂತ ಇಂತ ಒಂದು ವ್ಯಾಪಕವಾದ ಸುದ್ದಿ ಹರಡಬೇಕಾದರೆ ಯಾವುದಾದರೂ ಒಂದು ಜಾಲವಿರಲೇ ಬೇಕು ಇದರ ಜೊತೆಗೆ ಚಂದ್ರಸ್ವಾಮಿಯಂಥವರು ಇದಕ್ಕೆ ನಾನೇ ಕಾರಣ ಎಂದು ಹೇಳುವ ಮಟ್ಟಕ್ಕೆ ಹೋಗಿರುವದರಿಂದ ಮೊದಲು ಆತನನ್ನು ನಾನು ಪ್ರಶ್ನೆ ಮಾಡಬೇಕು ಇದರ ಸಂಭಂದಪಟ್ಟಿರತಕ್ಕಂಥ ವಿಚಾರಕ್ಕೆ ಸಿ ಬಿ ಐ ವಿಚಾರಣೆಯಾಗಬೇಕು ಇದರಿಂದಾಗಿ ಜನರಲ್ಲಿ ಮೂಡ ನಂಬಿಕೆ ಬೆಳೆಯುತ್ತದೆ. ಮೂಡ ನಂಬಿಕೆ, ಅಂಧಶೃದ್ದೆಗಳನ್ನು ತೆಗೆದು ಭಕ್ತಿಯ ಆದರದ ಮೇಲೆ ಜೀವನ ಮಾಡಬೇಕೆಂಬುವುದು ಬಸವಣ್ಣನವರ ತತ್ವ ಒಂದು ಕಡೆಯಲ್ಲಿ ಅವರು ಒಂದು ಮಾತನ್ನು ಹೀಗೆ ಹೇಳುತ್ತಾರೆ "ನೀರ ಕಂಡಲ್ಲಿ ಮುಳುಗುವರಯ್ಯ? ಜಲ ಕಂಡಲ್ಲಿ ಮುಳುಗುವರಯ್ಯ? ಮರವ ಕಂಡಲ್ಲಿ ಸುತ್ತುವರಯ್ಯ ? ಒಣಗುವ ಮರ ಬತ್ತುವ ಜಲದ ನಂಬಿದವರು ನಿಮ್ಮನೆಂತುತ್ತುವರು ಬಲ್ಲರಯ್ಯ – ಕೂಡಲ ಸಂಗಮದೇವಾ ಆದ್ದರಿಂದ ಇದು ನಿಜವಾಗಿ ದೇವರನ್ನು ಕಾಣತಕ್ಕಂಥ ಭಕ್ತಿಯನ್ನು ತೋರಿಸತಕ್ಕಂಥ ಮಾರ್ಗವಲ್ಲ ಇದರಲ್ಲಿ ಏನೋ ಕುಯುಕ್ತಿ ಇದೆ ಜನೆತೆಗೆ ಮೋಸ ಮಾಡತಕ್ಕಂಥ ಉದ್ದೇಶವೂ ಇದೆ. ಆದ್ದರಿಂದ ಇದರ ಬಗ್ಗೆ ತನಿಖೆ ಮಾಡಲು ರಾಜ್ಯ ಸರಕಾರದವರು ಕೇಂದ್ರ ಸರಕಾರಕ್ಕೆ ಒತ್ತಾಯ ಮಾಡಬೇಕೆಂದು ಹೇಳುತ್ತೇನೆ. ಇವತ್ತೂ ಗಣಪತಿ ಹಾಲು ಕುಡಿಯುತ್ತಾನೆ ಈ ಹಾಲು ಮುಗಿದ ಮೇಲೆ ಎದೆ ಹಾಲು ಕೇಳಬಹುದು ಎದೆ ಹಾಲು ಮುಗಿದ ಮೇಲೆ ಆಲ್ಕೋ ಹಾಲ್ ಕೇಳಬಹುದು. ನಮಗಂತೂ ಇಂಥ ವಿಚಾರಗಳ ಬಗ್ಗೆ ನಂಬಿಕೆ ಇಲ್ಲ ಈಗಾಗಲೇ ಒಬ್ಬ ಬಾಬಾನ ವಿಚಾರ ನನ್ನ ಕುರಿತಾಗಿ ಆಗಿದೆ. ನನ್ನನ್ನು ಮುಗಿಸುತ್ತೇನೆಂದು ಹೇಳಿದರು ಇದುವರೆಗೆ ಯಾರೂ ಹತ್ತಿರ ಬಂದಿಲ್ಲ ಇದೂ ಕೂಡ ಒಂದು ಪವಾಡ ಅಥವಾ ಕುಯುಕ್ತಿ ಇದೆಯೋ ಎಂಬ ಬಗ್ಗೆ ಒಂದು ತನಿಖೆ ಆಗುವುದು ಸೂಕ್ತ ತನಿಖೆಯು ಮೂಲಕ ಜನರಲ್ಲಿದ್ದ ಆಂಧಶ್ರದ್ಧೆಯು ತೊಲಗಬೇಕು.

**ಎಮ್.ಸಿ. ನಾಣಯ್ಯ (ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು):** ಮಾನ್ಯ ಸಭಾಪತಿಯವರೇ, ನಿನ್ನೆ ನಾನು ಮತ್ತು ನನ್ನ ಮಿತ್ರರು ಸೇರಿರತಕ್ಕಂಥಾದ್ದು ನಿಜ. ಅಷ್ಟು ಹೊತ್ತಿಗೆ ಟಿ.ವಿಲ್ಲಿ ಬರುತ್ತಿರತಕ್ಕಂಥದ್ದುನ್ನು ನಾವೂ ಕೂಡ ನೋಡಿದ್ದೇವೆ. ಅದು ಮಾರ್ಬಲ ಗಣಪತಿಯಾಗಿತ್ತು. ಹಾಲು ಕೊಡುತ್ತಿರುವಾಗ ಅದು ಒಳಗೆ ಹೋಗಿರತಕ್ಕಂಥಾದ್ದನ್ನು ನಾವು ನೋಡಿದ್ದೇವೆ. ಇದು ನಂಬಿಕೆ, ಅಪನಂಬಿಕೆ, ಮೂಡನಂಬಿಕೆಗೆ ಅವರ ಅವರ ವಿಚಾರಕ್ಕೆ ಅನುಸಾರವಾಗಿ ಇರುವ ವಿಚಾರ. ಯಾರ್‍ಯಾರಿಗೆ ನಂಬಿಕೆ ಇದೆ ಮತ್ತು ಯಾರಿಗೆ ನಂಬಿಕೆ ಆ ಧಾರ್ಮಿಕತೆ ಇದೆ ಆ ವಿಚಾರವಾಗಿ ನಾವು ಯಾವ ಮಾತನ್ನು ಇಲ್ಲಿ ಆಡಲಿಕ್ಕೆ ಹೋಗುದಿಲ್ಲ. ಆದರೆ ನಾವು ಇದನ್ನು ಕೆಲವೊಂದು ವೈಚಾರಿಕತೆಯ ನೆಲೆಗಟ್ಟಿನಲ್ಲಿ ನೋಡಬೇಕೆಂಬ ತೀರ್ಮಾನಕ್ಕೂ ಬರಬೇಕಾಗುತ್ತದೆ. ಅದೇ ದೂರದರ್ಶನದಲ್ಲಿ ಒಬ್ಬ ಚಮ್ಮಾರ ಪಾದರಕ್ಷೆಯನ್ನು ತಯಾರು ಮಾಡುವಾಗ ಹೊಡೆಯಲು ಉಪಯೋಗಿಸು ಕಬ್ಬಿಣಡ ಗುಳಿ ಏನಿದೆ, ಅದಕ್ಕೆ ಹಾಲನ್ನು ಕೊಟ್ಟಾಗ ಅದು ಕೂಡ ಹಾಲನ್ನು ತೆಗೆದುಕೊಂಡಿರಕ್ಕಂಥಾದನ್ನು ನಿನ್ನೆ ನೋಡಿದ್ದೇವೆ ಹೀಗೆ ಗಣಪತಿ ಮಾತ್ರವಲ್ಲ, ಕಬ್ಬಣದ ಗುಳಿ ಮತ್ತು ಇನ್ನಾವುದೋ ವಿಗ್ರಹ ಮಾಡಿ ಹಾಲನ್ನು ತೆಗೆದುಕೊಂಡಿತು. ಇದನ್ನೆಲ್ಲ ನೋಡಿದ ಮೇಲೆ ನಾವು ಕೂಡ ಹೋಗಿ ಇದನ್ನು ಮಾಡದರೆ ಏನು ಎಂಬ ವಿಚಾರ ಮನಸ್ಸಿಗೆ ಬಂತು. ಹಾಲನ್ನು ತೆಗೆದುಕೊಂಡು ಹೋಗಿ ನನ್ನ ಕಾರಿನಲ್ಲಿ ಇರತಕ್ಕಂಥ ವಿಗ್ರಹಕ್ಕೆ ಕುಡಿಸುವ ಕೆಲಸವನ್ನು ಮಿತ್ರರು ಇರುವಾಗ ಮಾಡಿದೆ. ನಮ್ಮ ಮನೆಯಲ್ಲಿ ಎಲ್ಲಿಯೂ ಗಣಪತಿಯ ವಿಗ್ರಹವಿಲ್ಲ. ಎಲ್ಲ ಕಡೆಯಲ್ಲಿ ಕುಡಿಯುತ್ತಿರುವದರಿಂದ ಇಲ್ಲಿಯೂ ಕುಡಿಯಬಹುದೆಂದು ನೋಡಿದೆ ಬಹಳ ಹೊತ್ತು ಪ್ರಯತ್ನ ಪಟ್ಟರೂ ಕುಡಿಯಲಿಲ್ಲ. ಗಣಪತಿಗೆ ನನ್ನ ಮೇಲೆ ನಂಬಿಕೆ ಇದೆಯೋ ಇಲ್ಲವೋ ಅಥವಾ ನನಗೆ ನಂಬಿಕೆ ಗಣಪತಿಯ ಮೇಲೆ ಇದೆಯೋ ಇಲ್ಲವೋ ಎಂಬ ವಿಚಾರ ನನಗೆ ಗೊತ್ತಿಲ್ಲ. ನಾವು ದೇವರುಗಳಿಗೆ ಕೊಟ್ಟಿರತಕ್ಕಂಥ ಆಕಾರ ರೂಪ ಇತ್ಯಾದಿಗಳನ್ನು ನಾವು ಇವತ್ತು ಒಪ್ಪಿಕೊಂಡಿದ್ದೇವೆ. ಒಂದು ಶಕ್ತಿ ಇದೆ ಎಂಬುದನ್ನು ನಾವು ಕೂಡ ಒಪ್ಪಿಕೊಳ್ಳುತ್ತೇವೆ. ಮನುಷ್ಯ ಮಾತನಾಡಲು, ನಡೆಯಲು, ಕೆಲಸ ಮಾಡಲು ಬೇಕಾದಂಥಹ ಅಗೋಚರ ಶಕ್ತಿ ಇದೆ. ರಾತ್ರಿ ಕಾರಿನ ಗಣಪತಿ ಹಾಲು ಕುಡಿಯಲಿಲ್ಲ, ಸಿಟ್ಟು ಬಂದಿರಬಹುದೆಂದು ಬೆಳಿಗ್ಗೆ ಕುಡಿಸಿದರೂ ಕುಡಿಯಲಿಲ್ಲ. ಬೇರೆ ಬೇರೆ ಕಡೆಗಳಲ್ಲಿ ಹಾಲು ಕುಡಿದಿರತಕ್ಕಂಥ ಸುದ್ದಿಯನ್ನು ಎಲ್ಲರೂ ಹಬ್ಬಿಸಿದ್ದಾರೆ. ವಿಚಾರ ಇಷ್ಟು ಹೇಳಬಹುದು. ಯಾರಿಗೆ ಅದರ ಮೇಲೆ ನಂಬಿಕೆ ಇದೆ ಅದನ್ನು, ತೆಗೆದು ಹಾಕುವುದು ಆಗುವುದಿಲ್ಲ ನಂಬಿಕೆ ಇಲ್ಲದವರು ನಂಬಿಕೆ ಇರತಕ್ಕಂತವರ ಬಗ್ಗೆ ಮಾತನಾಡಬೇಕಾಗಿಲ್ಲ. ಒಂದು

ಸಂಶಯವೇನೆಂದರೆ ಇದರ ಹಿಂದೆ ಏನಾದರೂ ಜಾಲ ಇದೇಯೇ ಎಂಬ ವಿಚಾರ ಇದೆ. ಇದು ವೈಜ್ಞಾನಿಕವಾಗಿ ನಡೆದಿರತಕ್ಕಂಥಾದ್ದೇ ಅಥವಾ ಪ್ಲಾನೇಟರಿ, ಇನಫ್ಲೂಎನ್ಸ್ ಕೆಲವು ಸಂದರ್ಭಗಳಲ್ಲಿ ಆಗುವ ಸಂಧರ್ಭವೂ ಇರಬಹುದು.....

**ಸಭಾತಿಯವರು :** ಪತ್ರಿಕೆಗಳಲ್ಲಿ ಬಂದ ಪ್ರಕಾರ ಮಣ್ಣು ಇತ್ಯಾದಿಗಳಿಂದ ಮಾಡಿದ ಮೂರ್ತಿ ಅಲ್ಲ, ಮೆಟಲ್‌ದೂ ಮಾತ್ರ

**Sir M C Nanaiah :** Metal And clay ; Planetory influence on certain objects

ಕೆಲವು ಸಂದರ್ಭಗಳಲ್ಲಿ ಆಗುತ್ತಿರತಕ್ಕಂಥದ್ದು, ನೀರಿನ ಎತ್ತರ ಇರತಕ್ಕಂಥದ್ದು ಮತ್ತು ಮಕರ ಸಂಕ್ರಮಣ ಕಾಲದಲ್ಲಿ ಮಕರ ಜ್ಯೋತಿ ಸಂಧರ್ಭ. ಮಕರ ಜ್ಯೋತಿ ಎನ್ನತ್ತಕಂಥದ್ದು ಯಾವಾಗ ಸೂರ್ಯ enters in to ‘maker rashi’ Planetory influence on human system on earth everything accepted. ಆದರೆ ಇದರ ಹಿಂದೆ ಎನಾದರೂ ಜಾಲ ಇದ್ದರೆ ಅದನ್ನು ವಿಚಾರ ಮಾಡಬೇಕಾತ್ತದೆ.

**ಶ್ರೀ ವಿ.ಆರ್. ಸುದರ್ಶನ್ :** ಮಾನ್ಯ ಸಭಾಪತಿಯವರೇ ಸರಕಾರದವರು ನೋಟಿಸ್ ಮಾಡಬೇಕಾದುದು ಏನೆಂದರೆ ಇಂಡಿಯನ್ ಎಕ್ಸ್‌ಪ್ರೆಸ್‌ನಲ್ಲಿ ಒಂದು ವರದಿ ಬಂದಿದೆ. ಒಂದು ಬಾಕ್ಸ್ ಐಟಂ ಕೂಡ ಮಾಡಿದ್ದಾರೆ. Chandraswamy claims credit : It is Chandraswamy ’s Miracle that lord ganesh is drinking the milk.

ಇದು ಇಂಡಿಯನ್ ಎಕ್ಸಪ್ರೆಸ್‌ನಲ್ಲಿ ಬಂದಿದ್ದು ಮತ್ತು ಹಿಂದೂ ಪತ್ರಿಕೆಯಲ್ಲಿ “Mr. Girija Kishor, Joint General Secretory of the Vishwa Hindu Parishad issued a statement saying that it was a colour sign of the starting of Hindu century and the beginning of a New Hindu awakening.”

ಇವೆಲ್ಲವೂ ಸಾರ್ವಜನಿಕವಾಗಿ ಗೊಂದಲಗಳಿಗೆ ಕಾರಣವಾಗುತ್ತವೆ. ಇದನ್ನು ವೈಜ್ಞಾನಿಕ ಹಾಗೂ ವೈಚಾರಿಕವಾಗಿ ನೋಡತಕ್ಕಂಥ ಅಗತ್ಯವಿದೆ. ವಿಜ್ಞಾನಿಗಳ ಜೊತೆಗೆ ಸರಕಾರದವರು ಕೂಡಲೇ ಸಮಾಲೋಚನೆ ಮಾಡತಕ್ಕಂಥದ್ದು ಮತ್ತು ಸಾರ್ವಜನಿಕರಿಗೆ ತಿಳುವಳಿಕೆ ಕೊಡತಕ್ಕಂಥ ಅಗತ್ಯವಿದೆ. ಇದಕ್ಕೆ ಒಂದು ತನಿಖೆ ಕೂಡ ಆಗಬೇಕಾಗುತ್ತದೆ. ಅದನ್ನು ಸಿ. ಓ. ಡಿ ಅಥವಾ ಸಿಬಿಐ ನಿಂದಾದರೂ ತನಿಖೆ ಮಾಡಿಸಿ ಈಗ ನೋಡಿ, “Patnaik address : Orissa chief Minister

J.B. Patnaik today directed the Police immediately clode the temples were people were offering Milk to Lord Ganesh.”

ಓರಿಸ್ಸಾ ಸರಕಾರದವರು ಸೂಕ್ತ ಕ್ರಮವನ್ನು ತೆಗೆದುಕೊಂಡಿದ್ದಾರೆ. ಅಂದರೆ ಇದು ಗಂಭೀರವಾದ ಮತ್ತು ಸಾರ್ವಜನಿಕವಾದ ಪ್ರಶ್ನೆ ಎಂಬುದು ಆಗುತ್ತದೆ, ಆದ್ದರಿಂದ ಸರಕಾರದವರು ಇದನ್ನು ಗಂಭೀರವಾದ ವಿಚಾರವೆಂದು ಪರಿಗಣಿಸಿ ಒಂದು ವಿವರವಾದ ಹೇಳಿಕೆಯನ್ನು ನೀಡಬೇಕೆಂದು ಕೇಳಿಕೊಳ್ಳುತ್ತೇನೆ.

ಅಪ್ರುವಲ್ ಆದ ಮೇಲೆ ಸಹ ಶಾಲೆಯಲ್ಲಿ ಅಥವಾ ಕಾಲೇಜಿನಲ್ಲಿ ಆಗಲಿ ಅವರಿಗೆ ನೌಕರಿ ತೆಗೆದುಕೊಳ್ಳುವಂಥ ವ್ಯವಸ್ಥೆಯಾಗಬೇಕು ಎಂದು ಕೇಳಿದ್ದೆ. ಅದರ ಬಗ್ಗೆ ಮಾನ್ಯ ಸಚಿವರು ಎನು ಹೇಳುತ್ತಾರೆಂದು ತಿಳಿಸಬೇಕು.

**ಶ್ರೀ ಎಚ್ ಜಿ ಗೋವಿಂದಗೌಡ :** ಮಾನ್ಯ ಸಭಾಪತಿವರೇ ನಾನ್ ಟೀಚಿಂಗ್ ಸ್ಟಾಪನ್ನು ತೆಗೆದುಕೊಳ್ಳುವ ವಿಚಾರ ಸಧ್ಯದ ಪರಿಸ್ಥಿತಿಯಲ್ಲಿ ಸಾಧ್ಯವಿಲ್ಲ ಎಂದು ಮಾನ್ಯ ಸದಸ್ಯರಿಗೆ ತಿಳಿಸುತ್ತೇನೆ. ತಾವು ಏನು ಹೇಳುತ್ತಿದ್ದಿರಿ ಅದರ ಅವಶ್ಯಕತೆ ಇದೆ. ಆದರೆ ಹಣದ ಪರಿಸ್ಥಿತಿ ಸ್ವಲ್ಪ ಉತ್ತಮವಾದಮೇಲೆ ಉಪಾಧ್ಯಾರನ್ನು ಮತ್ತು ಲಕ್ಚರಗಳನ್ನು ಹೇಗೆ ತೆಗೆದುಕೊಳ್ಳುತ್ತೇವೆ ಹಾಗೆಯೆ ಶಾಲೆಗಳಲ್ಲಿ ನೌಕರ ವರ್ಗದವರನ್ನು ಕೊಡಬೇಕಾಗುತ್ತದೆ. ಸಧ್ಯದ ಪರಿಸ್ಥಿತಿಯಲ್ಲಿ ನಾನ್ ಟೀಚಿಂಗ್ ಸ್ಟಾಪನ್ನು ಪಾಯಿಂಟ್ ಮಾಡುತ್ತಿಲ್ಲ. ಹಣದ ಪರಿಸ್ಥಿತಿ ಈಗ ಸ್ವಲ್ಪ ಸುಧಾರಣೆ ಆಗುತ್ತಿದೆ.

**ಶ್ರೀ ಕೆ ಸಿ ಪುಟ್ಟಶಿದ್ದಶೆಟ್ಟಿ :** ಈಗಾಗಲೇ ಯಾರನ್ನು ಮಾಡಿದ್ದಿರೋ ಅವರಿಗೆ ಹಲವಾರು ವರ್ಷಗಳಿಂದ ಸಂಭಳವಿಲ್ಲ ಅವರಿಗೆ ಕೊಡಿ.

**ಶ್ರೀ ಎಚ್ ಜಿ ಗೋವಿಂದೇಗೌಡ ;** ಕಾನೂನಿನಲ್ಲಿ ಅವಕಾಶವಿದ್ದರೆ ಅವರು ರೋಷ್ಟರ್ ಸಿಸ್ಟಮ್‌ನಂತೆ ಮಾಡಿದ್ದರೆ, ಅಪ್ರೂವಾಗಿದ್ದರೆ ಅದರೆ ಬಗ್ಗೆ ನೋಡಿ ಮಾಡುತ್ತೇವೆ

**ಡಾ॥ ಎಮ್ ಪಿ ನಾಡಗೌಡ :** ಮಾನ್ಯ ಸಭಾಪತಿವರೇ, ನಿನ್ನೆ ನಾನು ಮಾನ್ಯ ಸಚಿವರಿಗೆ ಒಂದಿ ವಿಷಯದ ಬಗ್ಗೆ ಹೇಳಿದೆ. ಬಿಜಾಪುರ ಜಿಲ್ಲೆಯಲ್ಲಿ ಗೌರವ ಶಿಕ್ಷಕರ ವಿಚಾರವಾಗಿ ಸುಪ್ರೀಂ ಕೋರ್ಟ್‌ನ್ಲಲಿ 1991ರಲ್ಲಿ ಆರ್ಡರ ಆಗಿದೆ. ನಾಲ್ಕು ವರ್ಷವಾದರೂ ಆರ್ಡರ್ ನೋಡಿ ಅದರ ಬಗ್ಗೆ ಡಿಪಾರ್ಟಮೆಂಟ್ ಆಕ್ಷನ್ ತೆಗೆದುಕೊಂಡಿಲ್ಲ. ಅದರ ಬಗ್ಗೆ ತಾವು ಹೇಳಬೇಕು.

**ಶ್ರೀ ಎಸ್ ಎಸ್ ಪುಜಾರಿ ;** ಅಪ್ರೂವಲ್ ಆಫ್ ಅಪಾಯಿಂಟ್ ಬಗ್ಗೆ ಏನಾದರೂ ಟೈಮ್ ಬಾಂಡ್ ಹಾಕಿ ಇಷ್ಟು ದಿವಸದ ಒಳಗೆ ಆಗಬೆಕು ಅಥವಾ

ರಿಜೆಕ್ಟ್ ಆಗಬೇಕು ಎನ್ನುವದನ್ನು ಹೇಳಬೇಕು ಎಂದು ನಾನು ಹೇಳಿದ್ದೆ. ಅದರ ಬಗ್ಗೆ ಮಾನ್ಯ ಸಚಿವರು ಏನೂ ಹೇಳಲಿಲ್ಲ.

**ಶ್ರೀ ಎಚ್ ಜಿ ಗೋವಿಂದೇಗೌಡ :** ಈಗಾಗಲೇ ನಾನು ಇಲಾಖೆಯ ಅಧಿಕಾರಿಗಳಿಗೆ ತಿಳಿಸಿದ್ದೇನೆ ಯಾವುದೇ ಬಂದರೂ ಸಹ ಹೆಚ್ಚು ದಿವಸ ಡಿಲೆ ಮಾಡದೇ ಇದು ಆಗುತ್ತದೆ ಅಥವಾ ಆಗುದಿಲ್ಲ ಎನ್ನುವುದನ್ನು ತಿಳಿಸಬೇಕು. ಹಾಗೂ ಆಗುದಿಲ್ಲ ಎಂದು ಇದ್ದರೆ ಅದಕ್ಕೆ ಕಾರಣವನ್ನು ಕೊಡಬೇಕು, ಆಗುತ್ತದೆ ಎಂದರೆ ಕೂಡಲೇ ಮಂಜೂರ ಮಾಡಬೇಕು ಎಂದು ಅದರ ಬಗ್ಗೆ ಆದೇಶ ಕೊಟ್ಟಿದ್ದೇವೆ. ಸೆಕ್ರೆಟರಿ–2 ಸಹ ಹೆಚ್ಚು ಉತ್ಸಾಹದಿಂದ ಕೆಲಸವನ್ನು ಮಾಡಿತ್ತಿದ್ದಾರೆ ಮುಂದೆ ಈ ರೀತಿ ತೊಂದರೆಯಾಗದ ಹಾಗೆ ನೊಡಿಕೊಳ್ಳುತ್ತೇವೆ. ಸುಪ್ರೀಂ ಕೋರ್ಟ ವಿಚಾರವಾಗಿ ಹೇಳುವುದಾದರೆ ಜಿಲ್ಲಾ ಪಂಚಾಯತಿಯವರು ಅಲ್ಲಲ್ಲಿ ಪಾಯಿಂಟ್ ಮಾಡಿಕೊಂಡಿದ್ದಾರೆ ಅದನ್ನು ಪರಿಶೀಲನೆ ಮಾಡಿ ಕೃಪಾಂಕ ಕೊಡಿ ಎಂದು ಹೇಳುತ್ತಿದ್ದರು. ಮೊದಲು ಕೃಪಾಂಕವನ್ನು 0.5 ಕೊಡುತ್ತಿದ್ದರು, ನಂತರ ಅದನ್ನು 2 ಮಾಡಿದರು. ನಮ್ಮ ಹೊಸ ಸರಕಾರ ಬಂದ ಮೇಲೆ ಮೂರು ಕೃಪಾಂಕಗಳನ್ನು ಕೊಟ್ಟುಬಿಟ್ಟು ಸಾಧ್ಯವಾದಷ್ಟು ಎಲ್ಲ ಉಪಾದ್ಯಾಯರುಗಳನ್ನು ನೇಮಕ ಮಾಡಿಕೊಳ್ಳುತಕ್ಕಂಥ ವ್ಯವಸ್ಥೆಯಾಗುತ್ತಿದೆ. 29 ವರ್ಷದ ಮೇಲ್ಪಟ್ಟವರಿಗೆ ಮತ್ತು ಬಾಕಿ ಎಲ್ಲರಿಗೂ ಇದರಿಂದ ಅನಕೂಲವಾಗುತ್ತದೆ. ಸುಪ್ರೀಂ ಕೋರ್ಟ ಆ ರೀತಿ ಆದೇಶ ಕೊಟ್ಟಿಲ್ಲ. ನಿಮ್ಮ ಸಲಹೆಯನ್ನು ನಾನು ಸ್ವೀಕಾರ ಮಾಡುತ್ತೇನೆ.

**ಡಾ॥ ಎಮ್ ಪಿ ನಾಡಗೌಡ :** ಸುಪ್ರೀಂ ಕೋರ್ಟ 1991–92ರಲ್ಲಿ ಬಂದಿದೆ ಇಲ್ಲಿಯವರೆಗೆ ಅದ್ನನ್ನು ಎಂಪ್ಲಾಯಮೆಂಟ್ ಮಾಡಿಲ್ಲ ಆರ್ಡರ್ ನಲ್ಲಿ ಏನಿದೆ ಅದನ್ನು ನೋಡಿ ಎಂಪ್ಲಾಯಮೆಂಟ್ ಮಾಡಿ. ನಾನು ಬೇರೆ ಕೇಳುತ್ತಾ ಇಲ್ಲ ಈ ಅಪಾಯಿಂಟ್‌ಮೆಂಟ್ ಜೊತೆಗೆ ಅದನ್ನು ಇನ್‌ಕ್ಲೂಡ್ ಮಾಡಿ

**ಎಚ್ ಜಿ ಗೋವಿಂದೇಗೌಡ :** ಅಪಾಯಿಂಟ್‌ಮೆಂಟ್‌ಗೆ ಈಗಾಗಲೇ ಕರೆದುದಾಗಿದೆ ಈಗಾಗಲೇ 18,20 ಸಾವಿರ ಉಪಾಧ್ಯಾಯರ ಹುದ್ದೆಗಳು ಖಾಲಿ ಇದೆ. ದಿನೇ ದಿನೇ ನಾವು ಒಂದೊಂದನ್ನೆ ಪೋಸ್ಟಫೋನ್ ಮಾಡುತ್ತಿದ್ದೇವೆ. ಇದಿ ಇಷ್ಟು ತಡವಾಗಬಾರದಿತ್ತು. ಆದರೆ ತಡವಾಗಿದೆ. ಈಗ ಅದರ ಬಗ್ಗೆ ಕೂಡಲೇ ಕ್ರಮ ತೆಗೆದುಕೊಂಡು ಒಂದು ತಿಂಗಳ ಒಳಗೆ ಅಪಾಯಿಂಟ್ ಆಗುತ್ತದೆ. ಮಾನ್ಯ ಸದಸ್ಯರಾದ ಹೊರಟ್ಟಿಯವರು ಒಂದು ವಿಚಾರ ಹೇಳಿದರು ತರಳುಬಾಳು ಜಗದ್ಗುರುಗಳು ನಡೆಸುತ್ತಿರುವ ಶಿಕ್ಷಣ ಸಂಸ್ಥೆಗಳಲ್ಲಿನ ಸಿಬ್ಬಂದಿ ನೇಮಕಾತೆಯ ಅನುಮೋದನೆಯಲ್ಲಿ ಸುಮಾರು ಒಂದು ಲಕ್ಷ ಇಪ್ಪತ್ತೆಂಟ್ಟು ಸಾವಿರ ರೂಪಾಯಿಗಳ

ಲಂಚ ನೀಡಿ ಯಾರ್ಯಾರಿಗೆ ಕೊಟ್ಟಿದ್ದೆವೆ ಎಂಬುದರ ಬಗ್ಗೆ ಕಂಪ್ಯೂಟರ್‌ನಲ್ಲಿ ದಾಖಲಾತಿ ಹೊಂದಿದ್ದಾರೆ ಎಂದು ಆರೋಪಿಸುತ್ತಾರೆ ಸಿಬ್ಬಂದಿ ನೇಮಕಾತಿ ಅನುಮೋದನೆಗಾಗಿ ಈಗಾಗಲೇ ಕ್ರಮ ಕೈಗೊಂಡಿದ್ದು ಶ್ರೀ ತರಳಬಾಳು ಸ್ವಾಮಿಜಿಯವರು ತಮ್ಮ ಸಂತಸವನ್ನು ವ್ಯಕ್ತಪಡಿಸಿದ್ದಾರೆ. ಇದು ನನ್ನ ಅವಗಾಹನೆಗೆ ಒಂದು ಇಲಾಖೆಗಳಿಗೆ ಸದ್ಯ ಏನಾಗಿದೆ ಜಾಗ್ರತೆ ಹೋಗಿ ನೋಡಿ ಎಂದು ಹೇಳಿದೆ. ಈ ದೇಶದಲ್ಲಿ ದುಡ್ಡು ಕೊಟ್ಟಿದ್ದೇವೆ. ಎಂದು ಹೇಳತಕ್ಕಂಥ ಜನ ಬೇಕಾದಷ್ಟು ಇದ್ದಾರೆ. ಕೊಡದಿದ್ದರೂ ಕೊಟ್ಟಿದ್ದೆವೆ ಎಂದು ಹೇಳುತ್ತಾರೆ.

ಇನ್ನೊಂದು ವ್ಯವಸ್ಥೆ ಅವ್ಯವಸ್ಥೆಯಾಗಿದೆ ಇದನ್ನು ನೆನಪಿಸಿಕೊಂಡರೆ ಮನಸ್ಸಿನಲ್ಲಿ ದುಃಖವಾಗುತ್ತದೆ. ಮಾತನಾಡಿದರೆ ದುಡ್ಡುಕೊಟ್ಟಿದ್ದೇವೆ. ಇಂತಹವರಿಗೆ ಕೊಟ್ಟಿದ್ದೇವೆ. ಎಂದು ರಾಜ್ಯದ ಜನತೆ ಹೇಳುತ್ತಾರಲ್ಲ. ಅದನ್ನು ರೈಟಿಂಗ್‌ನಲ್ಲಿ ಕೊಟ್ಟಿದ್ದೆವೆ ಎಂದು ಹೇಳುತ್ತಾರಾ? ಸ್ವಾಮಿಜಿಯವರ ಬಗ್ಗೆ ಎರೆಡು ಮಾತಿಲ್ಲ ಅವರು ನಮ್ಮ ಮುಂದೆ ನಿನ್ನೆ ದಿವಸ ಆಗಿದೆ ಎಂದು ಹೇಳಿದರು ಮಾನ್ಯ ಸ್ನೇಹಿತರಿಗೆ ಗೊತ್ತಿರಲಿಲ್ಲ. ಒಂದು ಲಕ್ಷ 20 ಸಾವಿರ ರೂಪಾಯಿ ಕೊಟ್ಟಿದ್ದೆವೆ ಎಂದು ಎನೋ ಹೇಳುತ್ತಾರೆ, ಅದಕ್ಕೆ ಜಾಗೃತಾ ದಳ ನಮ್ಮಲ್ಲಿದೆ. ಅವರನ್ನು ಸ್ವಾಮಿಜಿ ಹತ್ತಿರ ಕಳುಹಿಸಿ ಯಾರ್ಯಾರು ದುಡ್ಡು ತೆಗೆದುಕೊಂಡಿದ್ದಾರೆ ಅವರ ಮೇಲೆ ತೀಕ್ಷ್ಣವಾದಂತಹ ಕ್ರಮ ತೆಗೆದುಕೊಳ್ಳುತ್ತೇವೆ ಅದರ ಬಗ್ಗೆ  ನಾನು ಯಾವುದೇ ರೀತಿಯ ಹಿಂದೇಟು ಹಾಕುವುದಿಲ್ಲ.

**ಶ್ರೀ ಮಹದೇವ ಬಣಕಾರ :** ಮಾನ್ಯ ಸಭಾಪತಿವರೇ ಇಲ್ಲಿ ಸ್ವಾಮಿಜಿವರು ಒಂದು ಲಕ್ಷ 28 ಸಾವಿರ ರೂಪಾಯಿ ಲಂಚ ಕೊಟ್ಟಿದ್ದೇವೆ ಎಂದು ಹೇಳಲಿಲ್ಲ. ಕೊಟ್ಟಿರುವುದು ಅವರಲ್ಲ ಅವರ ಮಟ್ಟದ ಕಾರಬಾರಿಗಳು ಈ ಕೆಲಸದಲ್ಲಿ ಓಡಾಡುವಾಗ ಊಟಕ್ಕೆ ಇಷ್ಟು ಅಟೋಗೆ ಇಷ್ಟು ಮತ್ತು ಲಾಡ್ಜಿಂಗ್‌ಗೆ ಇಷ್ಟು ಎಂದು ಬರೆಯುತ್ತಾರಲ್ಲ ಅಲ್ಲಿ ಲಂಚ ಕೊಟ್ಟಿದ್ದು ಇಷ್ಟು ಎಂದು ಬರೆದಿದ್ದಾರೆ. ಯಾರಿಗೆ ಏನು ಎನ್ನುವುದು ಸ್ವಾಮಿಜಿಗೆ ಗೊತ್ತಿಲ್ಲ. ಇದನ್ನು ಅವರು ಸಾದಿಲ್ವಾರ್ ಖರ್ಚ ಏನಿದೆ ಅದರಡಿಯಲ್ಲಿ ಕಂಪ್ಯೂಟರನಲ್ಲಿ ತೋರಿಸಿದ್ದಾರೆ ಆದ್ದರಿಂದ ನೇರವಾಗಿ ಸ್ವಾಮಿಜಿಗಳು ಯಾರಿಗೂ ಲಂಚ ಕೊಟ್ಟಿಲ್ಲ ಈ ತರಹದ ಕಲ್ಪನೆ ಮಾಡಿಕೊಳ್ಳಬೇಕಾದ್ದು ಇಲ್ಲ. ಕೊಟ್ಟಿರುವುದು ನಿಜ ಯಾರಿಗೆ ಏನು ಎನ್ನುವುದರ ಬಗ್ಗೆ ರಸೀದಿ ಯಾರಿಗೂ ಕೊಟ್ಟಿಲ್ಲ.

**ಶ್ರೀ ಬಿ ಎಸ್ ಹೊರಟ್ಟಿ :** ಮಾನ್ಯ ಸಚಿವರಿಗೆ ಕಂಪ್ಯೂಟರನಲ್ಲಿ ಇರುವುದನ್ನು ಕೊಡಿಸುತ್ತೇನೆ ಯಾರಿಗೆ ಕೊಟ್ಟರು, ಎಷ್ಟೊತ್ತಿಗೆ ಕೊಟ್ಟರು, ಯಾವಾಗ ಕೊಟ್ಟರು, ಯಾರ ಕೈಯಲ್ಲಿ ಕೊಟ್ಟರು ಎಲ್ಲ ಕಂಪ್ಯೂಟರನಲ್ಲಿದೆ. ತಮ್ಮ ಕಡೆ ಅವರು

**ವಿಷಯ:** ರಾಜ್ಯದಲ್ಲಿ ಕನ್ನಡ ಚಲನಚಿತ್ರಗಳಿಗೆ ನೀಡುತ್ತಿರುವ ಸಬ್ಸಿಡಿ ಹಾಗೂ ಕಂಠೀರವ ಸ್ಟುಡಿಯೋ, ಫಿಲಂ ಡೆವಲಪ್‌ಮೆಂಟ ಕಾರ್ಪೋರೇಷನ್ನುಗಳನ್ನು ಒಟ್ಟುಗೂಡಿಸುವ ಬಗ್ಗೆ.

**ಶ್ರೀ ವಿ. ಆರ್. ಸುದರ್ಶನ್ (ವಿಧಾನ ಸಭಾ ಕ್ಷೇತ್ರ) :** ಮಾನ್ಯ ಸಭಾಪತಿಯವರೇ, ನಮ್ಮದೂ ಕೂಡ ಪ್ರೋಟೆಸ್ಟ ಇದೆ. ಆದರೆ ನನ್ನ 330ರ ಮೇರೆಗೆ ವಿಷಯ ಇರುವುದರಿಂದ ನಾನು ವಾಕೌಟ್ ಮಾಡುವುದಿಲ್ಲ. ಈಗ ನಾವು ಆಲಮಟ್ಟಿಯಿಂದ ಚಿತ್ರರಂಗಕ್ಕೆ ಬರಬೇಕಾಗಿದೆ.

**ಸಭಾಪತಿಗಳು:** ಸದನದಲ್ಲಿ ಚರ್ಚೆ ನಡೆಯುತ್ತಿರುವಾಗ ಸಚಿವರಿಗೆ ಬೇರೆಯವರು ಇಂಟರ್ಫಿಯರ್ ಮಾಡುವುದು ಸರಿಯಲ್ಲ.

**ಶ್ರಿ ವಿ. ಆರ್. ಸುದರ್ಶನ್:** ಅಭಿನಂದನೆಗಳು. ಬೆಂಗಳೂರಿನ ತುಮಕೂರು ರಸ್ತೆಯಲ್ಲಿ ಒಂದು ಉತ್ತಮ ಜಾಗದಲ್ಲಿ 18–3–66ರಲ್ಲಿ ಕಂಠೀರವ ಸ್ಟುಡಿಯೋ ಪ್ರಾಂರಭವಾಯಿತು. ಅದರ ಮೇಲೆ 26–3–69ರಲ್ಲಿ 12 ಲಕ್ಷ ಬಂಡವಾಳ ಹಾಕಲಾಯಿತು. ಪ್ರಾರಂಭದಲ್ಲಿ ಹೇಳಿಕೊಳ್ಳುವಂತಹ ಅನುಕೂಲಗಳು ಇರಲಿಲ್ಲ. 1974ರಲ್ಲಿ ಅದು ಸರ್ಕಾರಿ ಸ್ವಾಮ್ಯಕ್ಕೊಳಪಟ್ಟ ಸಂಸ್ಥೆಯಾಯಿತು.

**ಶ್ರೀ ಟಿ ಕೆಂಪಮ್ಮ (ವಿಧಾನ ಸಭಾ ಕ್ಷೇತ್ರ) :** ಮಾನ್ಯ ಸಭಾಪತಿಗಳೇ, ಈಗಾಗಲೆ ಸಾಕಷ್ಟು ಈ ಚಲನಚಿತ್ರಗಳನ್ನು ಏನು ಪ್ರೋಡ್ಯೂಸ್ ಮಾಡುತ್ತಾರೆ, ಅವಕ್ಕೆ ಸಬ್ಸಿಡಿ ಕೊಡುವ ವಿಚಾರದಲ್ಲಿ ಮಾತನಾಡಿದ್ದಾರೆ. ನಾನು ಸಹ ಈ ಸಂದರ್ಭದಲ್ಲಿ ಒಂದು ಸಲಹೆ ಕೊಡುವುದಕ್ಕೆ ಇಚ್ಛೆಪಡುತ್ತೇನೆ. ಅದೇನೆಂದರೆ, ಲಕ್ಷಾಂತರ ರೂಪಾಯಿ ಇನ್ವೆಸ್ಟ ಮಾಡಿ ಚಿತ್ರಗಳನ್ನು ತೆಗೆಯುತ್ತಾರೆ. ಉತ್ತಮ ಗುಣಮಟ್ಟದ ಚಿತ್ರಗಳನ್ನು ತೆಗೆಯಬೇಕು. ಪ್ರೊಡ್ಯೂಸರ್ಸ ಯಾವಾಗಲೂ ಕಳಪೆ ಮಟ್ಟದ ಚಿತ್ರಗಳನ್ನು ತೆಗೆಯಬೇಕೆಂದು ಲಕ್ಷಾಂತರ ರೂಪಾಯಿಗಳನ್ನು ಇನ್ವೆಸ್ಟ ಮಾಡುವುದಿಲ್ಲ. ಒಳ್ಳೆಯ ಚಿತ್ರಗಳನ್ನು ಒಳ್ಳೆಯ ಮಾರಲ್ ಇರತಕ್ಕಂತ ಚಿತ್ರಗಳನ್ನೂ ಪ್ರೊಡ್ಯೂಸರ್ಸ ತೆಗೆಯುತ್ತಾರೆ. ಇತ್ತೀಚೆಗೆ ಕೇಬಲ್ ಟಿವಿ ಮೂಲಕ ಅನೇಕ ಚಿತ್ರಗಳನ್ನು ಪ್ರದರ್ಶನ ಮಾಡಿ ಅನೇಕ ಸಾರ್ವಜನಿಕರು ಚಿತ್ರ ಮಂದಿರಕ್ಕೆ ಹೋಗಿ ಚಿತ್ರಗಳನ್ನು ನೋಡುವ ಅವಕಾಶವೇ ಸಿಕ್ಕುವುದಿಲ್ಲ. ಅದಕ್ಕೋಸ್ಕರ ಈ ಕೇಬಲ್ ಆಪರೇಟರ್ಸ ಮೂಲಕ ಚಿತ್ರ ಪ್ರದರ್ಶನವನ್ನು ತಕ್ಕಮಟ್ಟಿಗೆ ಸ್ಥಗಿತಗೋಳಿಸಿದರೆ ಒಳ್ಳೆಯದು ಏಕೆಂದರೆ ಕೇಬಲ್ ಟಿವಿಗಳಲ್ಲಿ ನಮ್ಮ ಯುವಕರಿಗೆ ಸಾಕಷ್ಟು ಮಾಹಿತಿಗಳನ್ನು ಕೊಟ್ಟು ಅವರು ಅಡ್ಡ ದಾರಿಗೆ ಹೋಗುವಂತಹ ಟ.ವಿ. ಸುದ್ದಿಗಳನ್ನು ಮಾಡಿದ್ದಾರೆ. ಅದನ್ನು ಕೂಡ ತಮ್ಮ ಮೂಲಕ ಸರ್ಕಾರಕ್ಕೆ

ಒತ್ತಾಯಿಸುತ್ತೀದ್ದೇನೆ, ಏನು ಕೇಬಲ್ ಟಿವಿ ಗಳು ಇದ್ದಾವೆ ಅದನ್ನು ಸಾಕಷ್ಟು ಮಟ್ಟಿಗೆ ಸ್ಥಗಿತಗೊಳಿಸಬೇಕು ಎಂದು ತಮ್ಮ ಮೂಲಕ ಸರ್ಕಾರವನ್ನು ಕೋರುತ್ತೇನೆ.

**ಡಾ॥ ಮಹದೇವ ಬಣಕಾರ :** ಮಾನ್ಯ ಸಭಾಪತಿಯವರೆ, ಸಿನೆಮಾ ಮಾದ್ಯಮ ಅಥವ ನಾಟಕದ ಮಾದ್ಯಮ ಯಾವುದೇ ಇರಲಿ ಜನಸಾಮನ್ಯರನ್ನು ತಿದ್ದುವುದಕ್ಕೆ ಸಿನೆಮಾ ಮಾಧ್ಯದಷ್ಟು ಪರಿಣಾಮಕಾರಿದಂತಹ ಪ್ರಯೋಗ ಯಾವುದೂ ಇಲ್ಲ. ಇದನ್ನು ಎಲ್ಲರು ಒಪ್ಪಿಕೊಳ್ಳುವ ಮಾತು. ಆದರೆ ಇವತ್ತಿನ ಪರಿಸ್ಥಿತಿಯಲ್ಲಿ ಏನಾಗಿದೆ ಎಂದರೆ ಸಿನೆಮಾಗಳನ್ನು ನೋಡಿ ದಾರಿ ತಪ್ಪುವವರೇ ಹೆಚ್ಚು. ಅಲ್ಲ ಅನೂಕರಣೆ ಯಾವ ಮಟ್ಟಕ್ಕೆ ಬಂದಿದೆ ಅಲ್ಲಿ ಯಾರಾದರೂ ಒಬ್ಬ ಹಿರೋಯಿನ್ ಈ ಬ್ಲೌಸಿಗೆ ನಾಲ್ಕೈದು ಎತ್ತರದಲ್ಲಿ ಏನಾದರು ಒಂದು ಹೂವು ಅಥವಾ ಏನಾದರು ಕಟ್ಟಿಕೊಂಡಿದ್ದರೆ ಮಾರನೆ ದಿವಸ ಅಂತಹದೆ ಹೊಲಿಸುತ್ತಾರೆ. ಈಗ ಮುಂದೆ ತಲೆ ಕೂದಲು ಕಟ್ ಮಾಡುವುದು ಬಂದಿದೆ ಮಾನ್ಯ ಸಭಾಪತಿಯವರೆ, ಹುಡುಗರಿಗಿಂತಲೂ ಸ್ವಲ್ಪ ಹೆಚ್ಚು ಕಡಿಮೆ ಮುದುಕರು ಕೂಡ ಇವತ್ತು ಅದೇ ಮಟ್ಟಕ್ಕೆ ಬಂದಿದ್ದಾರೆ. ಇದು ಏನು ತೋರಿಸುತ್ತದೆ ಎಂದರೆ

**ಶ್ರೀಮತಿ ರಾಣಿ ಸತೀಶ್:** ಬಣಕಾರ್ ಅವರು ಯಾವಾಗ ನೋಡಿದರು? ಸಿನಿಮಾವನ್ನ..

**ಡಾ॥ ಮಹದೇವ ಬಣಕಾರ್:** ನಾನು ಸಿನೆಮಾ ಬರಹ ಬರೆಯುವನು, ನಾಟಕದಲ್ಲಿ ಬರೆಯುವನು. ಸಾಹಿತಿ ಆಗಿ ಅದರ ಅಬ್ಸರ್ವೇಷನ್ ಬಹಳ ಕೀನ್ ಇರುತ್ತದೆ.

**ಡಾ॥ ಎಂ. ಪಿ. ನಾಗೇಗೌಡ:** ಆ ಸಾಹಿತ್ಯದೋಳಗೆ ಕಟ್ಟೂ ಬರೆದಿರುತ್ತೀರೇನು?

**ಡಾ॥ ಮಹದೇವ್ ಬಣಕಾರ :** ಇಲ್ಲ ಅವರೇ ಮಾಡಕೊಳ್ಳುತ್ತಾರೆ. ಬರುವ ಹಾಗೆ ಮಾಡಿರುತ್ತೇನೆ ಅಷ್ಟೇ ನೂರನೆಯ ಸಿನೇಮಾ ಪ್ರಯೋಗ ಆದಾಗ ನನ್ನನ್ನು ಕರೆಸಿದ್ದರು ಇದನ್ನು ನಾನು ಅವತ್ತು ಹೆಳಿದ್ದೆ. ಪ್ರೊಡ್ಯೂಸರ್ಸ ದುಡ್ಡು ಹಾಕುವರು ದುಡ್ಡು ವಾಪಸ್ ಬರಬೇಕು ಎನ್ನುವ ದೃಷ್ಟಿ ಮಾತ್ರ ಅವರದ್ದು ಇರುತ್ತದೆ. ಅವರಿಗೆ ಶೀಲ ಅಶ್ಲೀಲದ ಪ್ರಶ್ನೆ ಇಲ್ಲವೇ ಇಲ್ಲ. ಡಿಸ್ಟ್ರಿಬ್ಯೂಟರ್ಸ್ ಅಷ್ಟೇನೆ ಕೊಂಡುಕೊಂಡಿರುತ್ತೇವೆ ನಮ್ಮ ದುಡ್ಡು ನಮಗೆಬರಬೇಕು ಎಂದು ತಿಳಿದುಕೊಂಡಿರುತ್ತಾರೆ. ಆದರೆ ಈ ಚಲನಚಿತ್ರದಲ್ಲಿ ಬಾಗವಹಿಸತಕ್ಕ ಕಲಾವಿದರು ಇದ್ದಾರಲ್ಲ ಇವರು ಜನಸಾಮನ್ಯರನ್ನು ನರಕಕ್ಕು ಸ್ವರ್ಗಕ್ಕು ಒಯ್ಯುವರು ಇವರೇ. ಇವರ ಮೇಲೆ ಸಮಾಜ ತಿದ್ದತಕ್ಕಂಥ ಹೊಣೆ ಬಹಳ ಇದೆ. ಆದ್ದರಿಂದ ಹೆಣ್ಣುಮಕ್ಕಳನ್ನು

ಬಹಿರಂಗವಾಗಿ ತೋರಿಸುವಂತಹ ಕೆಲಸವಾಗಲೀ, ಮಾನ ಮರ್ಯಾದೆಗೆ ಚ್ಯುತಿ ಬರುವ ರೀತಿಯಲ್ಲಿ ನಡೆದುಕೊಳ್ಳುವುದಾಗಲೀ, ಅಸಹ್ಯ ಅಸಹ್ಯ ಡ್ರೆಸ್‌ಗಳನ್ನು ಮಾಡುವುದಾಗಲೇ ಇದನ್ನು ಪ್ರೊಡ್ಯೂಸರ್ ಹೇಳುದಿಲ್ಲ. ಇದನ್ನು ಇವರೇ ಕಲ್ಪಿಸಿಕೊಳ್ಳುತ್ತಾರೆ. ಆದ್ದರಿಂದ ಆ ಅನುಕರಣೆ, ಆ ಪ್ರಯೋಗ ದಯವಿಟ್ಟು ಇವರು ಬಿಟ್ಟು ಬಿಡಬೇಕು. ಮಾನ್ಯ ಸಿದ್ದಲಿಂಗಯ್ಯನವರು ಬಹಳ ವ್ಯಥೆಯಿಂದ ಹೇಳಿದರು ಪ್ರೇಮವನ್ನು ತೋರಿಸುವುದಕ್ಕೆ ಕಣ್ಣು ಮತ್ತು ಮೂಗು ಎಂದು. ಅದು ನಮ್ಮ ಕಾಲದಲ್ಲಿ ಈಗ ಉಗುರು, ಹಲ್ಲು ಬಹಳ ಅವಶ್ಯವಾಗಿ ಬೇಕು ಎಂದರು. ಅದು ಈಗಿನ ಕಾಲ. ಈಗಿನವರು ಬಹಳ ಪ್ರಾಕ್ಟಿಕಲ್ ಜನ. ಆದ್ದರಿಂದ ನಾವು ಅದನ್ನು ನೋಡಿ ಅಸಹ್ಯ ಪಡಬೇಕಾದ್ದು ಏನೂ ಇಲ್ಲ.

**ಡಾ॥ ಶ್ರೀ ಮರಿಲಿಂಗೇಗೌಡ:** ಯಾರನ್ನು ಅಪ್ರಿಷಿಯೇಟ್ ಮಾಡೋಣ, ಹಿಂದಿನವರನ್ನು ಮಾಡೋಣವೋ, ಈಗಿನವರನ್ನು ಮಾಡೋಣವೋ.

**ಡಾ॥ ಮಹದೇವ ಬಣಕಾರ:** ನಮ್ಮದು ಮುಗಿದು ಹೋಗಿದೆ, ಈಗ ನೋಡುವ ಪ್ರಶ್ನೆಯೇ ಇಲ್ಲ.

**ಶ್ರೀಮತಿ ಸರಿತಾ ಕುಮಾಕರ್ ದೇಸಾಯಿ:** ಸದಭಿರುಚಿ ಪ್ರೇಕ್ಷಕರ ನಿರ್ಮಾಣ ಕೂಡ ಗುರುತರ ಹೊಣೆಗಾರಿಕೆ ಇದೆ ಎನ್ನುವುದನ್ನು ನಮ್ಮ ಚಿತ್ರ ಸಾಹಿತಿಯವರೂ ಆದಂತಹ ಮಾನ್ಯ ಬಣಕಾರ್ ಅವರು ತಿಳಿದುಕೊಳ್ಳಬೇಕು.

**ಡಾ॥ ಮಹದೇವ ಬಣಕಾರ್:** ಆದ್ದರಿಂದ ಸಬ್ಸಿಡಿ ವಿಷಯದಲ್ಲಿಯೂ ಅಷ್ಟೇ. ಸಬ್ಸಿಡಿ ಇವತ್ತು ಅವರು ರೀಮೇಕ್ ಫಿಲಂಗಳಿಗೆ ಕೊಡುವುದಿಲ್ಲ. ಅದು ಯಾವ ಪಿಕ್ಚರಗಳಿಗೆ ಸಬ್ಸಿಡಿ ಕೊಡಬೇಕಾದರೆ ಆ ಗುಣಮಟ್ಟ ಎಂದು ಹೇಳುತ್ತಾರಲ್ಲ, ಗುಣಮಟ್ಟ ಯಾವುದು.. ಆಧರ್ಶವಾಗಿ ಇದ್ದಂತಹ ಒಂದು ಫಿಲಂ ಗೆ, ಒಂದು ಐದು ಪೈಸೆಯೂ ಬರುವುದಿಲ್ಲ, ಅದು ಡಬ್ಬಿಯಿಂದ ಹೊರಗೂ ಬರುವುದಿಲ್ಲ. ಇವರೇನೋ ಹೇಳಿದರಲ್ಲ ಉಗುರು, ಹಲ್ಲು ಅವು ಹಾಕಿದ ದುಡ್ಡಿಗಿಂತ ಡಬಲ್ ಬರುತ್ತದೆ. ಆದ್ದರಿಂದ ಗುಣಮಟ್ಟ ಅಳೆಯುವುದೂ ಕೂಡ ಬಹಳ ಕಠಿಣವಾದಂತಹ ಕೆಲಸ. ಅದನ್ನು ನಮ್ಮ ಮಂತ್ರಿಗಳಿಗೇ ಬಿಟ್ಟುಬಿಡೋಣ. ನಮ್ಮ ಸಲಹೆ ಇಷ್ಟು ಹೇಳುತ್ತೇನೆ.

**ಶ್ರೀ ಎಮ. ಸಿ. ನಾಣಯ್ಯ (ಸಭಾನಾಯಕರಯ):** ಮಾನ್ಯ ಸಭಾಪತಿಯವರೆ, ಮಿತ್ರರಾಗಿರತಕ್ಕಂಥ ಸುದರ್ಶನ್ ಅವರು ಎತ್ತಿರತಕ್ಕಂಥ ವಿಚಾರ ವ್ಯಾಪಕವಾಗಿರತಕ್ಕಂಥಹ ಚರ್ಚೆಗೆ ಅವಕಾಶವನ್ನು ಮಾಡಿ ಸ್ವಲ್ಪ ಮಟ್ಟಿಗೆ ಎಲ್ಲ

ಕಡೆಯೂ ಎಲ್ಲರೂ ಚರ್ಚೆಮಾಡಿದರು. ಸ್ವಲ್ಪ ವ್ಯಂಗ್ಯವೂ ಆಯಿತು, ಹಾಸ್ಯವೂ ಆಯಿತು ಮತ್ತು ಅದರ ಒಳ ಹೊಕ್ಕು ನೋಡಿರತಕ್ಕದ್ದು, ಕಣ್ಣು, ಮುಖ, ಕೈ, ಕಾಲು, ಉಗುರು, ಇವೆಲ್ಲ ವ್ಯಾಪಕವಾಗಿ ಚರ್ಚೆಗೆ ಬಂತು. ಮಾನ್ಯ ಸಭಾಪತಿಯವರೇ ಎತ್ತಿರತಕ್ಕಂಥ ಎಲ್ಲಾ ವಿಚಾರಗಳಿಗೂ ನಾನು ಕೂಲಂಕೂಷವಾಗಿ ಕೆಲವು ಉತ್ತರಗಳನ್ನು ಹೇಳಿ ಬಿಡುತ್ತೇನೆ. ಕನ್ನಡ ಚಲನ ಚಿತ್ರಗಳಿಗೆ ನೀಡುತ್ತಿರುವ ನೆರವು ತಮಗೆ ಈಗಾಗಲೆ ಗೊತ್ತಿದೆ. ಒಂದು ಸಹಾಯ  ಧನವನ್ನು ಕೊಡುತ್ತಿದ್ದೆವೆ, ಮನರಂಜನಾ ತೆರಿಗೆ ವಿನಾಯಿತಿ ಕೊಡುತ್ತಿದ್ದೆವೆ. ಪುಟ್ಟಣ್ಣಕಣಗಾಲ್ ಹಾಗೂ ಡಾ॥ ರಾಜ್ ಕುಮಾರ ಪ್ರಶಸ್ತಿ, ಸಧಬಿರುಚಿಯ ಚಿತ್ರಗಳನ್ನು ಪ್ರೋತ್ಸಾಹಿಸಲು ಚಲನಚಿತ್ರ ಅಕಾಡೆಮಿಯನ್ನು ಸ್ಥಾಪನೆ ಮಾಡಿದ್ದೇವೆ. ಮತ್ತು ಕಂಠೀರವ ಮತ್ತು ಚಲನಚಿತ್ರ ಅಭಿವೃದ್ಧಿ ನಿಗಮವನ್ನು ಒಂದುಗೂಡಿಸುವ ಬಗ್ಗೆ, ಈ ಎರಡು ಸಂಸ್ಥೆಗಳೂ ಸರ್ಕಾರದ ಜಾಯಿಂಟ್ ವೆಂಚರನಲ್ಲಿದೆ. ಇದರಲ್ಲಿ ಪ್ರೈವೇಟ್ ಶೇರ್ ಹೋಲ್ಡಿಂಗ್ಸ ಕೂಡ ಇದೆ. ಇದರ ಬಗ್ಗೆ ನಾನು ಈಗಾಗಲೇ ಚಿಂತನೆ ಮಾಡುತ್ತಿದ್ದೆನೆ ಮತ್ತು ಸಹಾಯ ಧನ ನೆರವಿನ ದುರುಪಯೋಗದ ವಿಚಾರವನ್ನು ಹೇಳಿದ್ದಾರೆ. ಅದು ನನ್ನ ಗಮನಕ್ಕೆ ಬಂದಿದೆ. ಇದರಲ್ಲಿ ಬಹಳ ಪ್ರಾಮುಖ್ಯವಾಗಿ ಹೇಳಬೇಕಾಗಿರತಕ್ಕದ್ದು ನಾನು ಈ ಅಧಿಕಾರವನ್ನು ವಹಿಸಿ ಅದರ ಮೇಲೆ ಮೊದಲನೆಯದಾಗಿ ನನ್ನ ಗಮನಕ್ಕೆ ಬಂದಿರತಕ್ಕದ್ದು ಈ ಕಂಠೀರವ ಸ್ಟುಡಿಯೋ ಮತ್ತು ನಮ್ಮ ಚಲನಚಿತ್ರ ಅಭಿವೃದ್ಧಿ ಮಂಡಳಿ ವಿಚಾರ. ಇವೆರಡೂ ಕಂಪನೀಸ್ ಆಕ್ಟನಲ್ಲಿ ರಿಜಿಸ್ಟೆರ್ ಆಗಿರತಕ್ಕಂಥ ಸಂಸ್ಥೆಗಳು. ನಮ್ಮ ಒಟ್ಟಾರೆ ಸುಮಾರು 76 ಪಬ್ಲಿಕ್ ಸೆಕ್ಟಾರ್ ಅಂಡರ್‌ಟೇಕಿಂಗಳಲ್ಲಿ ಇವೂ ಎರಡು. ಬಹುಶಃ ಇವರ ಹಣಕಾಸಿನ ಪರಿಸ್ಥಿತಿ ಮತ್ತು ನಡೆದುಕೊಂಡು ಬಂದ ದಾರಿಯನ್ನು ಎಲ್ಲ ನೋಡಿ ಆದ ಮೇಲೆ ಮೋದಲು ನನ್ನ ಗಮಮನಕ್ಕೆ ಬಂದಿದ್ದು ಇವೆರಡನ್ನೂ ಕೂಡಲೇ ಮುಚ್ಚಬೇಕು ಎನ್ನತಕ್ಕದ್ದು. ಕೂಡಲೇ ಮುಚ್ಚಬೇಕು ಎಂದು ನಾನು ತೀರ್ಮಾನ ಮಾಡಿದೆ. ಕಡೆಗೆ ಇದರ ಬಗ್ಗೆ ಒಂದು  ಮೀಟಿಂಗ್ ಎಲ್ಲ ಮಾಡಿ ಆದ ಮೇಲೆ ನಮ್ಮ ಅಧಿಕಾರಿಗಳು ಬಂದರು ಎಲ್ಲರುಬಂದರು. ಇಲ್ಲ ನಮಗೆ ಒಂದು ವರ್ಷ ಅವಕಾಶವನ್ನು ಕೊಡಿ. ಏನಾದರು ಮಾಡಿ ಇದನ್ನು ಪುನಶ್ಚೇತನ ಮಾಡಲಿಕ್ಕೆ ಇರತಕ್ಕದ್ದು ಮತ್ತು ಯಾವ ಉದ್ದೇಶಕ್ಕೋಸ್ಕರ ಇದನ್ನು ಕಟ್ಟಿದ್ದಾರೆ, ಆ ಉದ್ದೇಶ ನೆರವೇರಿಸುತ್ತ, ನಾವು ಸ್ವಲ್ಪ ಮಟ್ಟಿಗೆ ಪ್ರಯತ್ನವನ್ನು ಪಡುತ್ತೆವೆ ಎಂದರು. ಅವರು ಹೇಳಿ ಆದ ಮೇಲೆ ಒಂದು ವರ್ಷ ಸಮಯ ಕೊಟ್ಟಿದ್ದು ನಿಜ. ಸಮಯ ಕೊಟ್ಟಾದ ಮೇಲೆ ಇವತ್ತು ಚಲನಚಿತ್ರ ಅಭಿವೃದ್ಧಿ ಮಂಡಳಿ ಹಿಂದೆ ಯಾವ ಉದ್ದೇಶಕ್ಕೋಸ್ಕರ ಒಂದುಕಾಲದಲ್ಲಿ ಸ್ಥಾಪನೆ ಆಗಿತ್ತು ಆ ಉದ್ದೇಶವನ್ನು ಇವತ್ತು ಸಂಪೂರ್ಣವಾಗಿ ನೆರವೇರಿಸಲಿಕ್ಕೆ ಆಗಲಿಲ್ಲ. ಒಂದು

ಕಾಲದಲ್ಲಿ ಥಿಯೇಟರನ್ನು ಕಟ್ಟಬೇಕಾಗುತ್ತದೆಮತ್ತು ನಾವು ಕ್ಯಾಮರಾಗಳನ್ನು ಬಾಡಿಗೆಗೆ ಕೊಡಬೇಕಾಗಿರತಕ್ಕದ್ದು ಲೈಟುಗಳನ್ನು ಬಾಡಿಗೆಗೆ ಕೊಡಬೇಕಾಗಿರತಕ್ಕದ್ದು ಒಂದು ಕಾಲವಿತ್ತು. ಈಗ ಬಹುಶಃ ಅದೆಲ್ಲಾ ಬಹಳ ಹಳೆಯದಾಗಿ ಬಿಟ್ಟಿದೆ. ಸರ್ಕಾರದವತಿಯಿಂದ ನಾವೂ ಕ್ಯಾಮರಾ ಬಾಡಿಗೆಗೆ ಕೊಡಬೇಕು ಮತ್ತು ಲೈಟಿಂಗ್ ಬಾಡಿಗೆಗೆ ಕೊಡಿ ಎಂದು ಹೇಳುತ್ತಿರತಕ್ಕದ್ದೆಲ್ಲಾ ಇವತ್ತು ಅಪ್ರಸ್ತುತ. ಈ ಕೆಲಸವನ್ನು ಈ ಉದ್ಯಮದಲ್ಲಿ ಯಾರು ಇರುತ್ತಾರೆ, ಅವರೇ ಇದನ್ನು ಮಾಡಿಕೊಂಡು ಹೋಗಬೇಕಾಗಿದೆ.

**ಡಾ॥ ಮಹದೇವ ಬಣಕಾರ್:** ಮಾನ್ಯ ಸಭಾಪತಿಯವರೇ ಮಾನ್ಯ ಬುದ್ದಿಯವರು ಮಾತನಾಡುವಾಗ ಮಾಡಿಯೇ ತೀರುತ್ತೇವೆನ್ನುವ ಗಂಡು ಭಾಷೆಯಲ್ಲಿ ಹೇಳಿ ಎಂದರೆ, ನಂತರ ಮಾನ್ಯ ಮರಿಲಿಂಗೇಗೌಡರು ಹೇಳುವಾಗ ಗಡಸು ಭಾಷೆಯಲ್ಲಿ ಹೇಳುತ್ತೆವೆಂದು ಹೇಳಿ ಎಂದು ಹೇಳಿದರು. ಗಂಡು ಭಾಷೆಗೂ ಗಂಡಸುತನ ಭಾಷೆಗೂ ಬಹಳ ಬದಲಾವಣೆ ಇದೆ. ಎನ್ನುವ ಶಬ್ದವನ್ನು ಕಡತದಿಂದ ತೆಗೆಸಬೇಕೆಂದು ತಮ್ಮಲ್ಲಿ ಪ್ರಾರ್ಥನೆ ಮಾಡುತ್ತೇನೆ.

**ಉಪ ಸಭಾಪತಿಯರು:** ಅದು ನನ್ನ ಗಮನಕ್ಕೆ ಬಂದಿದೆ, ನಾನು ಗಂಡಸುತನ ಪದವನ್ನು ಕಡತದಿಂದ ತೆಗೆಸುತ್ತೇನೆ.

**ಮಾನ್ಯ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಸಚಿವರು:–**

ಅ) ಗ್ರಾಮಾಂತರ ಪ್ರದೇಶಗಳಲ್ಲಿ ಹೆಣ್ಣುಮಕ್ಕಳಿಗಾಗಿ ವಸತಿ ಶಾಲೆಗಳನ್ನು ನಿರ್ಮಿಸುವ ಆಲೋಚನೆ ಸರಕಾರಕ್ಕೆ ಇದೆಯೇ?

**ಶ್ರೀ ಹೆಚ್. ಈ. ಗೋವಿಂದಗೌಡ (ಪ್ರಾಥಮಿಕ ಮತ್ತು ಪ್ರೌಡ ಶಿಕ್ಷಣ ಸಚಿವರು):**

ಅ) ಶಿಕ್ಷಣ ಇಲಾಖೆಯ ವತಿಯಿಂದ ಪ್ರಸಕ್ತ ಸಾಲಿನಲ್ಲಿ ಹೆಣ್ಣು ಮಕ್ಕಳಿಗಾಗಿ ವಸತಿ ಶಾಲೆಗಳನ್ನು ತೆರುಯುವ ಯೋಜನೆ ಇಲ್ಲ.

**ಉಪ ಸಭಾಪತಿಯವರು:** ಶ್ರೀಮತಿ ಪ್ರಮಲ್ಲ ಮಧುಕರ್ ರವರ ಪರವಾಗಿ ನಾನು ಮೊದಲನೆಯದಾಗಿ ಕೇಳುವುದೇನೆಂದರೆ ಹೆಣ್ಣು ಮಕ್ಕಳ ವಸತಿ ಶಾಲೆಗಳನ್ನು ನಿರ್ಮಿಸುವ ಬಗ್ಗೆ ಸರ್ಕಾರಕ್ಕೆ ಆಲೋಚನೆ ಇದೆಯೇ ಎನ್ನುವ ಪ್ರಶ್ನೆಗೆ ಅದನ್ನು ತೆರೆಯುವ ಯೋಜನೆ ಇಲ್ಲವೆಂದು ಹೇಳಿದ್ದಿರಿ. ಮಹಿಳೆಯರಿಗೆ ಶಿಕ್ಷಣ ಅಗತ್ಯವಾಗಿದೆ. ಅದನ್ನು ಮುಂದಿನ ಬೆಳವಣಿಗೆಗೆ ಪ್ರೇರಕವಾಗುತ್ತದೆನ್ನುವ ದೃಷ್ಟಿಯಿಂದ ಈ ಒಂದು ಚಿಂತನೆ ಬಹಳ ಸಹಾಯಕವಾಗುತ್ತದೆ. ಅದರ ಬಗ್ಗೆ ಸರ್ಕಾರ ಪುನರ್ ಪರಿಶೀಲನೆ ಮಾಡುವಂಥಾದ್ದು ಏನಾದರು ವಿಚಾರವಿದ್ದರೆ ಅದನ್ನು ಸರ್ಕಾರ ಮಾಡಬೇಕೆಂದು ನಾನು ಕೇಳಿಕೊಳ್ಳುತ್ತೆನೆ.

**ಶ್ರೀ ಹೆಚ್. ಜಿ. ಗೋವಿಂದೇಗೌಡ:** ಮಾನ್ಯ ಉಪಸಭಾಪತಿಯವರೆ, ಹೆಣ್ಣು ಮಕ್ಕಳಿಗೋಸ್ಕರ ಶಾಲೆಗಳನ್ನು ತೆಗೆಯುವಂತಹ ಅವಕಾಶಗಳು ಸದ್ಯದಲ್ಲೆ ಇಲ್ಲ. ಮಾನ್ಯ ಮುರಾರ್ಜಿ ದೇಸಾಯಿಯವರ ಹೆಸರಿನಲ್ಲಿ 20 ವಸತಿ ಶಾಲೆಗಳನ್ನು ಇಡೀ ರಾಜ್ಯದಲ್ಲಿ 20 ಜಿಲ್ಲೆಗಳಲ್ಲಿ ತೆಗೆಯಲಾಗಿದೆ. ಅದರಲ್ಲಿ ಅರ್ಧ ಭಾಗ ಹೆಣ್ಣು ಮಕ್ಕಳಿಗೆ ಮೀಸಲಾಗಿದೆ. ಇನ್ನು ಅರ್ಧ ಭಾಗ ಗಂಡು ಮಕ್ಕಳಿಗೆ ಮೀಸಲಾಗಿದೆ. ಈಗ ತಮ್ಮ ಸಲಹೆ ಏನು ಇದೆ ಅದನ್ನು ನಾವು ಪರಿಶೀಲನೆ ಮಾಡುತ್ತೆವೆ. ಅದನ್ನು ತಾವು ಬಹಳ ಸಂತೋಷವಾಗಿ ಒಪ್ಪುತ್ತೀರೆಂದು ನಾನು ತಿಳಿದುಕೊಂಡಿದ್ದೇನೆ. ಇನ್ನು ಮುರಾರ್ಜಿ ದೇಸಾಯಿ ಅವರ ಹೆಸರಿನಲ್ಲಿ ತೆರೆದಿರುವಂತಹ ಶಾಲೆಗಳಲ್ಲಿ ಅರ್ಧ ಭಾಗ ಹೆಣ್ಣು ಮಕ್ಕಳಿಗೆ ಉಚಿತ ಶಿಕ್ಷಣ ನೀಡುತ್ತೆವೆ. ಎಲ್ಲಾ ರೀತಿಯ ಸವಲತ್ತುಗಳನ್ನು ಗಂಡು ಮಕ್ಕಳಿಗೆ ಕೊಡುವಂತೆ ಹೆಣ್ಣು ಮಕ್ಕಳಿಗೂ ಕೊಡುತ್ತೇವೆ. ಇನ್ನು ನಾವು ಹೇಳಿರುವಂತಹ ವಿಷಯವನ್ನು ಮುಂದೆ ಪರಿಶೀಲನೆ ಮಾಡುತ್ತೇವೆ.

**ಶ್ರೀ ಟಿ. ಎನ್. ನರಸಿಂಹಮೂರ್ತಿ:** ಮಾನ್ಯ ಉಪಸಭಾಪತಿಯವರೆ, ತಾವು ಆ ಸ್ಥಾನದಲ್ಲಿ ಕುಳಿತು ಸದಸ್ಯರ ಗೈರು ಹಾಜರಿಯಾದಾಗ ಸಾರ್ವಜನಿಕ ಪ್ರಾಮುಖ್ಯವಾದ ವಿಷಯವೆಂದು ತಮಗೆ ಗೊತ್ತಾದಾಗ ಪ್ರಶ್ನೆಗಳನ್ನು ತಾವು ಕೇಳಬಹುದೇ ಹೊರತು ಉಪಸಭಾಪತಿಯವರೆ ಉಪ ಪ್ರಶ್ನೆಯನ್ನು ಕೇಳಬಾರದು.

**ಉಪ ಸಭಾಪತಿಯವರು:** ಉಪ ಪ್ರಶ್ನೆಯನ್ನು ನೀವು ಕೇಳಿ,

**ಶ್ರೀ ಟಿ. ಎನ್. ನರಸಿಂಹಮೂರ್ತಿ:** ಅದನ್ನು ನಾನು ಕೇಳುತ್ತೇನೆ, ನಮಗೆ ಬಿಟ್ಟು ಬಿಡಿ.

**ಶ್ರೀ ಟಿ. ಎನ್. ನರಸಿಂಹಮೂರ್ತಿ:** ಮಾನ್ಯ ಉಪ ಸಭಾಪತಿಯವರೆ, ಮಹಿಳೆಯರ ಪರವಾಗಿ ನಾನೂ ಕೂಡ ತಮಗೆ ಅಬಿನಂದನೆಗಳನ್ನು ಸಲ್ಲಿಸುತ್ತೆನೆ. I am not questioning your right or residuary powers ಇದಕ್ಕೆ ಉಪ ಪ್ರಶ್ನೆಗಳನ್ನು ಕೇಳಲು ನಮಗೆ ಬಿಟ್ಟು ಬಿಡಿ ಎಂದು ಹೇಳುತ್ತೇನೆ. That is all my submission ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರೆ ಪ್ರಶ್ನೆ ಬಹಳ ಉಪಯುಕ್ತವಾಗಿದೆ. ಓ.ಪಿ. ಕೈಲಾಶಂ ದೃಷ್ಟಿಯಲ್ಲಿ ಮಕ್ಕಳ ಪಾಠ ಮನೆಯಲ್ಲಿ ಅಲ್ಲವೇ? ತಮಗೂ ಈ ವಿಚಾರ ಗೊತ್ತಿರುವಂಥಾದ್ದೆ, ಈ ವಸತಿ ಶಾಲೆಗಳನ್ನು ಹೆಣ್ಣು ಮಕ್ಕಳಿಗೆ ಪ್ರತ್ಯೇಕವಾಗಿ ತಾವು ಸರ್ಕಾರದ ನೀತಿ ನಿರೂಪಣೆಯನ್ನು ಮಾಡಿ.

**ಶ್ರೀ ಬಿ. ಎಸ್ ಹೊರಟ್ಟಿ :** ಮಾನ್ಯ ಉಪಸಭಾಪತಿಯವರೇ, ಈಗ ನಾನು ಇಷ್ಟೆ ಹೇಳುವುದು. ನಾನೇನು ಹೇಳಿದೆ ಎಂದರೆ ಎಲ್ಲ ದೃಷ್ಟಿಯಿಂದ ನಾನು

ಮೊದಲನೆಯದಾಗಿ ಅಭಿನಂದನೆಗಳನ್ನು ಸಲ್ಲಿಸುತ್ತಿದ್ದೇನೆ ನರಸಿಂಹಮೂರ್ತಿಯವರು ಹೇಳಿದಂತೆ, ಎಲ್ಲರು ಕೂಡಿ ಈ ಸದನದಲ್ಲಿ ನಿರ್ಣಯಮಾಡಿ ನೈರುತ್ಯ ವಲಯ ಹುಬ್ಬಳ್ಳಿಯಲ್ಲಿ ಆಗಬೇಕೆಂದು ಮಾಡಿದರೆ, ಅದಕ್ಕೆ ನಮ್ಮ ತಕರಾರು ಇಲ್ಲ, ಮಾಡಲಿ. ನಾವು ಯಾವುದೇ ತರಹ ತಕರಾರು ಮಾಡಿಲ್ಲ, ವಿರೋಧ ಮಾಡಿಲ್ಲ. ಆದರೆ ನಾಗೇಗೌಡರಂಥ ಜವಾಬ್ದಾರಿಯಿರತಕ್ಕಂಥ ಮಂತ್ರಿಗಳು ಅಂತಹ ಸ್ಥಾನದಲ್ಲಿ ಇರುವಾಗ ಅನ್ಯಾಯವಾಗಿದ್ದನ್ನು ಸರಿಪಡಿಸುವುದು ನಿಮ್ಮ ಜವಾಬ್ದಾರಿ ಹೌದೋ ಅಲ್ಲವೋ? ಅನ್ಯಾಯವಾಗಿದ್ದಕ್ಕೆ ನಾವು ಹೇಳುತ್ತೇವೆ. ಕೇದ್ರ ಸರ್ಕಾರಕ್ಕೆ ಉತ್ತರ ಹೇಳುವರು ಯಾರು ಇಲ್ಲವೆಂದರೆ ಹೇಗೆ? ಈ ಸದನದಲ್ಲಿ ನಾವು ಕೇಂದ್ರ ಸರ್ಕಾರಕ್ಕೆ ಸಂಬಂದಪಟ್ಟಹಾಗೆ ಕೇಳಿದ್ದಕ್ಕೆ ಉತ್ತರ ಹೇಳಿದ್ದಿರಿ. ಆದ್ದರಿಂದ ಇವತ್ತು ನೀವು ಹೇಳಬೇಕಾಗುತ್ತದೆ.

**Sri. T. N. Narsihma murthy:-** Are you going to ask for his resignation?

**ಶ್ರೀ ನಾಗೇಗೌಡ:** ಬೊಮ್ಮಾಯಿಯವರು ಏಕೆ ರಾಜಿನಾಮೆ ಕೊಡುತ್ತಾರೆ? ಬೊಮ್ಮಾಯಿಯವರು ಇರುವುದಕ್ಕೆ 50 ಕೋಟಿ ಕೊಡಿಸಿರುವುದು.

**ಉಪ ಸಭಾಪತಿಯವರು:** ದಯವಿಟ್ಟು, ಶೂನ್ಯವೇಳೆಯಲ್ಲಿ ಎತ್ತಿರುವ ವಿಷಯವನ್ನು ಶ್ರೀ ಹೊರಟ್ಟಿಯವರೇ, ನೀವು ಮುಗಿಸಬೇಕು.

**ಶ್ರೀ ಹೊರಟ್ಟಿ:** ನನಗೆ ಮಾತನಾಡುವುದಕ್ಕೆ ಅವಕಾಶ ಕೊಟ್ಟರೆ ನಾನು ಮತನಾಡುತ್ತೇನೆ.

**ಶ್ರೀ ಹಾರ್ನಳ್ಳಿ ರಾಮಸ್ವಾಮಿ:** ಮಾನ್ಯ ಸಭಾಪತಿಗಳೆ, ಒಂದು ನಿಮಿಷ. ನಾನು ವಿಷಯದ ಮೇಲೆ ಮಾತನಾಡುವುದಿಲ್ಲ. ಇಂತಹ ಗಂಭೀರವಾದ, ಭಾವನಾತ್ಮಕವಾದಂಥ ವಿಷಯಗಳ ಬಗ್ಗೆ ಈ ರೀತಿಯಾದ ಚರ್ಚೆ ಸರಿಯಲ್ಲ. ಇದು ಕರ್ನಾಟಕ ಏಕೀಕರಣಕ್ಕಾಗಿ ದುಡಿದಿದ್ದಂಥವರ ಮನಸ್ಸಿನಲ್ಲಿ ನೋವು ಉಂಟಾಗುತ್ತದೆ. ನಮ್ಮ ರಾಜ್ಯದಲ್ಲಿ ಈ ರೀತಿಯಾಗಿ ಭಾವನಾತ್ಮಕವಾಗಿ ಐಕ್ಯಮತ್ಯ ಇನ್ನೂ ಆಗಿಲ್ಲವೆನ್ನುವ ಮಟ್ಟಕ್ಕೆ ಬಂದಿದೆ. ರಾಜ್ಯವನ್ನು ಎರಡು ಭಾಗವನ್ನಾಗಿ ಏಕೆ ಮಾಡಬಾರದು ಎಂದು ಮಾತನಾಡುತ್ತಾರೆ. ಇದು ಬಹಳ ತಪ್ಪು. ಈ ವಿವಾದವನ್ನು ಸದ್ಯಕ್ಕೆ ನಿಲ್ಲಿಸಬೇಕು ಎಂದು ನಾನು ಅರಿಕೆ ಮಾಡಿಕೊಳ್ಳುತ್ತೇನೆ.

**ಉಪ ಸಭಾಪತಿಯವರು:** ದಯವಿಟ್ಟು ಮುಗಿಸಿ.

**ಶ್ರೀ ಬಿ. ಎಸ್. ಹೊರಟ್ಟಿ:** ನಾನು ಮಾನ್ಯ ಹಾರ್ನಳ್ಳಿ ರಾಮಸ್ವಾಮಿಯವರ ಮಾತನ್ನು ಸಂಪೂರ್ಣವಾಗಿ ಒಪ್ಪುತ್ತೇನೆ.

**ಉಪ ಸಭಾಪತಿಯವರು:** ನೀವು ಒಪ್ಪುತ್ತೇನೆ ಎಂದರೆ, ಅದನ್ನು ಮುಗಿಸಿಬಿಡಿ.

**ಬಿ. ಎಸ್. ಹೊರಟ್ಟಿ :** ನನಗೆ ಅವಕಾಶವೇ ಕೊಡದಿದ್ದರೆ ನಾನೇನು ಮಾಡಲಿ? ನಾನು ಎನು ಹೇಳುತ್ತಿದ್ದೇನೇ ಎಂದರೆ, ಇವತ್ತು ಸ್ವಾತಂತ್ರ್ಯ ಸಲುವಾಗಿ ಹೋರಾಟ ಮಾಡಿದವರು, ಏಕೀಕರಣ ಸಲುವಾಗಿ ಹೋರಾಟ ಮಾಡಿದರು, ಆ ಭಾಗದಲ್ಲಿಯು ಇದ್ದಾರೆ ಇವತ್ತು ಮಾನ್ಯ ಹಾರ್ನಳ್ಳಿ ರಾಮಸ್ವಾಮಿಯವರಂಥ ಹಿರಿಯರಿಗೆ ಮನಸ್ಸಿಗೆ ನೋವು ಆಗುವುದಾದರೆ, ಇದು ಕೂಡ ಸ್ವಲ್ಪ ಅವರ ಮನಸ್ಸಿಗೆ ನೋವು ಆಗಲಿ ಅಂತ ಹೇಳುತ್ತೇನೆ. ನೋವು ಆದರೆ ಅದನ್ನು ಸರಿಪಡಿಸುವಂಥ ವ್ಯವಸ್ಥೆಯನ್ನು ಅವರು ಮಾಡಲಿ. ಅಂತಹ ಜನ ಎಲ್ಲಾ ಮುಂದಾಗಲಿ. ಈ ರಾಜ್ಯವೆಲ್ಲಾ ಒಂದೇ ರೀತಿಯಿಂದ ಬೆಳೆಯಲಿ. ಸಮಗ್ರ ಏ ಕರ್ನಾಟಕ ಮುಂದುವರೆಯಲಿ. ಆದರೆ ಅನ್ಯಾಯವಾಗಿರುವ ವಿಚಾರವನ್ನು ಸರಿಪಡಿಸಬೇಕೆಂದು ತಮ್ಮ ಮೂಲಕ ನಾನು ಹೇಳುತ್ತೆನೆ.

**ಡಾ॥ ಮಹದೇವ ಬಣಕಾರ್:** ಮಾನ್ಯ ಸಭಾಪತಿಯವರೇ. . . . . . . .

**ಉಪಸಭಾಪತಿಯವರು:** ಇನ್ನು ನಾನು ಯಾರಿಗೂ ಅವಕಾಶ ಕೊಡುವುದಿಲ್ಲ. ಸರ್ಕಾರ ಉತ್ತರ ಕೊಡುತ್ತದೆ.

**ಡಾ॥ ಮಹದೇವ್ ಬಣಕಾರ್:** ನಾನು ಎರಡು ಮಾತು ಹೇಳಲೇಬೇಕು.

**ಉಪಸಭಾಪತಿಯವರು:** ಇಲ್ಲ. ಯಾರಿಗೂ ಅವಕಾಶ ಇಲ್ಲ. ಇನ್ನು ಸರ್ಕಾರ ಉತ್ತರ ಕೊಡುತ್ತದೆ.

**ಡಾ. ಮಹದೇವ್ ಬಣಕಾರ್:** ಜಾಸ್ತಿ ಹೇಳುವುದಿಲ್ಲ ನಾನು. ಎರಡೇ ನಿಮಿಷ.

**ಉಪ ಸಭಾಪತಿಯವರು:** ಈಗ ಮಾನ್ಯ ಭೀಮಣ್ಣ ಖಂಡ್ರೆಯವರದ್ದು ಲಾಯರ್ಸ ಆಫ್ ಬಾಂಬೆ ಕರ್ನಾಟಕದ್ದು. . . . . .

**ಶ್ರೀ ಎಂ. ಸಿ. ನಾಣಯ್ಯ:** ಮಾನ್ಯ ಸಭಾಪತಿಯವರೇ, ಮಾನ್ಯ ಮಾನ್ಯ ಮಿತ್ರರಾದಂಥ. . . . .

**ಡಾ॥ ಮಹದೇವ್ ಬಣಕಾರ್:** ಒಂದೇ ನಿಮಿಷ.

**ಉಪಸಭಾಪತಿಯವರು:** ಇಲ್ಲ, ಸರ್ಕಾರದವರು ಉತ್ತರ ಕೊಡುತ್ತಿದ್ದಾರೆ.

**ಶ್ರೀ ಭಿಮಣ್ಣ ಖಂಡ್ರೆ:** ನನಗೆ ಅವಕಾಶ ಕೊಟ್ಟಿದ್ದೀರಿ.

**Sri. M.C. Nanaian:** What is the issue? Let us confine ourseives to the issue.

**ಶ್ರೀ ಭೀಮಣ್ಣ ಖಂಡ್ರೆ:** ಮಾನ್ಯ ಉಪಸಭಾಪತಿಯವರು ನನ್ನ ಹೆಸರು ಹೇಳಿ ಅನುಮತಿ ಕೊಟ್ಟಿದ್ದಾರೆ.

## ಹೈಕೋರ್ಟ್ ಪೀಠ ಸ್ಥಾಪನೆ ಕುರಿತು

**ಶ್ರೀ ಎಂ. ಸಿ. ನಾಣಯ್ಯ:** ಒಪ್ಪಿಕೊಂಡೆ. ನಾನು ಬರುತ್ತೇನೆ. ಆದ್ದರಿಂದ ನೀವು ದಯವಿಟ್ಟು ತನ್ನಿ ಎಂದು ಹೇಳಿದ ಮೇಲೆ, ರಾಜ್ಯದ ಉಚ್ಚನ್ಯಾಯಾಲಯದವರು ತಮ್ಮ ಸಮಿತಿಯನ್ನು ಕೊಡದೇ ಹೋದರೆ, ಸ್ವಲ್ಪ ಮಟ್ಟಿಗೆ ಕಷ್ಟವಾದೀತು ಎಂದು ಹೇಳುವುದನ್ನು ರಾಜ್ಯಸಭೆಯಲ್ಲಿಯೇ ಹೇಳಿದರು. ಇದಾದಮೇಲೆ, 1994ನೇ ಇಸವಿಯಲ್ಲಿ ಶ್ರೀಮಾನ ದೇವೇಗೌಡರು ಮುಖ್ಯಮಂತ್ರಿಯಾದ ಮೇಲೆ, ಪುನಃ ಇದೇ ವಿಜಾಪುರವನ್ನು ಸಚಿವ ಸಂಪುಟದಲ್ಲಿ ಚರ್ಚೆಗೆ ಎತ್ತಿಕೊಂಡರು. ಆಗ ನಾನೇ ಈ ಬಗ್ಗೆ ಪತ್ರಿಕಾಪರಿಷತ್ತಿನಲ್ಲಿ ಹೇಳಿಕೆನ್ನು ಕೊಟ್ಟೆ. ಮುಂಖ್ಯಮಂತ್ರಿಗಳ ಮುಖಾಂತರ ಮಾನ್ಯ ನರಸಿಂಹರಾವ್‌ವರಿಗೆ ಒಂದು ಪತ್ರವನ್ನು ಬರೆಸಿದೆವು. ನಾನು ಮತ್ತು ಮುಖ್ಯಮಂತ್ರಿಗಳು ಶ್ರೀಮಾನ್ ಭಾರದ್ವಾಜರನ್ನು ಕಂಡು ಸುಮಾರು 45 ನಿಮಿಷಗಳ ಕಾಲ ಮಾತನಾಡಿದೆವು. ಅವರು ಆಗಲೂ ಅದನ್ನೇ ಹೇಳಿದರು. ತಾವು ದಯವಿಟ್ಟು ರಾಜ್ಯ ಉಚ್ಚನಾಯಾಲಯದಿಂದ **"ನೋ ಅಬ್ಜಕ್ಷನ್"** ಎಂದು ಹೇಳತಕ್ಕಂತಾದ್ದನ್ನು ದಯವಿಟ್ಟು ತನ್ನಿ ಎಂದು ಹೇಳಿದರು. ಇದಾದ ಮೇಲೆ ರಾಜ್ಯ ಉಚ್ಚನ್ಯಾಯಾಲಯದಲ್ಲಿ ಎರಡು ಸಲ ಈ ವಿಚಾರವನ್ನು ಎತ್ತಿಕೊಂಡರು. ಒಂದು 1994ರ ಪೂರ್ವದಲ್ಲಿ, 1994ರ ಪೂರ್ವದಲ್ಲಿ ಜಸ್ಟೀಸ್ ಚಂದ್ರಶೇಖರ ಅವರು ತೆಗೆದುಕೊಂಡಿರುವ ತೀರ್ಮಾನವನ್ನು ಬಿಟ್ಟರೆ, ಅದಾದ ಮೇಲೆ ಒಂದು ಪೀಠವನ್ನು ಹುಬ್ಬಳ್ಳಿಯಲ್ಲಿ ತೆರೆಯತಕ್ಕಂತಾದ್ದು ಆಡಳಿತಾತ್ಮಕವಾಗಿ ಸರಿಯಾದ ಕ್ರಮವಲ್ಲ ಎಂದು ಹೇಳತಕ್ಕಂಥ ಮಾತನ್ನು 1994ರ ಮಾರ್ಗದಲ್ಲಿ ಹೇಳಿದರು 1994ರ ಅಕ್ಟೋಬರ್ ಅಥವಾ ನವೆಂಬರ್ 31 ಜನ ನ್ಯಾಯ ಮೂರ್ತಿಗಳೂ ಸೇರಿ, ರಾಜ್ಯದ ಮುಖ್ಯನ್ಯಾಯಾಧೀಶರ ಅಧ್ಯಕ್ಷತೆಯಲ್ಲಿ ಒಂದು ಸಭೆ ಮಾಡಿದರು ಮತ್ತು ಅವರು ರಾಜ್ಯ ಸರ್ಕಾರಕ್ಕೆ ಒಂದು ಪತ್ರವನ್ನು ಕಳುಹಿಸಿದರು. ಒಟ್ಟಿನಲ್ಲಿ ಉಚ್ಚನ್ಯಾಯಾಲಯದ ಪೀಠವನ್ನು ಕೇಂದ್ರ ಕಛೇರಿಯಿಂದ ಹೊರಗಡೆ ಮಾಡತಕ್ಕಂತಾದ್ದು ಸರಿಯಾಗಿ ಕ್ರಮ ಅಲ್ಲ ಎಂದು ಉತ್ತರವನ್ನು ಕೊಟ್ಟರು.

**ಶ್ರೀ ಹಾರನಹಳ್ಳಿ ರಾಮಸ್ವಾಮಿ:** ಕೇಂದ್ರ ಸರ್ಕಾರದ ಅತಿ ಉತ್ತಮ ಮಟ್ಟದಲ್ಲಿ ಈ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗಿತ್ತು. ಇದನ್ನು ಪ್ರಧಾನಿಗಳ ಮಟ್ಟದಲ್ಲಿಯೇ ತೆಗೆದುಕೊಳ್ಳಬೇಕಾಗಿತ್ತು. ಭಾರದ್ವಾಜ್ರವರು ಕಾನೂನು ಮಂತ್ರಿಗಳಾಗಿದ್ದಾಗ, ಎಲ್ಲಾ ಅಭಿಪ್ರಾಯಗಳನ್ನು ಕ್ರೂಢೀಕರಿಸಿ, ಪ್ರಧಾನ ಮಂತ್ರಿಗಳಿಗೆ, ಕೇಂದ್ರ ಮಂತ್ರಿಮಂಡಲದ ಮುಂದೆ ಇಡುವುದಕ್ಕೋಸ್ಕರ ದಾಖಲೆಗಳನ್ನು ಕೊಟ್ಟರು. ಅದು ಮಂತ್ರಿ ಮಂಡಲಕ್ಕೆ ಬರಲಿಲ್ಲ, ತೀರ್ಮಾನ ಆಗಲಿಲ್ಲ, ಅಲ್ಲಿಗೆ ನಿಂತಿದೆ. ಇಂತಹ ಕೋರ್ಟ ಸ್ಥಾಪನೆ ಮಾಡುವ ವಿಚಾರ ಈಗಲೂ ಹೈಕೋರ್ಟ ನ್ಯಾಯಾಧೀಶರ ಮರ್ಜಿ ಮೇಲೆ ನಡೆಯಬೇಕಾಗಿಲ್ಲ. ಜನಗಳ ಮರ್ಜಿ ಮೇಲೆ ನಡೆಯಬೇಕು. ಜನಗಳಿಗೆ ಅನುಕೂಲ ಇದ್ದರೆ ಇದನ್ನು ನೋಡಬೇಕು ವಿನಃ ಇದನ್ನು ತಿಳಿದುಕೊಂಡೇ ರಾಜ್ಯಸರ್ಕಾರದ ಮುಖ್ಯಮಂತ್ರಿಗಳು ಹುಬ್ಬಳ್ಳಿ ಧಾರವಾಡದಲ್ಲಿ ಅಗಬೇಕೆಂದು ಇಡೀ ರಾಜ್ಯ ಸರ್ಕಾರ ಮತ್ತು ಎಲ್ಲ ಜನಗಳೂ ಒಟ್ಟಿಗೆ ಅಭಿಪ್ರಾಯವನ್ನು ಕೊಟ್ಟಿದ್ದಾರೆ. ತಾವು ಪ್ರಧಾನ ಮಂತ್ರಿಗಳನ್ನು ಒಪ್ಪಿಸುವ ಕೆಲಸ ಮಾಡಿ.

**ಶ್ರೀ ಎಂ. ಸಿ. ನಾಣಯ್ಯ:** ಮಾನ್ಯ ಹಿರಿಯರಾದ ರಾಮಸ್ವಾಮಿಯರು ಇದಕ್ಕೆ ಸಂಬಂಧಿಸಿದ ಎಲ್ಲಾ ವಿವರಗಳನ್ನು ತಯಾರು ಮಾಡಿ, ಪ್ರಧಾನಿಮಂತ್ರಿಗಳ ಹತ್ತಿರ ತೆಗೆದುಕೊಂಡು ಹೋಗಿ ಎಂದು ಹೇಳಿದರು. ಕಳೆದ ವರ್ಷ ಭಾರದ್ವಾಜರು ಜೊತೆಯಲ್ಲಿಯೇ 45 ನಿಮಿಷ ಚರ್ಚೆ ಮಾಡಿರತಕ್ಕಂತಾದ್ದು. ನನ್ನ ಜೊತೆಯಲ್ಲಿ ಮುಖ್ಯಮಂತ್ರಿಗಳಾಗಿದ್ದ ಶ್ರೀಮಾನ ದೇವೇಗೌಡರೂ ಇದ್ದರು. ಆಗ, ಹೇಳಿರತಕ್ಕಂತ ಮಾತೇ ಇದು. ಕೇಂದ್ರ ಸರ್ಕಾರ ಒಂದು ತೀರ್ಮಾನ ತೆಗೆದುಕೊಳ್ಳಬೇಕಾದರೆ, ರಾಜ್ಯ ಉಚ್ಚನ್ಯಾಯಾಲಯದ ಸಮ್ಮತಿ ನಮಗೆ ಬೇಕು. ಇದಕ್ಕೆ ಕಾರಣವೇನೆಂದರೆ, ಇತರೇ ರಾಜ್ಯಗಳಿಂದಲೂ ಕೂಡ ಈ ತರಹ ಬೇಡಿಕೆಗಳು ಬಂದಿದೆ. ಉತ್ತರ ಪ್ರದೇಶ, ಮದ್ಯಪ್ರದೇಶ. . . . .

**ಶ್ರೀ ಹೆಚ್.ಕೆ. ಪಾಟೀಲ್:** ಹೈಕೋರ್ಟ ಮುಖ್ಯನ್ಯಾಯಮೂರ್ತಿಯವರ ಸಮ್ಮತಿ ಬೇಕಾಗಿಲ್ಲ.

Let us be very clear. The government, in consultation with the Chief Justice that does not mean that it requires consent. Even if they say No I think we should proceed.

**ಶ್ರೀ ಎಂ. ಸಿ. ನಾಣಯ್ಯ:** ಇವತ್ತು ಉಚ್ಚ ನ್ಯಾಯಾಲಯವನ್ನು ಕೇಳಿ ತೀರ್ಮಾನವನ್ನು ತೆಗೆದುಕೊಳ್ಳಬೇಕೆಂದು ಪ್ರಜಾಪ್ರತಿನಿಧಿ ಕಾಯ್ದೆಯಲ್ಲಿ ಬಂದಾಗ ಬಹುಶಃ ಅದರ ಸಮ್ಮತಿಯನ್ನು ಕೇಳಬೇಕಾಗಿರುವುದು ನಮ್ಮ ಕರ್ತವ್ಯ.

**ಶ್ರೀ ಹಾರನಹಳ್ಳಿ ರಾಮಸ್ವಾಮಿ:** ಒಮ್ಮೆ ಉಚ್ಚ ನ್ಯಾಯಾಲಯದ ಅಭಿಪ್ರಾಯ ತೆಗೆದುಕೊಂಡ ಮೇಲೆ, ಜಸ್ಟೀಸ ಚಂದ್ರಶೇಕರ್ ರವರ ಒಪೀನಿಯನ್ ತೆಗೆದುಕೊಂಡ ಮೇಲೆ, ಪುನಃ ಎರಡನೇ ಬಾರಿ ಅವರನ್ನು ಕೇಳುವ ಅವಶ್ಯಕತೆ ಇರಲಿಲ್ಲ.

**ಶ್ರೀ ಎಂ. ಸಿ. ನಾಣಯ್ಯ:** ಯಾವಾಗ ಅದು, 20 ವರ್ಷಕ್ಕೆ ಹಿಂದೆ.

**ಶ್ರೀ ಹಾರನಹಳ್ಳಿ ರಾಮಸ್ವಾಮಿ:** ಯಾವಾಗಲೇ ಆಗಲಿ. ಒಮ್ಮೆ ಉಚ್ಚನ್ಯಾಯಾಲಯದ ಅಭಿಪ್ರಾಯ ತೆಗೆದುಕೊಂಡ ಮೇಲೆ, ಜಸ್ಟೀಸ ಚಂದ್ರಶೇಖರವರ ಒಪೀನಿಯನ್ ತೆಗೆದುಕೊಂಡ ಮೇಲೆ, ಪುನಃ ಎರಡನೇ ಬಾರಿ ಅವರನ್ನು ಕೇಳುವ ಅವಶ್ಯಕತೆ ಇರಲಿಲ್ಲ.

**ಡಾ॥ ಮಹದೇವ್ ಬಣಕಾರ್:** ಬಹಳ ಮಹತ್ವದ ವಿಷಯುವನ್ನು ಮಾನ್ಯಸಭಾನಾಯಕರಿಗೆ ಇವತ್ತು ನಿವೇದನೆ ಮಾಡಿಕೊಳ್ಳುತ್ತೇನೆ. ಇದುವರೆಗೂ ನಡೆದಿರತಕ್ಕ ಚರ್ಚೆಯ ಬಗ್ಗೆ ನಾನು ಮಾತನಾಡುವುದಕ್ಕೆ ಹೋಗುವುದಿಲ್ಲ. ಪ್ರಾದೇಶಿಕ ಅಸಮಾನತೆ ಪ್ರಶ್ನೆ ನಮ್ಮ ತಲೆಯಲ್ಲಿ ಇಲ್ಲವೇ ಇಲ್ಲ. ಎರಡು ಕರ್ನಾಟಕದವರು ನಾವಲ್ಲ. ಎರಡು, ಮೂರು ಇದ್ದುದನ್ನು ಒಂದು ಮಾಡಿದವರು. ನಾನಂತೂ ಸ್ವತಃ ಜೈಲಿಗೆ ಹೋಗಿರತಕ್ಕಂಥ ಮನುಷ್ಯ. ಆದರೆ ಆಗಿರತಕ್ಕಂಥ ನೋವು, ಅಸಮಾನತೆಗಳನ್ನು ಹೇಳದೇ ಹೋದರೆ ನಾವು ಹೇಡಿಗಳಾಗುತ್ತೇವೆ. ಇಲ್ಲಿ ಒಂದು ಪ್ರಶ್ನೆ, ಹೈಕೋರ್ಟಿನ ವಿಷಯ ಕುರಿತು ನಾನು ಮಾತನಾಡುತ್ತೇನೆ. ಈ ಹೈಕೋರ್ಟಿನ ಪೀಠವನ್ನು ಹುಬ್ಬಳ್ಳಿಯಲ್ಲಿ ಸ್ಥಾಪನೆ ಮಾಡಬೇಕೆನ್ನುವುದು ನಮ್ಮ ನಿಮ್ಮ ಕಲ್ಪನೆಯಲ್ಲ. ನಾವು, ನೀವು ಇವತ್ತು ಹೇಳುತ್ತಿದ್ದೇವೆ. ಆದರೆ, ಏಕೀಕರಣದ ಪೂರ್ವದಲ್ಲಿ ಎರಡು ಗುಂಪುಗಳು, ಎರಡು ಪ್ರಭಲ ಕೋಮುಗಳು, ಒಂದಾದರೆ ನಮ್ಮ ಜೀವನದ ಗತಿ ಏನು, ನಾಳೆ ಇವರ ಕೈಯಲ್ಲೇ ಸಿಕ್ಕರೆ ಎಂಬತಕ್ಕಂಥ ಒಂದು ಭಯ ಇದೆ. ಅದಕ್ಕೆ ಭೈಫೋರ್ ಇಂಟಿಗ್ರೇಷನ್, ಇದು ಅಗುವುದಕ್ಕಿಂತ ಮೊದಲೇ, 1952–53 ರಲ್ಲಿ ಎಂದು ಸ್ವಲ್ಪ ನನಗೆ ನೆನಪಿದೆ. ಕೆ. ನಾರಾಯಣಸ್ವಾಮಿ ಇರಬೇಕು, ಅವರ ಅದ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ಮಾಡಿದರು ಮಾಡಿ, ಅಲ್ಲಿ ಅದು ಹೆಚ್ಚು, ಇದು ಹೆಚ್ಚು ಎನ್ನುವುದು ಬೇಡ. ಎಲ್ಲಾ ಜಿಲ್ಲೆಗಳಲ್ಲು ಮಾಡಿ, ಅಲ್ಲಿರತಕ್ಕಂಥ ಮಳೆ ಬೆಳೆ, ಆಗಿರತಕ್ಕವರನ್ನು ಡೀ–ಅಡಿಕ್ಟ ಮಾಡಲಿಕ್ಕೆ ಇರತಕ್ಕದ್ದು ಒಂದು ಭಾಗ.

ಇನ್ನು ತುಂಬಾ ಅಡಿಕ್ಷನ್ ಆಗದೇ ಇರತಕ್ಕವರು ಅವರನ್ನು ಏನು ಮಾಡಬೇಕೆಂದು ಹೇಳತಕ್ಕದ್ದು. ತಂದಿರತಕ್ಕ ಉದ್ದೇಶ ಸಂಯಮವೆಂದು ಹೇಳತಕ್ಕದ್ದು ನಿಜ. ಇದರಲ್ಲಿ ಟೋಟಲ್ ಪ್ರಾಹಿಬಿಷನ್ಗೆ ಸಂಬಂದಪಟ್ಟಹಾಗೆ ಅಲ್ಲ. ಟೆಂಪರೆನ್ಸ ಬೋರ್ಡ ಅಂದರೆ well I think, let it be under a particular remper. ಎಂದು ಹೇಳತಕ್ಕವಾದ ಬಂದುಬಿಡುತ್ತದೆ. ಆದ್ದರಿಂದ ಎರಡೂ ವಿಚಾರವನ್ನು ಎತ್ತಿಕೊಂಡು ಸರ್ಕಾರದ ವತಿಯಿಂಥ ಹಣವನ್ನು ಎಷ್ಟು ಮಂಜೂರು ಮಾಡುತ್ತೇವೆ  ಅದು ಈ ನಮ್ಮ ಸಮಾಜದಲ್ಲಿ ಈ ಆಲ್ಕೋಹಾಲ್‌ನಿಂದ ಅಡಿಕ್ಷನ್ ಆಗಿರತಕ್ಕರವರನ್ನು ಯಾವ ರೀತಿ ನಾವು ಸರಿದಾರಿಗೆ ತರಬೇಕೆಂದು ಕೊಡಲಿಕ್ಕೆ ಇರತಕ್ಕದ್ದು. ಶ್ರೀಮತಿಯವರು ಹೇಳಿದರು, ಗಂಡಸರು ಕುಡಿದರೆ ಅವರಿಗೆ ಸುಖ ಬರುತ್ತದೆ ಎಂದು. ಇದು ಸುಖ ದುಃಖದ ಪ್ರಶ್ನೆಯಲ್ಲ. ಕುಡಿದರೆ ಗಂಡಸರಿಗು ಸುಖ ಬರುತ್ತದೆ ಹೆಂಗಸರಿಗು ಸುಖ ಬರುತ್ತದೆ. ಗೊತ್ತಿಲ್ಲ ಅದು ಯಾವ ತರಹದ ಸುಖ ಅಂತ? ಅಂದರೆ ಹೆಂಗಸರು ಕುಡಿಯುವರು ಇದ್ದಾರಲ್ಲಾ? ಉಪಸಭಾಪತಿಯವರೆ, ಹೆಂಗಸರೂ ಕುಡಿಯುವರು ಇದ್ದಾರೆ. At the lower ring of the society, working class, this is almost equal in many of the places. I will show you the places.

**ವಿಷಯ:** ಆಲಮಟ್ಟಿ ಆಣೆಕಟ್ಟನ್ನು ಎತ್ತರಿಸದಂತೆ ಆಂದ್ರದ ಒತ್ತಾಯ

ಆಂಧ್ರಪ್ರದೇಶದ ಉಚ್ಚನ್ಯಾಯಾಲಯದಿಂದ ಬಂದಿದೆ.

ಆಲಮಟ್ಟಿ ಡ್ಯಾಮ್ನ ಎತ್ತರವನ್ನು ಹೆಚ್ಚಿಸಕೂಡದೆಂದು ಆಂದ್ರ ಹೈಕೋರ್ಟಿನ ತಡೆಯಾಜ್ಞೆ ಇದ್ದು; ದಿನಾಂಕ 30–07–96 ರಂದು ಅದೇ ಹೈಕೊರ್ಟಿನಲ್ಲಿ ಸದರಿ ತಡೆಯಾಜ್ಞೆಯ ವಿರುದ್ದ ಕರ್ನಾಟಕ ರಾಜ್ಯದ ವಾದವನ್ನು ದಾಖಲು ಮಾಡಲಾಗಿದೆ. ಅದೇ ದಿನ ಕೋರ್ಟು ತನ್ನ ತೀರ್ಪನ್ನು ಮರು ವಿಮರ್ಶೆ ಮಾಡಿದ್ದು, ಆಲಮಟ್ಟಿ ಡ್ಯಾಮ್‌ನ ಎತ್ತರವನ್ನು ಘಟ್ಟ –1ರ ಮಂಜೂರಾತಿ ಪ್ರಕಾರ ಏರಿಸಲು ಯಾವುದೇ ತಡೆಯಾಜ್ಞೆ ಇರುವುದಿಲ್ಲ. ಘಟ್ಟ–2ರ ಪ್ರಕಾರ ಡ್ಯಾಮ್ ಎತ್ತರವನ್ನು ಹೆಚ್ಚಿಸುವ ಬಗ್ಗೆ ಕೋರ್ಟ ತಡೆಯಾಜ್ಞೆ ವಿಧಿಸಿರುತ್ತದೆ. ಈ ವಿವಾದವು ಪುನಃ ದಿನಾಂಕ: 21–06–96ರಂದು ಸದರಿ ಕೋರ್ಟನಲ್ಲಿ ಚರ್ಚೆಗೆ ಬರಲಿದೆ. ಈ ಬಗ್ಗೆ ಕರ್ನಾಟಕದ ನಿಲುವನ್ನು ವಿಸ್ತಾರವಾಗಿ ಮಂಡಿಸಲು ಬೇಕಾಗುವ ಸೂಕ್ತ ಕ್ರಮವನ್ನು ಕೈಗೊಳ್ಳಲಾಗುತ್ತಿದೆ.

**ಡಾ॥ ಮಹದೇವ್ ಬಣಕಾರ್:** ಮಾನ್ಯ ಉಪಸಭಾಪತಿಯವರೆ, ಆಲಮಟ್ಟಿ ಜಲಾಶಯದ ನೀರು ಸಂಗ್ರಹಣಾ ಒಡ್ಡನ್ನು ವಿಸ್ತರಿಸುವ ಬಗ್ಗೆ ಆಂಧ್ರ ಉಚ್ಚನ್ಯಾಯಾಲಯದಿಂದ ಬಂದಿರತಕ್ಕ ತಡೆಯಾಜ್ಞೆಯನ್ನು ವಿರೋಧಿಸಿ ನಮ್ಮ ಸರ್ಕಾರದವರು ಒಡ್ಡು ಮಾಡಿರತಕ್ಕದ್ದು ಸಂತೋಷದ ವಿಷಯ. ಅವರ ಉತ್ತರದ ಎರಡನೆಯ ಪ್ರಕಾರ ಒಂದನೆಯ ಘಟ್ಟದಲ್ಲಿ ತಡೆಯಾಜ್ಞೆ ಇರುವುದಿಲ್ಲ. ಎರಡನೆಯ ಘಟ್ಟದ ಪ್ರಕಾರ ಡ್ಯಾಮ್ ಎತ್ತರಿಸುವ ಬಗ್ಗೆ ಕೋರ್ಟಿನಲ್ಲಿ ತಡೆಯಾಜ್ಞೆ ಇದೆ. ಅದು 21ನೇ ತಾರೀಖು ವಿಚಾರಣೆಯಲ್ಲಿದೆ ಎಂದು ಮಾನ್ಯ ಮಂತ್ರಿಗಳು ಉತ್ತರಿಸಿದ್ದಾರೆ. ನನ್ನ ಪ್ರಶ್ನೆ ಇಷ್ಟೆ, ಕೋರ್ಟಿನದ್ದು ಕೋರ್ಟಿನಲ್ಲೆ ಕೇಸು ನಡೆಯುತ್ತಿದೆ. ಆದರೆ ಇದೆ 6ನೇ ತಾರೀಖು ದೆಹಲಿಗೆ ಹೋಗುವುದಕ್ಕೆ ಕೇಂದ್ರ ಸರ್ಕಾರದ ಜೊತೆಗೆ ಸಮಾಲೋಚನೆ ಮಾಡುವುದಕ್ಕೆ ತಮಗೇನಾದರು ಅಧಿಕೃತವಾದಂತಹ ಆದೇಶ ಬಂದಿದೆಯೆ?

**ಶ್ರೀ ಕೆ. ಎನ್. ನಾಗೇಗೌಡ:** ಮಾನ್ಯ ಸಭಾಪತಿಯವರೆ, ಈಗಾಗಲೇ ಸದಸ್ಯರು ಹೇಳಿರತಕ್ಕ ಎರಡನೆಯ ಪ್ರಶ್ನೆಗೆ ಡ್ಯಾಮ್ ಪೋಷನ್‌ಗೆ ಮಾತ್ರ ಈಗ ತಡೆಯಾಜ್ಞೆ ಇದೆ ಎನ್ನತಕ್ಕ ಮಾತನ್ನು ಹೇಳಿದ್ದೇನೆ. ಕೇಂದ್ರ ಸರ್ಕಾರದಿಂದ ತಮಗೆ ಕರೆಯೋಲೆ ಬಂದಿದೆಯೇ ಎಂದು ಕೇಳಿದ್ದಾರೆ. ನಿನ್ನೆ 12.30ಕ್ಕೆ ಮಿನಿಸ್ಟರ್ ಫಾರ್ ವಾಟರ್ ರಿಸೋರ್ಸ್ ಯೂನಿಯನ್ ಮುಂದಕ್ಕೆ ಹಾಕಿದರು.

**ಶ್ರೀ ರಮೇಶ್ ಸಿ. ಜಿಗಜಿಣಜಿ (ಕಂದಾಯ ಸಚಿವರು):** ಸನ್ಮಾನ್ಯ ಸಭಾಪತಿಯವರೇ, **"**ವಿಧಾನಸಭೆಯಿಂದ ಅಂಗೀಕೃತವಾದ ರೂಪದಲ್ಲಿರುವ 1996ನೇ ಸಾಲಿನ ರೋರಿಕ್ ಮತ್ತು ದೇವಿಕಾರಾಣಿ ರೋರಿಕ್ ಎಸ್ಟೇಟ್ (ಆರ್ಜನೆ ಮತ್ತು ವರ್ಗಾವಣೆ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುತ್ತೇನೆ.**"**

**ಶ್ರೀ ರಮೇಶ ಸಿ ಜಿಗಜಿಣಜಿ ಕಂದಾಯ ಸಚಿವರು:** ಮಾನ್ಯ ಸಭಾಪತಿಯವರೇ, ಇದೊಂದು ಸಾರ್ವಜನಿಕರ ಹಿತದೃಷ್ಟಿಯಿಂದ ತಂದಿರತಕ್ಕಂಥ ಬಿಲ್ ಆಗಿದೆ. ಸದರಿ ಎಸ್ಟೇನಲ್ಲಿರಿತಕ್ಕಂಥ ಅಮೂಲ್ಯವಾದ ಸಸ್ಯ ಹಾಗೂ ಗಿಡಮೂಲಿಕೆಗಳನ್ನು ಕಾಪಾಡಿಕೊಂಡು ಹೋಗುವುದು ಈ ಬಿಲ್‌ನ ಮೂಲ ಉದ್ದೇಶವಾಗಿರುತ್ತದೆ. ಈ ಬಿಲ್‌ನ ಮುಖಾಂತರ ಒಂದು ಟ್ರಸ್ಟನ್ನು ಮಾಡಿ ಇದರ ಮೇಂಟೆನೆನ್ಸ್ ಇರಬಹುದು ಅಥವಾ ಅಲ್ಲಿರತಕ್ಕಂಥ ಪ್ರದರ್ಶನಮಂದಿರ ಹಾಗೂ ಇನ್ನೊಂದು ಸಂಗ್ರಹಾಲಯವನ್ನು ಸ್ಥಾಪಿಸುವ ಉದ್ದೇಶದಿಂದ ಒಂಧು ಟ್ರಸ್ಟನ್ನು ಮಾಡಿ ಈ ಎಲ್ಲಾ ಎಸ್ಟೇಟನ್ನು ಟ್ರಸ್ಟಗೆ ಹ್ಯಾಂಡ್ ಓವರ್ ಮಾಡಿ, ಎಲ್ಲವನ್ನೂ ಸುಸೂತ್ರವಾಗಿ ನಡೆಸಿಕೊಂಡು ಹೋಗಬೇಕೆನ್ನುವ ಉದ್ದೇಶದಿಂದ ಸರ್ಕಾರವು ಇದಕ್ಕೋಸ್ಕರವಾಗಿ 5 ಕೋಟಿ

ರೂ.ಗಳನ್ನು ಇಡಲು ಉದ್ದೇಶಿಸಿದೆ. ಈ ಬಿಲ್ ಸಾರ್ವಜನಿಕರ ಹಿತದೃಷ್ಟಿಯಿಂದ ಇರುವುದರಿಂದ ಎಲ್ಲಾ ಮಾನ್ಯ ಸದಸ್ಯರುಗಳು ಒಪ್ಪಿಕೊಳ್ಳುತ್ತಾರೆಂದು ನಾನು ಭಾವಿಸುತ್ತೇನೆ.

**ಶ್ರೀ ಹಾರ್ನಳ್ಳಿ ರಾಮಸ್ವಾಮಿ ವಿಧಾನಸಭಾ ಕ್ಷೇತ್ರ :** ಮಾನ್ಯ ಸಭಾಪತಿಯವರೇ, ಈ ವಿಧೇಯಕವು ಬಹಳ ಹಿಂದೆಯೇ ಬರಬೇಕಾಗಿತ್ತು. ತಡವಾಗಿಯಾದರು ಇದನ್ನು ತಂದಿರುವುದಕ್ಕಾಗಿ ಸರಕಾರವನ್ನು ಪ್ರಥಮವಾಗಿ ಅಭಿನಂದಿಸುತ್ತೇನೆ.

**ಡಾ. ಮಹದೇವ್ ಬಣಕಾರ್ (ನಾಮನಿರ್ದೇಶನ ಹೊಂದಿದವರು):** ಮಾನ್ಯ ಸಬಾಪತಿಯವರೇ, ಈ ರೋರಿಕ್ ಮತ್ತು ದೇವಿಕಾ ರಾಣಿ ಅವರ ಆಸ್ತಿ ಬಗ್ಗೆ ಇಲ್ಲಿ ತಂದಿರತಕ್ಕಂಥ ಅಧಿಸೂಚನೆಯನ್ನು ನಾವು ಮೊದಲನೆಯದಾಗಿ ಸ್ವಾಗತಿಸುತ್ತೇನೆ. ಎರಡನೆಯದಾಗಿ ಅನೇಕ ಹಿರಿಯ ಸದಸ್ಯರು ಅಲ್ಲಿರತಕ್ಕಂಥ ಚಿನ್ನ ಆಸ್ತಿ, ಒಡವೆ, ರತ್ನ, ಮುತ್ತು ಇತ್ಯಾದಿಗಳ ಬಗ್ಗೆ ವಿವರವಾಗಿ ಕೊಟ್ಟಿದ್ದಾರೆ. ಇದರ ಬಗ್ಗೆ ನಾನು ಹೇಳಬೇಕಾದ್ದು ಏನು ಇಲ್ಲ. ನಾನು ಸರಕಾರಕ್ಕೆ ಹೇಳಬೇಕಾದ್ದು ಒಂದು ವಿಚಾರ ಹಾಗೂ ಸಲಹೆ ಇದೆ. ಏನೆಂದರೆ, ರೋರಿಕ್‌ರವರು ಇತರೇ ಸ್ನೇಹಿತರಿಗೆ ಕಲೆ ಬಗ್ಗೆ ಜೀವನದ ವಿಷಯವಾಗಿ ಅವರ ಪತ್ರ ವ್ಯವಹಾರ ಮಾಡಿದ್ದಾರೆ. ಆ ಪತ್ರ ವ್ಯವಹಾರ ಕೂಡ ಅಷ್ಟೇ ಮುಖ್ಯ. ಈ ಆಸ್ತಿ-ಪಾಸ್ತಿಗಳ ಜೊತೆಗೆ ಆ ಪತ್ರವ್ಯವಹಾರಗಳನ್ನು ಶೇಖರಣೆ ಮಾಡುವುದು ಉತ್ತಮ. ಏಕೆಂದರೆ ಅದೇ ಚಿತ್ರಕಲಾ ಪರಿಷತ್ತಿನಲ್ಲಿ 1986ರಲ್ಲಿ ನಾನು ಆಂಗ್ಲರ ಆಡಳಿತದಲ್ಲಿ ಕನ್ನಡ ಎನ್ನುವ ಒಂದು ಪ್ರದರ್ಶನವನ್ನು ಏರ್ಪಡಿಸಿದ್ದೆ. ಆ ಕಾಲದಲ್ಲಿ ಅದನ್ನು ನೋಡಿ ನನಗೆ ಬರೆದಿರತಕ್ಕಂಥಹ ಎರಡು ಕಾಗದಗಳೂ ಕೂಡ ನನ್ನ ಹತ್ತಿರ ಇದೆ. ಅವರು ದಾಖಲೆಗಳ ಬಗ್ಗೆ ಎಷ್ಟು ಪ್ರೇಮಿಗಳಾಗಿದ್ದರು ಎಂಬುದು ಅದರಿಂದ ತಿಳಿಯುತ್ತದೆ. ಸರಕಾರದ ಗಮನಕ್ಕೆ ತಮ್ಮ ಮೂಲಕ ತರುತ್ತಿದ್ದೇನೆ. ಅವರು ನಡೆಸಿರತಕ್ಕಂಥಹ ವಿವಿಧ ಹಂತದ ಎಲ್ಲ ಪತ್ರ ವ್ಯವಹಾರಗಳನ್ನು ಶೇಖರಿಸಬೇಕು. ಚಿತ್ರಕಲಾ ಪರಿಷತ್ತಿನ ಜೊತೆಗೆ ಅತ್ಯಂತ ನಿಕಟ ಸಂಬಂಧ ಅವರದ್ದು ಇದ್ದುದರಿಂದ ನಮ್ಮ ಸಹೋದರಿಯಾದಂಥಹ ಶ್ರೀಮತಿ ಕೆಂಪಮ್ಮನವರು ಸೂಚಿಸಿದಂತೆ ಅಲ್ಲಿಯ ಮೂರು ಜನರನ್ನು ಈ ಸಮಿತಿಯಲ್ಲಿ ತೆಗೆದುಕೊಳ್ಳುವುದು ಒಳ್ಳೆಯದು.

**ಶ್ರೀಮತಿ ಟಿ. ಕೆಂಪಮ್ಮ:** ಕೆಲವು ವಿಚಾರವನ್ನು ಹೇಳುವುದನ್ನು ನಾನು ಆಗಲೇ ಮರೆತೆ. ದಯವಿಟ್ಟು ಕ್ಷಮಿಸಬೇಕು. ಪ್ರಾಪರ್ಟಿ ಡಿಸ್ಪ್ಯೂಟ್ ಬಗ್ಗೆ ಮಾಹಿತಿ ಇದೆ. ಅದು ಸರಕಾರದ ಗಮನಕ್ಕೆ ಬಂದಿದೆಯೋ ಇಲ್ಲವೋ ಗೊತ್ತಿಲ್ಲ. ಅದನ್ನು ತಮ್ಮ ಮೂಲಕ ತಿಳಿಸುತ್ತಿದ್ದೇನೆ.

**ಶ್ರೀ ಬಿ. ಎಸ್. ಹೊರಟ್ಟಿ (ಶಿಕ್ಷಕರ ಕ್ಷೇತ್ರ):** ಮಾನ್ಯ ಸಭಾಪತಿಯವರೇ, ಈ ಸಂದರ್ಭದಲ್ಲಿ ತಾವುಗಳು ಮಂಡಿಸಿರತಕ್ಕಂತ ಸಂತಾಪ ಸೂಚಕ ನಿರ್ಣಯವನ್ನು ಬೆಂಬಲಿಸಿ ಸಂಪೂರ್ಣವಾದಂತಹ ಸಹಮತವನ್ನು ವ್ಯಕ್ತಪಡಿಸುತ್ತೇನೆ. ನಮ್ಮ ದೇಶದಲ್ಲಿ, ನಮ್ಮ ರಾಜ್ಯದಲ್ಲಿ ಹಿರಿಯ ನಾಯಕರುಗಳು ತಮ್ಮದೇ ಆದಂಥ ರಾಜಕೀಯ ಪ್ರಜ್ಞೆಯನ್ನು ಇಟ್ಟುಕೊಂಡು ದೇಶ ಸೇವೆಯನ್ನು ಮಾಡಿಕೊಂಡು ಬಂದವರು ಬರುತ್ತಾ ಬರುತ್ತಾ ನಿಧನರಾಗುತ್ತಿದ್ದಾರೆ. ಅವರಂಥ ದೇಶಭಕ್ತರ ಸಂಖ್ಯೆಯು ಕಡಿಮೆಯಾಗುತ್ತಿದೆ. ನಮ್ಮನ್ನು ಅಗಲಿರತಕ್ಕಂತ ಕೆ.ಎಫ್. ಪಾಟೀಲರು ನಮ್ಮ ಜಿಲ್ಲೆಯವರು. ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ಅವರು ತಮ್ಮ ಜೀವನಾದ್ಯಂತ ದೇಶ ಸೇವೆಯನ್ನು ಮಾಡಿಕೊಂಡು ಬಂದಿದ್ದರು. ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ಅವುಗಳನ್ನು ಮಾದರಿಯಾಗಿ ನಡೆಸಿಕೊಂಡು ಬಂದ ಅವರು ಅನೇಕರಿಗೆ ಮಾರ್ಗದರ್ಶಿಯಾಗಿದ್ದರು. ಅವರ ಅಗಲುವಿಕೆಯಿಂದಾಗಿ ನಮಗೆಲ್ಲಾ ಬಹಳಷ್ಟು ಹಾನಿಯಾಗಿದೆ. ಅಂತಯೇ ಶ್ರೀ. ಈ. ಎಸ್. ಬಾಗಲಕೋಟ್ ರವರ ನಿಧನದಿಂದಾಗಿ ಒಬ್ಬ ಪ್ರಬುದ್ಧ ರಾಜಕಾರಣಿಯನ್ನು ಕಳೆದುಕೊಂಡಂತಾಗಿದೆ. ಅವರು ಅಕಾಲನಿಧನವನ್ನು ಹೊಂದಿದರು. ಸಮಾಜದ ಎಲ್ಲಾ ವರ್ಗದವರ ಸೇವೆಯನ್ನು ಮಾಡಿಕೊಂಡು ಬಂದ ಬಾಗಲಕೋಟ್‌ರವರ ನಿಧನವು ತುಂಬಲಾರದ ನಷ್ಟವನ್ನು ತಂದೊಡ್ಡಿದೆ. ಮಾನ್ಯ ಸಭಾಪತಿಯವರು ಮಂಡಿಸಿರುವ ಸಂತಾಪ ಸೂಚನ ನಿರ್ಣಯಕ್ಕೆ ನನ್ನ ಬಾವ ಪೂರ್ಣ ದ್ವನಿಗೂಡಿಸಿ ದಿವಂಗತರುಗಳ ಆತ್ಮಕ್ಕೆ ದೇವರು ಶಾಂತಿಯನ್ನು ಕೊಡಲಿ ಎಂದು ಪ್ರಾರ್ಥಿಸುತ್ತೇನೆ.

**ಡಾ|| ಮಹದೇವ್ ಬಣಕಾರ (ನಾಮ ನಿರ್ದೇಶನ ಹೊಂದಿದವರು):** ಮಾನ್ಯ ಸಭಾಪತಿಯವರೇ, ತಾವುಗಳು ಸಭೆಯಲ್ಲಿ ಮಂಡಿಸಿರುವ ಸಂತಾಪ ಸೂಚಕ ನಿರ್ಣಯದಂತೆ ನಿಧನರಾದಂತಹ ವ್ಯಕ್ತಿಗಳ ಬಗ್ಗೆ ಒಳ್ಳೆಯ ಅಭಿಪ್ರಾಯಗಳನ್ನು ವ್ಯಕ್ತಪಡಿಸತಕ್ಕಂಥ ಸಂದರ್ಭ ಇದಾಗಿದೆ. ನಮ್ಮ ಜಿಲ್ಲೆಯ ಸಮೀಪದವರಾಗಿದ್ದಂಥ ಶ್ರೀ. ಕೆ. ಎಫ್. ಪಾಟಿಲರ ಬಗ್ಗೆ ಒಂದೆರಡು ಮಾತುಗಳನ್ನು ಆಡಬಯಸುತ್ತೇನೆ. ಅವರೊಬ್ಬ ಅಜಾತಶತ್ರುವಾಗಿದ್ದರು. ಒಮ್ಮೆ ನಾನು ಅವರ ವಿರುದ್ಧವಾಗಿ ಚುನಾವಣೆಗೆ ಸ್ಪರ್ಧಿಸಿದ್ದೆ. ಆದರೆ ಅವರು ಎಂದೂ ನನ್ನನ್ನು ವಿಭಿನ್ನ ದೃಷ್ಟಿಯಿಂದ ನೋಡಿರಲಿಲ್ಲ. ನಿಸ್ಸೀಮ ದೇಶಭಕ್ತರಾಗಿ ದೇಶಸೇವೆಯನ್ನು ಮಾಡಿದ ಅವರು ಜೀವನದ ಕೊನೆಯವರೆಗೂ ಉತ್ತಮವಾದಂಥ ಚಿಂತನೆಗಳನ್ನು ಮಾಡಿದಂಥ ವ್ಯಕ್ತಿಗಳಾಗಿದ್ದರು. ಅವರು ಬಾರತ ಸ್ವಾತಂತ್ರ್ಯ ಸಮರದಲ್ಲಿ ಪೂರ್ಣಭಾಗಿಯಾಗಿ ಹೋರಾಟಮಾಡಿದಂಥ ವ್ಯಕ್ತಿಯಾಗಿದ್ದರು. ಅವರಿಗೂ ಮತ್ತಿತರ ದಿವಂಗತ ಮಾನ್ಯ ವ್ಯಕ್ತಿಗಳ ಆತ್ಮಕ್ಕೂ ಶಾಂತಿಯನ್ನು ಬಯಸುತ್ತೇನೆ.

**Mr. Chairman:** Now as mark of respect for the departed souls, I request the Hon'ble Members to stand in silence for a minute.

**Mr. Chairman:** Obituary reference adopted by the House will be sent to the members of the bereved families.

**ಶ್ರೀಮತಿ ಪ್ರಫುಲ್ಲಾ ಮಧುಕರ್:** ತಾಯಿತನ ಮಹಿಳೆಯರ ಹಕ್ಕು. ಮಾನ್ಯ ನರಸಿಂಹಮೂರ್ತಿಯವರಿಗೆ ಗೊತ್ತಿರಬಹುದು. ಪೋಸ್ಟಲ್ ಸರ್ವಿಸ್‌ನಲ್ಲಿರುವ ಒಬ್ಬ ಉದ್ಯೋಗಿ ಗಂಡನಿಲ್ಲದೆ ಮಗುವನ್ನು ಹಡೆದಳು ಎಂದು ಅವಳಿಗೆ ನೀಡಬೇಕಾಗಿದ್ದ ರಜೆಯನ್ನು ಕೊಡುವುದಿಲ್ಲವೆಂದು ನಿರಾಕರಿಸಿದಾಗ ಶ್ರೀಮತಿ ಮಾರ್ಗರೆಟ್ ಆಳ್ವರವರು, ತಂದೆ ಯಾರಾಗಿದ್ದಾರೆ ಎಂಬುದು ಮುಖ್ಯವಲ್ಲ, ಅವಳು ತಾಯಿಯಾಗಿದ್ದಾಳೆ ಎಂಬುದು ಮುಖ್ಯ ಎಂದು ಹೇಳಿದ್ದರು. ಆ ಅಂಶವನ್ನು ಸಹ ನಮ್ಮ ಧರ್ಮದಲ್ಲಿ ಹೇಳಿದ್ದಾರೆ.

**ಶ್ರೀ ಎಸ್. ಎಸ್. ಪೂಜಾರಿ:** ಮಾರ್ಗರೇಟ್ ಆಳ್ವರವರ ಉದಾಹರಣೆಯನ್ನು ಇಲ್ಲಿ ಕೊಡುವುದು ಸರಿಯಲ್ಲ. ಅದಕ್ಕೂ ಇದಕ್ಕೂ ಸ್ವಲ್ಪವೂ ಸಂಬಂಧವಿಲ್ಲ. ಇಲ್ಲಿ ತಪ್ಪಾಗಿದೆಯೆಂದು ಸ್ಪಷ್ಟವಾಗಿ ಹೇಳುತ್ತೇನೆ.

**ಡಾ॥ ಮಹದೇವ್ ಬಣಕಾರ್:** ಮಾನ್ಯ ಉಪಸಭಾಪತಿಯವರೆ, ಸತ್ಯಕಾಮನ ಬಗ್ಗೆ ಒಂದು ಕಥೆಯನ್ನು ಹೇಳುತ್ತೇನೆ. ಸತ್ಯಕಾಮನ ತಾಯಿ ಒಬ್ಬಳು ವ್ಯಭಿಚಾರಿ, ಸೂಳೆ, ಜಾಬಾಲಿ. ಅವಳಿಗೆ ಮಗು ಹುಟ್ಟುತ್ತದೆ, ಆ ಮಗು ಆಶ್ರಮಕ್ಕೆ ಹೋಗುತ್ತದೆ.

**ಶ್ರೀಮತಿ ಪ್ರಫುಲ್ಲಾ ಮಧುಕರ್:** ಮತ್ತೆ ತಾವು ಇದರ ಬಗ್ಗೆ. . . .

**ಡಾ॥ ಮಹದೇವ್ ಬಣಕಾರ್:** ತಾವು ಸುಮ್ಮನಿರಿ; ನಾನು ಹೇಳುವವರೆಗೆ ಕುಳಿತುಕೊಂಡು ಕೇಳಿ, ಅನಂತರ ಮಾತನಾಡಿ.

**ಶ್ರೀಮತಿ ಪ್ರಫುಲ್ಲಾ ಮಧುಕರ್:** ತಾವು ಆ ರೀತಿ ಮಾತನಾಡಬಾರದು. ತಾವು ಆ ಮಾತನ್ನು ವಾಪಸ್ ತೆಗೆದುಕೊಳ್ಳಬೇಕು. ಮಹಿಳೆಯರ ಬಗ್ಗೆ ಗೌರವದಿಂದ ಮಾತನಾಡುವುದನ್ನು ಕಲಿತುಕೊಳ್ಳಿ.

**ಡಾ॥ ಮಹದೇವ್ ಬಣಕಾರ್:** ನಾನು ಈಲ್ಡ್ ಅಗಿಲ್ಲ.

**ಶ್ರೀ ಎಂ.ಎಸ್. ಸಿದ್ದರಾಜು:** ಅವರು ಆರೀತಿ ಮಾತನಾಡಬಾರದು. ಮಾತನಾಡಲು ಗೌರವವಿದ್ದರೆ ಅವರು ಆ ರೀತಿ ಮಾತನಾಡುತ್ತಿರಲಿಲ್ಲ. ಆ ಪದವನ್ನು ವಾಪಸ್ ತೆಗೆದುಕೊಳ್ಳಬೇಕು.

**ಶ್ರೀ ಟಿ. ಎಸ್. ನರಸಿಂಹಮೂರ್ತಿ:** ನನ್ನದು ಪಾಯಿಂಟ್ ಆಫ್ ಆರ್ಡರ್ ಇದೆ. . . .

**ಶ್ರೀ ಎಂ.ಎಸ್. ಸಿದ್ದರಾಜು:** ಮಾನ್ಯ ಸಭಾಪತಿಯವರೆ, ಬಸವಣ್ಣನವರ ಬಗ್ಗೆ ಅವಮಾನವಾಗಿರುವ ಬಗ್ಗೆ ನಮಗೆಲ್ಲರಿಗು ನೋವಾಗಿದೆ. ಅವರು ತುಂಬ ಗೌರವವುಳ್ಳ ವ್ಯಕ್ತಿಗಳು. ಅವರು ಯಾವುದೇ ಜಾತಿಗೆ, ವ್ಯಕ್ತಿಗೆ ಮೀಸಲಾಗಿಲ್ಲ. ಮಾನ್ಯ ನರಸಿಂಹಮೂರ್ತಿಯವರು ಮೊದಲು ಹೇಳಿದ್ದ ಅಭಿಪ್ರಾಯವನ್ನು ಒಪ್ಪಿಕೊಂಡೆವು; ಆದರೆ ಎರಡನೆಯ ಬಾರಿಗೆ ಅಭಿಪ್ರಾಯವನ್ನ ಹೇಳಿದಾಗ ನಮ್ಮ ಪ್ರಫುಲ್ಲಾ ಮಧುಕರ್‌ರವರು ನಮ್ಮ ಮುಖ್ಯಮಂತ್ರಿಯವರ ಬಗ್ಗೆ ಮಾತನಾಡಬೇಡಿ ಎಂದು ಹೇಳಿದ್ದು. ಆದರೆ ಅವರು ಮೋದಲು ಹೇಳಿದ್ದ ಮಾತು ನೂರಕ್ಕೆ ನೂರು ಸತ್ಯ, ಅದರ ಬಗ್ಗೆ ಸರ್ಕಾರ ಕ್ರಮ ತೆಗೆದುಕೊಳ್ಳಬೇಕು. ಆದರೆ ಬಣಕಾರ್‌ರವರು ಮಾತನಾಡಿರುವ ಪದವನ್ನು ವಾಪಸ್ ತೆಗೆದುಕೊಳ್ಳಬೇಕು.

**ಡಾ|| ಮಹದೇವ್ ಬಣಕಾರ್:** ಅವರು ತಪ್ಪು ತಿಳಿದುಕೊಂಡಿದ್ದಾರೆ. ಅದನ್ನು ನಿವಾರಣೆ ಮಾಡಲು ಹೇಳುತ್ತೇನೆ.

**ಉಪ ಸಭಾಪತಿಯವರು:** ದಯವಿಟ್ಟು ಎಲ್ಲರು ಕುಳಿತುಕೊಳ್ಳಿ.

**ಶ್ರೀ ಟಿ. ಎಸ್. ನರಸಿಂಹಮೂರ್ತಿ:** ನನ್ನದು ಪಾಯಿಂಟ ಆಫ್ ಆರ್ಡರ್ ಇದೆ. . . .

**ಡಾ|| ಮಹದೇವ್ ಬಣಕಾರ್:** ಅವರು ಕಥೆಯನ್ನು ತಪ್ಪಾಗಿ ತಿಳಿದುಕೊಂಡಿದ್ದಾರೆ. ಅದನ್ನು ಹೇಳಿಬಿಡುತ್ತೇನೆ. ನನಗೆ ಒಂದು ನಿಮಿಷ ಅವಕಾಶ ಕೊಡಿ.

**ಶ್ರೀ ಎಂ.ಎಸ್. ಸಿದ್ದರಾಜು:** ಅವರು ಆ ಪದವನ್ನು ವಾಪಸ್ ತೆಗೆದುಕೊಳ್ಳಲು ಹೇಳಬೇಕು.

**ಉಪ ಸಭಾಪತಿಯವರು:** ತಾವು ನಮಗೆ ಮಾತನಾಡಲು ಅವಕಾಶ ಕೊಡದಿದ್ದರೆ ನಾನು ಹೇಗೆ ಹೇಳಲಿ. ದಯಮಾಡಿ ಎಲ್ಲರು ಕುಳಿತುಕೊಳ್ಳಿ.

**ಶ್ರೀ ಟಿ.ಎಸ್. ನರಸಿಂಹಮೂರ್ತಿ:** ನನ್ನದು ಪಾಯಿಂಟ್ ಆಫ್ ಆರ್ಡರ್ ಇದೆ. . . .

**ಶ್ರೀ ಡಿ.ಎಲ್. ಜಗದೀಶ್:** ಮಾನ್ಯ ಉಪಸಭಾಪತಿಯವರೆ, ದಯವಿಟ್ಟು ಆ ಪದವನ್ನು ಕಡತದಿಂದ ತೆಗೆಸಿ. ತಮಗೆ ಕೈಮುಗಿಯುತ್ತೇನೆ.

**ಶ್ರೀ ಟಿ.ಎನ್. ನರಸಿಂಹಮೂರ್ತಿ:** ಅವರು ಮಾತನಾಡುವಾಗ ಆ ತಾಯಿಯ ಮೇಲೆ ಏನೋ ಹೇಳಿದರು. ಅದು ಬೇಡ, ಮಾನ್ಯ ಸಭಾಪತಿಗಳೇ, ವಿಷಯ ಅಂತೂ ಬಹಳ ಗಂಭೀರವಾಗಿದೆ. ಮತ್ತು ನಾನು ಕೂಡ ಪ್ರಥಮದಲ್ಲಿಯೇ ಹೇಳಿದೆ. ಇವರಿಗೆಲ್ಲಾ ಏಕೆ ಕೋಪ ಬಂತು ಅಂದರೆ ಮುಖ್ಯಮಂತ್ರಿಗಳು ಇದನ್ನು ಸಾಲ್ವ ಮಾಡಬಹುದಾಗಿತ್ತು. ಅವರು ಕ್ರಮ ತೆಗೆದುಕೊಂಡಿದ್ದರೆ ಇದು ಇಲ್ಲಿ ಬರುತ್ತಿರಲಿಲ್ಲ ಎನ್ನುವಮಾತು ಹೇಳಿದೆ ಅಷ್ಟೆ; ಮಾನ್ಯ ಹಿರಿಯ ಸದಸ್ಯರಾದ ಮಹದೇವ್ ಬಣಕಾರ್ ಅವರು ವಿಧಾನ ಸಭೆಯಲ್ಲಿ ಕೂಡ ಸದಸ್ಯರಾಗಿದ್ದರು. ಸಾಮಾನ್ಯವಾಗಿ ಸದಸ್ಯರುಗಳಾದ ನಾವು ಮಧ್ಯಪ್ರವೇಶ ಮಾಡುತ್ತೇವೆ. ಮಾಡುವಾಗ ಆಡುವುಂತಹ ಪದಗಳ ಬಗ್ಗೆ ನಾವು ಸ್ವಲ್ಪ ಎಚ್ಚರಿಕೆಯಿಂದ ಹೋಗಬೇಕಾಗುತ್ತದೆ. ಮಾನ್ಯ ಬಣಕಾರ್ ಅವರೇ, ತಾವು ಕುಳಿತುಕೊಳ್ಳಿ ತಾಯಿ ಎಂದು ಹೇಳಿದ್ದರೆ ಸಾಕಾಗುತ್ತಿತ್ತು ಅನೇಕ ಸಾರಿ ನಾನು ಆ ತರಹ ಹೇಳುತ್ತೇನೆ. ಆದರೆ ಬೇರೆ ಆ ಪದ ಏನು ಇದೆ ಅದು ರೆಕಾರ್ಡನಲ್ಲಿ ಹೋಗಿಬಿಟ್ಟರೆ ಅದು ಎಲ್ಲಾ ಕಾಲಕ್ಕೂ ಸರಿ ಕಾಣುವುದಿಲ್ಲ ಎಂದು ಕಾಣುತ್ತದೆ. It is not in good taste. Member, it is better that is taken out from the proceedings.

**ಡಾ ಮಹದೇವ್ ಬಣಕಾರ್:** ನನ್ನದೇನೂ ಅದಕ್ಕೆ ತಕರಾರು ಇಲ್ಲ. ನಾನು ಏನು ಹೇಳಬೇಕಾಗಿದೆ ಅಂದರೆ ನಾನು ತಮಗೆ ಕೈ ಮುಗಿದು ಕೇಳುತ್ತೇನೆ, ಅದು ಒಂದು ಹೇಳಿ ಮುಗಿಸಿ ಬಿಡುತ್ತೇನೆ. ಸತ್ಯಕಾಮನ ಕಥೆಯಿಂದ ಏನು ಅಂದರೆ, ಅವನು ಸ್ಕೂಲ್ ಗೆ ಹೋಗುತ್ತಾನೆ. ಅಲ್ಲಿ ಅವನು ಹೇಳುತ್ತಾನೆ ಅಂದರೆ. . . .

**ಉಪ ಸಭಾಪತಿಯವರು:** ಈಗ ಅವರು ಅದನ್ನು ಒಪ್ಪಿಕೊಡಿದ್ದಾರೆ. ನಾನು ಅದನ್ನು ಡಕ್ಸಪಂಜ್ ಮಾಡಿದ್ದೇನೆ. ಅದನ್ನು ಹೇಳಿದಂತಹ ಸದಸ್ಯರು ಒಪ್ಪಿಕೊಂಡಿದ್ದಾರೆ. ನಾನು ಒಪ್ಪಿಕೊಂಡಿದ್ದೇನೆ.

**ಡಾ ಮಹದೇವ್ ಬಣಕಾರ್:** ಸತ್ಯಕಾಮ ಸ್ಕೂಲ್ ಗೆ ಹೋಗುವ ವಯಸ್ಸಿನಲ್ಲಿ ಆಶ್ರಮಕ್ಕೆ ಹೋಗುತ್ತಾನೆ. ಆಶ್ರಮಕ್ಕೆ ಹೋದಾಗ ಗುರುಗಳು ಏನು ಹೇಳುತ್ತಾರೆ ಅಂದರೆ ತಮ್ಮ, ನಿಮ್ಮ ತಂದೆ ಹೆಸರು ಏನು ಎಂದು. ತಂದೆ ಹೆಸರು ನನಗೆ ಗೊತ್ತಿಲ್ಲ ಎಂದು ಹೇಳುತ್ತಾನೆ. ನೋಡಪ್ಪ, ಇಲ್ಲಿ ಸತ್‌ಕುಲಪರಿಶುದ್ದರಿಗೆ ಮಾತ್ರ ನಾವು ವಿದ್ಯಾ ಹೇಳುತ್ತೇವೆ, ನಿನ್ನ ತಂದೆಯ ಹೆಸರನ್ನು ಹೇಳದೆ ವಿನಃ ಇಲ್ಲ ನಿನಗೆ ಪ್ರವೇಶ ಇಲ್ಲವೆಂದು ಹೇಳಿದಾಗ ಆ ಹುಡುಗ ಮನೆಗೆ ಹೋಗಿ ತಾಯಿಯನ್ನು ಕೇಳುತ್ತಾನೆ. ಆಗ ತಾಯಿ ಏನು ಹೇಳುತ್ತಾಳೆ ಅಂದರೆ ಏನಪ್ಪ ನನ್ನ ಹತ್ತಿರ ಎಷ್ಟು ಜನ ಬಂದರ, ಎಷ್ಟು ಜನ ಹೋದರು, ನಾನು ನಿನ್ನ ತಂದೆ ಯಾರು ಎನ್ನುವುದನ್ನು

ಹೇಗೆ ಹೇಳಲಿ ಎಂದು ಎಂದು ಹೇಳುತ್ತಾಳೆ. ಅವನು ಹೋಗಿ ಆಶ್ರಮದಲ್ಲಿ ಇದನ್ನೇ ಹೇಳುತ್ತಾನೆ. ಆವಾಗ ಅವರು ಪ್ರವೇಶ ಕೊಡಬಾರದಾಗಿತ್ತು. ಅದಕ್ಕೆ ಆವಾಗ ಆಶ್ರಮದ ಗುರುಗಳು ಏನು ಹೇಳುತ್ತಾರೆ ನಿನ್ನ ತಂದೆ ಯಾರು ಎಂದು ಗೊತ್ತಿಲ್ಲ ಎಂದು ನಿಮ್ಮ ತಾಯಿ ಹೇಳಿದಳೆಂದು ಹೇಳಿದೆಯಲ್ಲಾ, ನೀನು ಎಂತಹ ಸತ್ಯವಂತನಪ್ಪ ಎಂದು ಹೇಳಿ ಆಗ ಅವನಿಗೆ ಸತ್ಯಕಾಮ ಎಂದು ಹೆಸರು ಇಟ್ಟು ಅವನಿಗೆ ಆಶ್ರಮದಲ್ಲಿ ವಿಧ್ಯಾಭ್ಯಾಸಕ್ಕೆ ಪ್ರವೇಶ ಕೊಡುತ್ತಾರೆ. ಅದು ಇಷ್ಟೇ ಕಥೆ. ಇದು ತಮಗೆ ಸ್ಪಷ್ಟವಾಗಿ ಕೇಳಲಿಲ್ಲ. ಸ್ಪಷ್ಟವಾಗಿ ಹೇಳಬೇಕು ಎಂದು ಹೇಳಿದೆ. ನನಗೆ ವಿರೋಧ ಇದ್ದೀರಿ ಎಂದು ಹೇಳಲಿಲ್ಲ. ದಯವಿಟ್ಟು ತಮ್ಮ ಮನಸ್ಸಿಗೆ ನೋವಾಗಿದ್ದರೆ ಕ್ಷಮೆ ಕೇಳುತ್ತೇನೆ. ನಾನು ಹೇಳಬೇಕಾಗಿದ್ದ ಕಥೆ ಇದು.

**ಉಪ ಸಭಾಪತಿಯವರು:** ಇದು ಒಂದು ರೀತಿಯ ಸಮಾಜವಾದ ಎಂದು ಹೇಳಬಹುದು.

**ಡಾ॥ ಮಹದೇವ್ ಬಣಕಾರ್:** ಹೌದು.

**ಶ್ರೀ ಬಿ.ಎಸ್. ಹೊರಟ್ಟಿ (ಶಿಕ್ಷಕರ ಕ್ಷೇತ್ರ):** ಮಾನ್ಯ ಸಭಾಪತಿಗಳೇ, ನಾನು ಬಹಳ ಮಾತನಾಡುವುದಕ್ಕೆ ಹೋಗುವುದಿಲ್ಲ. ಹಿರಿಯರಾದ ನರಸಿಂಹಮೂರ್ತಿಯವರು ಸೋದರಿಯಾದ ಪ್ರಫುಲ್ಲಾ ಮಧುಕರ್ ಅವರು ಮಾತನಾಡಿದ್ದಾರೆ. ಇಲ್ಲಿ ನನಗೆ ಏನು ಕೆಡಕು ಅನಿಸುತ್ತದೆ ಅಂದರೆ ನಾನು ಬಹಳ ಸಲ ಇಂಥಾದ್ದರಲ್ಲಿ ಭಾಗವಹಿಸುವುದಿಲ್ಲ. ಬೇಕಾದರೆ ರೆಕಾರ್ಡ ತೆಗೆಸಿ ನೋಡಿ. ಬಸವಣ್ಣನವರು ಒಂದು ಸೀಮಿತವಾದ ಜಾತಿಗೆ ಸೇರಿದವರು ಎಂದು ಹೇಳುವುದು. ಅಂಬೇಡ್ಕರ್‌ರವರನ್ನು ಒಂದು ಸೀಮಿತವಾದಜಾತಿಯವರಿಗೆ ಹೋಲಿಸುವುದು. ಮಹಮದ್ ಪೈಗಂಬರ್ ಅವರನ್ನು ಒಂದು ಸೀಮಿತ ಜಾತಿಯವರಿಗೆ ಹೋಲಿಸುವುದರ ಬಗ್ಗೆ ನಾನು ಹೇಳುವುದು ಇಷ್ಟೆ; ಇವತ್ತು ಈ ಸದನದಲ್ಲಿ ಚರ್ಚೆ ಮಾಡುತ್ತೇವೆ ಜಾತಿ ಬಗ್ಗೆ ಎಲ್ಲಾ ಬಹಳ ಮಾತನಾಡುತ್ತೇವೆ. ನಾವು ಏನು ತಪ್ಪು ಮಾಡುತ್ತೇವೆ ಅಂದರೆ ನಾವು ಒಂದು ನಿರ್ಧಿಷ್ಟವಾದ ಜಾತಿಯ ಬಗ್ಗೆ ಇಲ್ಲಿ ಮಾತನಾಡುತ್ತೇವೆ. ಒಂದು ಸಲ ನಮ್ಮ ಹಿರಿಯರ ಸಲುವಾಗಿ ಬೇಸರ ಎನಿಸಿದೆ. ನಮ್ಮ ತಿಪ್ಪಣ್ಣನವರು, ಖಂಡ್ರೆಯವರು, ಬಣಕಾರ್‌ರವರುಒಂದು ಅಪೀಲು ಕಳುಹಿಸಿ ಏನು ಹೇಳಿದ್ದಾರೆಂದು ಸತ್ಯಕಾಮನ ಜನ್ಮಕ್ಕೆ ಹೋಲಿಸಿದಾಗ ಇದು ಇತಿಹಾಸಕ್ಕೆ ತದ್ವಿರುದ್ದವಾಗಿದೆ. ಇದರಿಂದ ಬಸವಾಭಿಮಾನಿಗಳಿಗೆ ಮತ್ತು ವೀರಶೈವರವರುಗಳಿಗೆ ಅತಿ ಕ್ರೋಧ ಮತ್ತು ಕ್ಷೋಭೆಯನ್ನುಂಟುಮಾಡಿದೆ ಎಂದಿದ್ದಾರೆ. ಏಕೆ ವೀರಶೈವರುಗಳಿಗೆ ಅಷ್ಟೇ ಕ್ಷೋಭೆ ಇದು. ಕ್ಷೋಭೆ ಬೇರೆಯವರಿಗೆ ಇಲ್ಲವೇ? ಇದೇನಾಗುತ್ತಿದೆ ಎಂದರೆ ಸಮಾಜದಲ್ಲಿ

ನಾವು ಒಬ್ಬರ ಸಲುವಾಗಿ ಅಷ್ಟೇ ಟೀ ಆತಿಥ್ಯಕ್ಕಾಗಿ ಕರೆಯುತ್ತೇನೆ, ತಾವು ಬನ್ನಿ . ನಮ್ಮ ಶಾಸಕ ಮಿತ್ರರುಗಳಿಗೆ ಹೇಳುವುದಾದರೆ, ಇದನ್ನೊಂದು ಸವಾಲು ಎಂದು ಸ್ವೀಕರಿಸಬಾರದು. ನಾನು ನನ್ನ ಗ್ರಂಥ ಭಂಡಾರದಲ್ಲಿ ಸಂಗ್ರಹಿಸಿಟ್ಟಿರುವಂಥಹ ಪುಸ್ತಕಗಳಲ್ಲಿ ಈ ಒಂಧು ಪುಸ್ತಕವು ಮತ್ತೊಬ್ಬ ಶಾಸಕರ ಹತ್ತಿರವಿದೆಯೆಂದು ಈ ಸದನದ ಕಲಾಪ ಮುಗಿಯುವದರೊಳಗೆ ಯಾರಾದರು ಹೇಳಿದರೆ ನಾನು ಈ ಸದನಕ್ಕೆ ರಾಜೀನಾಮೆ ಕೊಟ್ಟು ಹೋಗುತ್ತೇನೆ. ನಾನು ಏತಕ್ಕೆ ಈ ಮಾತನ್ನು ಹೇಳುತ್ತೇನೆಂದರೆ, ಬಸವೇಶ್ವರ ಕುರಿತಾದ ಪುಸ್ತಕಗಳಿರಬಹುದು. . . .

**ಡಾ॥ ಮಹದೇವ್ ಬಣಕಾರ್:** ನನ್ನ ಹತ್ತಿರ ಏಳೂವರೆ ಸಾವಿರದಷ್ಟು ಪುಸ್ತಕಳಿವೆ.

**ಶ್ರೀ ಟಿ.ಎನ್ ನರಸಿಂಹಮೂರ್ತಿ:** ಈಗ ಒಂದು ಕೆಲಸ ಮಾಡೋಣ, ಹಳೆಯ ಮೈಸೂರ ಭಾಗದಲ್ಲಿರುವ ಶಾಸಕರುಗಳೆನಿದ್ದಾರೆ;

**ಶ್ರೀ ಟಿ.ಎನ್. ನರಸಿಂಹಮೂರ್ತಿ:** ಅಮೆಂಡ್‌ಮೆಂಟ್ ಅಲ್ಲ. ಇವರು ಯಾವಾಗಕಲೂ ಉತ್ತರ ಕರ್ನಾಟಕದ ಭಾಗವೆಂದು ಹೇಳುತ್ತಾರೆ. ನಾನು ಆ ಭಾಗಕ್ಕೆ ಹೋಗಿ ಅವರ ಮನೆಯನ್ನು ನಾನು ನೋಡಿಲ್ಲ. ಇವತ್ತು ಚೌಡಯ್ಯನವರರಿದ್ದರೆ, ಮಲ್ಲಣ್ಣರವರಿದ್ದರೆ ಹಳೆಯ ಮೈಸೂರ ಭಾಗ ಏನಿದೆ, ನಾನು ಹೆಮ್ಮೆಯಿಂದ ಹೇಳುವ ಮಾತು. ನಾನು ಬಸವಣ್ಣನವರ ಬಗ್ಗೆ ಸಾಕಷ್ಟು ಪುಸ್ತಕಗಳನ್ನು ಸಂಗ್ರಹಿಸಿಟ್ಟಿದ್ದೇನೆ. ಆ ಹಿನ್ನೆಲೆಯಲ್ಲಿ ನಾನು ಹೇಳುತ್ತಿದ್ದೇನೆ. ಕರ್ನಾಟಕ ರಾಜ್ಯದಲ್ಲಿ ಒಂದು ಸರ್ಕಾರವಿದೆ, ಇವತ್ತು ನೀವು ಸರ್ಕಾರವನ್ನು ನಡೆಸುತ್ತಿದ್ದಿರಿ, ನಾವು ಅಸೂಯೆ ಪಡುತ್ತಿಲ್ಲ. ಸಮಾಜವಾದದ ಹಿನ್ನೆಲೆಯಲ್ಲಿ ಬಂದಿರುವಂಥ ಶ್ರೀ ಜೆ. ಹೆಚ್. ಪಟೇಲರು ಇವತ್ತು ರಾಜ್ಯದ ಮುಖ್ಯಮಂತ್ರಿಗಳಾಗಿದ್ದಾರೆ. ಅವರ ಮಂತ್ರಿಮಂಡಲದಲ್ಲಿ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್‌ರವರು ಮಂತ್ರಿಯಾಗಿದ್ದಾರೆ. ನಾನು ಈ ಮಾತನ್ನು ಏಕೆ ಹೆಳುತ್ತಿದ್ದೇನೆಂದರೆ; ಅದನ್ನು ಬಿಡಿಸಿ ಹೇಳಲು ಇಷ್ಟವಿಲ್ಲ. ಅದನ್ನು ಪ್ರತಿಯೊಬ್ಬರು ಅರ್ಥಮಾಡಿಕೊಳ್ಳುವ ಸಾಮರ್ಥ್ಯವಿರುವುದರಿಂದ ಅಷ್ಟಕ್ಕೇ ಬಿಡುತ್ತಿದ್ದೇನೆ. ದಿವಂಗತ ದೇವರಾಜ ಅರಸುರವರ ಹೆಸರನ್ನು ಇಲ್ಲಿ ಅನೇಕ ಸಾರಿ ಜನರು ಸ್ಮರಿಸುತ್ತಾರೆ. ನಾನು ಮೆಚ್ಚಿದ ಕೆಲವೇ ದಲಿತ ವರ್ಗದ ನಾಯಕರಲ್ಲಿ ದಿವಂಗತ ಶ್ರೀಮಾನ್ ಬಸವಲಿಂಗಪ್ಪನವರೂ ಒಬ್ಬರಾಗಿದ್ದರು. ಅವರು ಬಹಳ ಮೇಧಾವಿಯಾಗಿದ್ದು, ಯಾರೊಡನೆ ಆದರೂ ಕೂಡ ಬಹಳ ನಿರ್ಭಯ, ನಿರ್ದಾಕ್ಷಿಣ್ಯದಿಂದ ನಡೆದುಕೊಳ್ಳುತ್ತಿದ್ದರು. ಅವರು ಮಂತ್ರಿಯಾಗಿದ್ದಾಗ ಎಲ್ಲಿಯೋ ಒಂದು ಕಡೆ ಭಾಷಣ ಮಾಡಿದರು. ಭಗವದ್ಗೀತೆ ಬಗ್ಗೆ ಅವರು ಪ್ರಶ್ನಿಸಿದರು,

ಹಾಗೆಯೇ ಕನ್ನಡ ಸಾಹಿತ್ಯದ ಬಗ್ಗೆಯೂ ಹೇಳಿದರು. ಕನ್ನಡ ಸಾಹಿತ್ಯದ ಬಗ್ಗೆ ಬಳಸಿದಂಥ ಒಂದು ಪದವೇನಿದೆ, ನಾನು ಅವತ್ತು ವಿಧಾನ ಪರಿಷತ್ತಿನಲ್ಲಿ ಉಪ ಸಭಾಪತಿಯಾಗಿದ್ದೆ, ಆಗ ಹೆಚ್. ಕೆ. ಪಾಟೀಲರು ಕೂಡ ಮಂತ್ರಿಗಳಾಗಿದ್ದರು. ಆಗ ಮಂತ್ರಿಮಂಡಲದಲ್ಲಿ ಸ್ಫೋಟಕವಾಯಿತು. ಕೊನೆಗೆ ರಾಷ್ಟ್ರಕವಿ ಕುವೆಂಪುರವರೂ ಕೂಡ ಬಸವಲಿಂಗಪ್ಪನವರು ಬಳಸಿದಂಥ ಪದವೇನಿದೆ, 'ಕನ್ನಡ ಸಾಹಿತ್ಯ ಬೂಸಾ' ಎಂದು ಏನು ಹೇಳಿದ್ದರು, ಅದನ್ನು ಸಮರ್ಥಿಸಿದರು. ಕನ್ನಡ ಸಾಹಿತ್ಯವೆಲ್ಲವೂ ಪವಿತ್ರವಾದ ಸಾಹಿತ್ಯವಲ್ಲ, ಬೂಸಾದಿಂದಲೂ ಇರಬಹುದೆಂದು ಪ್ರತಿಪಾದಿಸಿದರು. ಈ ಹಿನ್ನೆಲೆಯಲ್ಲಿ ಆಗ ಮಂತ್ರಿಮಂಡಲದಲ್ಲಿದ್ದಂಥ ಐದು ಜನ ಮಂತ್ರಿಗಳು ರಾಜೀನಾಮೆ ಕೊಟ್ಟರು, ಬೇಕಾದರೆ ಆ ಕುರಿತ ಪತ್ರಿಕಾ ವರದಿಗಳನ್ನು ನೋಡಿ. ಅವರುಗಳು ರಾಜೀನಾಮೆ ಕೊಟ್ಟ ನಂತರ ಮಂತ್ರಿಮಂಡಲ ಪುನರ್‌ರಚನೆಯಾಯಿತು. ಅಂತಹುದೇ ವಾತಾವರಣ ಇಲ್ಲಿ ಆಗಬೇಕೆಂದು ಬಯಸುವವನು ನಾನಲ್ಲ. ಆವತ್ತಿನ ಸರ್ಕಾರದ ಮುಖ್ಯ ಮಂತ್ರಿಗಳು. . . .

**ಶ್ರೀ ಬಿ.ಎ. ಮೊಯ್ದೀನ್:** ಅವರೆಲ್ಲಾ ಒಳಗೆ ಬಂದರು, ಬಸವಲಿಂಗಪ್ಪನವರು ಹೊರಗೆ

**ಶ್ರೀ ಟಿ.ಎನ್. ನರಸಿಂಹಮೂರ್ತಿ:** ರಾಜೀನಾಮೆ ಕೊಟ್ಟಿರುವುದು ನಿಜ ತಾನೆ? ಆ ಮಾತು ಬೇರೆ ಮೊಯ್ದೀನ್‌ರವರು ಕಾಂಗ್ರೆಸ್ಸಿನ ಬಹಳ ಅಚ್ಚುಕಟ್ಟಾಗಿದ್ದಂಥ ವ್ಯಕ್ತಿಯಾಗಿದ್ದರು. ನಮ್ಮ ಜೊತೆ ಶಾಸಕರು ಇದ್ದರು. ಅವರು ಶಿಸ್ತಿನಿಂದ ಇರುತ್ತಿದುದ್ದನ್ನು ಕಂಡು ಅವರನ್ನು ಪ್ರೀತಿಸಿದ್ದೆ. ಆದರೆ, ಕಾಂಗ್ರೆಸ್ ಪಕ್ಷಕ್ಕೆ ರಾಜೀನಾಮೆ ಕೊಟ್ಟು ಏಕೆ ಹೊರಟು ಹೋದರೋ ಕಾರಣ ಗೊತ್ತಾಗಲಿಲ್ಲ. ಈಗ ಅವರು ಮಂತ್ರಿಗಳಾಗಿದ್ದಾರೆ, ಸಂತೋಷ. ಅವತ್ತು ಬಸವಲಿಂಗಪ್ಪನವರು ಬಳಸಿದ ಪದದ ಹಿನ್ನೆಲೆಯಲ್ಲಿ ತಮ್ಮ ಕ್ಯಾಬಿನೆಟ್ ದರ್ಜೆಯ ಮಂತ್ರಿ ಸ್ಥಾನಕ್ಕೆ ರಾಜೀನಾಮೆ ಕೊಟ್ಟಿರುವ ಪ್ರಕರಣ ಇವತ್ತಿಗೂ ಜೀವಂತವಾಗಿ ಉಳಿದಿದೆ. ಇಷ್ಟೆಲ್ಲಾ ಆದರೂ ನಾನು ಕೇಳುತ್ತಿರುವುದೇನೆಂದರೆ, 'ಧರ್ಮಕಾರಣ' ಪುಸ್ತಕವನ್ನು ಬರದವರೆಲ್ಲಾ, ಕರ್ನಾಟಕ ಸರ್ಕಾರದಲ್ಲಿ ಮೊದಲು ಇದು ಶಿಕ್ಷನ ಇಲಾಖೆಯಲ್ಲಿತ್ತು, ನಂತರ ಇದಕ್ಕೆ ಪ್ರತ್ಯೇಕವಾದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಕೊಟ್ಟರು. ಬಳಿಕ ಸಾಹಿತ್ಯ ಅಕಾಡೆಮಿ ಎಂದು ಸ್ಥಾಪಿಸಿ ಅದರಲ್ಲಿ ಹೆಸರಾಂಥ ಸಾಹಿತಿಗಳನ್ನು ನೇಮಿಸಿದರು.

**ಡಾ॥ ಮಹದೇವ್ ಬಣಕಾರ್:** ಮಹಾಭಾರತ ಗ್ರಂಥ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಅಚ್ಚಾಗಿದ್ದು ಅದರ ಬೆಲೆ ಎರಡು ರೂಪಾಯಿ ಇತ್ತು. ಕಾರಣ, ಅದು ಜನಸಾಮಾನ್ಯರಿಗೆ ಮುಟ್ಟಬೇಕೆನ್ನುವ ಉದ್ದೇಶದಿಂದ ಪುಸ್ತಕ ಪ್ರಕಟಣೆಯನ್ನು

ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ವಹಿಸಲಾಗಿತ್ತು. ಈಗ ಅದರ ಬೆಲೆ ಎಪ್ಪತ್ತು ರೂಪಾಯಿಗಳಾಗಿವೆ.

**ಡಾ॥ ಮಹದೇವ್ ಬಣಕಾರ್ (ನಾಮ ನಿರ್ದೇಶನ ಹೊಂದಿದವರು):** ಮಾನ್ಯ ಸಭಾಪತಿಗಳೇ, ಈ 'ಧರ್ಮಕಾರಣ' ಗ್ರಂಥಕ್ಕೆ ಇಷ್ಟೊಂದು ವ್ಯಾಪಕವಾದ ಪ್ರಚಾರ ದೊರೆಯಬಾರದಾಗಿತ್ತು. ಈ ಬಗ್ಗೆ ಮೊಗಲೇ ಮಾನ್ಯ ಮುಖ್ಯಮಂತ್ರಿಗಳನ್ನು ಕಂಡಾಗ ಅವರೇ ನಾಲ್ಕು ಜನರನ್ನು ಕರೆಯಿಸಿ ಯಾವುದೋ ಒಂದು ತೀರ್ಮಾನಕ್ಕೆ ಬಂದು ಮೊದಲನೇ ಪ್ಯಾರವನ್ನು ಓದಿದ ತಕ್ಷಣ ಅವರೇ ಈ ಗ್ರಂಥವನ್ನು ಬ್ಯಾನ್ ಮಾಡಿಬಿಡುತ್ತಾರೆ, ಅದರಲ್ಲೇನೂ ಅನುಮಾನವಿಲ್ಲ. ಅವರಿಗೇನೂ ಹೃದಯ ಇಲ್ಲ ಎಂದು ಹೇಳುವಂತಿಲ್ಲ. ಬಸವಣ್ಣ, ಚೆನ್ನಬಸವಣ್ಣ, ಅಕ್ಕನಾಗಮ್ಮ ಇವರುಗಳ ಬಗ್ಗೆ ಇಲ್ಲಿ ವಿರೋಧಿಗಳು ಯಾರು ಇಲ್ಲ. ವಿರೋಧಿಗಳಿದ್ದಾರೆ ಎಂದು ನಾವು ತಿಳಿದುಕೊಂಡೂ ಇಲ್ಲ, ಮತ್ತು ಅವರುಗಳು ಯಾರು ಇಲ್ಲಿ ಇಲ್ಲ. ಇಲ್ಲಿ ಬಂದಿರುವ ಪ್ರಶ್ನೆಯೆಂದರೆ ಈ ಬಗ್ಗೆ ಮನವರಿಕೆಯಾಗಬೇಕಾಗಿದ್ದರಲ್ಲಿ ಸ್ವಲ್ಪ ತಡವಾಗಿದೆ ಅಷ್ಟೆ; ಆದರೆ ಈ ಗ್ರಂಥದ ಬಗ್ಗೆ ಇಷ್ಟೊಂದು ವ್ಯಾಪಕವಾದ ಪ್ರಚಾರವಾಗಿದ್ದರಿಂದ ಏನಾಯಿತು ಎಂದರೆ ನಮ್ಮ ಕಾದಂಬರಿಗಾರರಾದ ನಾರಾಯಣ್‌ರವರು ಏನಿದ್ದಾರೆ; ಗಾಂಧಿ ಹೆಸರಿನ ಜೊತೆಗೆ ಗೊಡ್ಸೆ ಹೆಸರು ಉಳಿದಂತಾಯಿತು. ಇದು ಬಹಳ ದೊಡ್ಡ ದುರ್ದೈವ. ನಾನು ಈ ಗ್ರಂಥದಲ್ಲಿರುವ ಎರಡನೇ ಎರಡು ವಿಷಯಗಳ ಬಗ್ಗೆ ಮಾತನಾಡಬಯುಸುತ್ತೇನೆ. ಬಸವಣ್ಣ ಬಾಗೇವಾಡಿಯನ್ನು ಏಕೆ ಬಿಟ್ಟ ಎಂಬುದರ ಬಗ್ಗೆ ಎಲ್ಲರೂ ಕಥೆ ಹೇಳಿದರು. ಅವರ ಅಕ್ಕ ಕದ್ದು ಬಸುರಿಯಾಗಿದ್ದಳು, ಈ ವಿಷಯ ಜನರಿಗೆ ತಿಳಿದು ಆಕೆಯನ್ನು ಬಾಯ್‌ಕಾಟ್ ಮಾಡಿದರು, ಆಗ ಆಕೆಯ ಜೊತೆಗೆ ಈತನೂ ಹೋದ ಎಂದು ಹೇಳಿದರು. ಅದಲ್ಲ ಚರಿತ್ರೆ. 'ಜನ್ಮನ ಜಾಯತೇ ಶೂದ್ರ: ಸಂಸ್ಕಾರ ದ್ವಿಚುಚ್ಚತೆ' ಎಂದು ಬ್ರಾಹ್ಮಣರಲ್ಲಿ ಒಂದು ಮಾತಿದೆ. ಅವರು 8ನೇ ವರ್ಷ ಮುಗಿಯುವವರೆಗೆ ಕಾಯುವುದಿಲ್ಲ, ಸರಿಯಾಗಿ 8ನೇ ವರ್ಷದಲ್ಲಿ ಉಪನಯನವನ್ನು ಮಾಡಿ ಈ ಮಾತನ್ನು ಉಪದೇಶ ಮಾಡುತ್ತಾರೆ. ಈ ರೀತಿಯಲ್ಲಿ ಹೇಳಿದರೆ ಅಂದು ಬಸವಣ್ಣನವರು ಕೇಳುತ್ತಾರೆ. 'ಜನ್ಮನ ಜಾಯತೇ ಶೂದ್ರ: ಸಂಸ್ಕಾರ ದ್ವಿಬುಚ್ಚತೆ' ಎಂದರೆ ಹುಟ್ಟುವಾಗ ಶೂದ್ರರಾಗಿಯೇ ಹುಟ್ಟುತ್ತಾರೆ, ಸಂಸ್ಕಾರದಿಂದ ಮಾತ್ರ ದ್ವಿಜ, ಭೂಸುರ, ಬ್ರಾಹ್ಮಣ, ಶ್ರೇಷ್ಠ ಆಗುತ್ತಾರೆ ಎಂದು ಇದರ ಅರ್ಥ. ಅದನ್ನು ಬಸವಣ್ಣ ಒಪ್ಪಿಕೊಳ್ಳುತ್ತಾನೆ. ಅದರಂತೆ ನನ್ನ ಬೆನ್ನಿನ ಹಿಂದೆಯೇ ಹುಟ್ಟಿರತಕ್ಕಂಥ ತನ್ನ ಅಕ್ಕನಿಗೆ ಇದನ್ನು ಏಕೆ ಕಟ್ಟಲಿಲ್ಲ ಎಂದು ಕೇಳುತ್ತಾನೆ. ಇದು ಮೊದಲನೇ ಪ್ರಶ್ನೆ. ಎರಡನೇ ಪ್ರಶ್ನೆಯಲ್ಲಿ ಹುಟ್ಟಿನಿಂದಲೇ ಬಂದಂಥ ಶೂದ್ರತ್ವವನ್ನು ಹೊತ್ತುಕೊಂಡು ಇದ್ದಂಥ ಅಮ್ಮನ ಜೊತೆಗೆ ಶೂದ್ರತ್ವವನ್ನು

ಧರ್ಮಧೀಕ್ಷೆಯನ್ನು ತೆಗೆದುಕೊಂಡು ಕಳೆದುಕೊಂಡಂಥ ನಮ್ಮ ತಂದೆ, ಇವರಿಬ್ಬರಿಗೂ ಹುಟ್ಟಿದ ಮಗುವ ಕೇಳೇನೋ ನೀನಾರ ಮಗನೆಂದು, ನನ್ನದೇ ಒಂದು ಚರಿತ್ರೆಯಿದು ಎನ್ನುವಂಥದ್ದಲ್ಲ. ಈ ಒಂದು ದೃಷ್ಟಿಯಿಂದ ಬಸವಣ್ಣ ಈ ಧರ್ಮವನ್ನು ಚಾರಿಟಿ ಬಿಗಿನ್ಸ ಅಟ್ ಹೋಮ್ ಎಂದು ನಾವು ಏನು ಕರೆಯುತ್ತೇವೆ, ಅದರಂತೆ ಬ್ರಾಹ್ಮಣ್ಯತ್ವದಲ್ಲಿ ಇದ್ದಂಥ ಅನೇಕ ದೋಷಗಳ ಬಗ್ಗೆ ಮೊದಲನೇ ಕ್ರಾಂತಿ ಪ್ರಾರಂಭವಾಗಿದ್ದು ಬಸವಣ್ಣ 8ನೇ ವರ್ಷ ವಯಸ್ಸಿನವನಿದ್ದಾಗ. ಇದು ಕೇಳುವಂಥ ಪ್ರಶ್ನೆಯಾಗಿದೆ. ಈ ಬಗ್ಗೆ ಕೆಲವರು ಹೇಳಬಹುದು 8ನೇ ವರ್ಷದಲ್ಲಿ ಇಂಥ ಪ್ರಶ್ನೆಯನ್ನು ಬಸವಣ್ಣ ಕೇಳುವ ಮಟ್ಟದಲ್ಲಿ ಇದ್ದನೇ ಎಂದು. ಇದ್ದ, ವೇದದಲ್ಲಿ ಒಂದು ಮಾತಿದೆ, 'ತೇಜಸಾಹ್ಮಿನಾವಯಃ ಸಮೀಕ್ಷತೆ' ಅಂದರೆ ಪ್ರತಿಭಾವಂತರಿಗೆ ವಯಸ್ಸಿನ ನಿರ್ಭಂದವಿಲ್ಲ. ಈ ರೀತಿಯಲ್ಲಿ ಪ್ರಶ್ನೆಯನ್ನು ಬಸವಣ್ಣ ಕೇಳಿದಾಗ ಅಗ್ರಹಾರದಲ್ಲಿದ್ದಂಥ ಒಡೆಯನಾದ ಅವರ ಅಪ್ಪನಿಗೆ ತುಂಬಾ ಅವಮಾನವಾಗುತ್ತದೆ. ನಿನ್ನ ಮಗನಿಗೆ ನೀನು ಜನಿವಾರ ಕಟ್ಟುವುದಕ್ಕೆ ಆಗಲಿಲ್ಲ, ಪ್ರಾಯಶಃ ಈ ಘಟನೆಯನ್ನು ಮುಚ್ಚಿಕೊಳ್ಳುವುದಕ್ಕೋಸ್ಕರ ಕೆಲವು ಜಾತಿವಾದಿಗಳು ಈ ಘಟನೆಯನ್ನು ಮುಂದೆ ತರಲಿಲ್ಲ, ಏಕೆಂದರೆ ಗಂಡಿಗೆ ಜನಿವಾರವುಂಟು, ಹೆಣ್ಣಿಗಿಲ್ಲ ಎನ್ನತಕ್ಕಂಥದ್ದು ಪ್ರಚಲಿತವಾಗಿರುವ ವಿಷಯ. ಇವತ್ತಿಗೂ ನಾವು ಅದನ್ನು ಇನ್ನೊಂದು ರೀತಿಯಲ್ಲಿ ಅವಮಾನ ಎಂದು ಮುಚ್ಚಿಟ್ಟಿದ್ದರ ತಪ್ಪೇನಲ್ಲ ಅದು, ಮುಚ್ಚಿಟ್ಟಿಕೊಳ್ಳಿ. ಆದರೆ ಬಸವಣ್ಣನ ದೃಷ್ಟಿಯಲ್ಲಿ "ಮೊಲೆ ಮೂಡಿ ಬಂದರೆ ಹೆಣ್ಣೆಂಬರು, ಗಡ್ಡ ಮೀಸೆ ಬಂದರೆ ಗಂಡೆಂಬರು, ನಡುವೆ ಸುಳಿವ ಆತ್ಮ ಹೆಣ್ಣೂ ಅಲ್ಲ, ಗಂಡೂ ಅಲ್ಲ." ಇಲ್ಲಿ ಬಂದಿರುವ ಪ್ರಶ್ನೆಯೆಂದರೆ ಆತ್ಮ ಪರಮಾತ್ಮನ ಒಂದು ಅಂಶ. ಧರ್ಮದ ಉದ್ದೇಶ ಏನೆಂದರೆ ಆತ್ಮದ ಆಹಾರ ಧರ್ಮ. ಈ ಆತ್ಮ ಪರಮಾತ್ಮನಲ್ಲಿ ಒಂದುಗೂಡಬೇಕಾದರೆ ಅದಕ್ಕೆ ಧರ್ಮದ ಧೀಕ್ಷೆ, ಸಂಸ್ಕಾರ ಬೇಕೇ ಬೇಕಾಗುತ್ತದೆ. ಇಲ್ಲಿ ಹೆಣ್ಣಿಗೆ ಇಲ್ಲ, ಗಂಡಿಗೆ ಉಂಟು ಎಂದಮೇಲೆ ಇದು ಧರ್ಮವಲ್ಲ. ಇದು ಮೂಲ ಪ್ರಶ್ನೆಯಾಗಿದೆ. ಏಕೆಂದರೆ ಧರ್ಮ ಮನುಷ್ಯನನ್ನು ಎತ್ತಿರುಸುತ್ತದೆ, ಆದರೆ ಜಾತಿ ಮನುಷ್ಯನನ್ನು ಕತ್ತರಿಸುತ್ತದೆ. ಧರ್ಮ ಮನುಷ್ಯನನ್ನು ಒಂದುಗೂಡಿಸುತ್ತದೆ, ಆದರೆ ಜಾತಿ ಮನುಷ್ಯನನ್ನು ಅಗಲಿಸುತ್ತದೆ. ನನ್ನ ಮನೆಯಲ್ಲಿ ಇರತಕ್ಕಂಥ, ನನ್ನ ಜೊತೆಯಲ್ಲಿ ಹುಟ್ಟಿರತಕ್ಕಂಥ ನನ್ನ ಅಕ್ಕ ಹೆಣ್ಣು, ನನ್ನ ಹೆತ್ತವಳೂ ಹೆಣ್ಣು, ನಾಳೆ ನನ್ನನ್ನು ಮದುವೆಯಾಗಿ ನಿಮ್ಮ ಮನೆಗೆ ಬರತಕ್ಕಂಥ ಸೊಸೆಯೂ ಕೂಡ ಹೆಣ್ಣೇ. ಅವಳಿಗೆ ಧರ್ಮಧೀಕ್ಷೆಯೇ ಇಲ್ಲವೆಂದಮೇಲೆ ಇದು ಜಾತಿ ಧರ್ಮವಲ್ಲ. ಇದು ಮೊದಲನೇ ಸಿದ್ಧಾಂತ. ಇದನ್ನು 13ನೇ ಶತಮಾನದಲ್ಲಿದ್ದಂಥ ಹರಿಹರನ ರಗಳೆಗಳಲ್ಲಿ ನಾವು ಕಾಣುತ್ತೇವೆ. 'ಕರ್ಮಲತೆಯದ್ದಿಂತ ಜನಿವಾರನ್ನರಿದು ಬಿಸುಟಿ ಅಂದಮೇಲೆ

ಇಲ್ಲಿ ಜನಿವಾರ ಧಿಕ್ಷೆ ಆಗಿತ್ತು ಎನ್ನುವ ಅರ್ಥ ಬರುತ್ತದೆ. ಆ ಜನಿವಾರನ್ನು ಬಿಚ್ಚಿ ಒಗೆದು ಹೋದ ಎಂದಮೇಲೆ ಧೀಕ್ಷೆ ಆಗಿತ್ತು ಎನ್ನುವ ಅರ್ಥ ಬರುತ್ತದೆ. ಆ ಜನಿವಾರವನ್ನು ಬಿಚ್ಚಿ ಒಗೆದು ಹೋದ ಎಂದ ಮೇಲೆ ಧೀಕ್ಷೆ ಆಗಿತ್ತು ಎಂದಾಯಿತು. ಆದರೆ ಈ ಗ್ರಂಥದಲ್ಲಿ ಧೀಕ್ಷೆಯ ಪ್ರಶ್ನೆಯನ್ನು ಎತ್ತೇ ಇಲ್ಲ. ಇಲ್ಲಿ ಬಹಳ ಮಹತ್ವವಾದ ವಿಷಯಗಳೆಂದರೆ ಮಾನವತೆಯ ಪ್ರಶ್ನೆ, ಆತ್ಮ ಪರಮಾತ್ಮನ ಹೊಂದಾಣಿಕೆಯ ಪ್ರಶ್ನೆ ಇಲ್ಲಿದೆ. ಈ ದೃಷ್ಟಿಯಿಂದ ಬಸವಣ್ಣ ಊರನ್ನು ಬಿಟ್ಟು ಹೋದನೇ ಹೊರತು ಅವನು ಇನ್ನೊಂದು ಕಾರಣಕ್ಕೆ ಹೋಗಲಿಲ್ಲ. ಅವರಕ್ಕ ಕದ್ದು ಬಸುರಿಯೂ ಆಗಿರಲಿಲ್ಲ, ಯಾವ ಬಾಣಂತನಕ್ಕು ಹೋಗಿರಲಿಲ್ಲ. ಇಂಥ ಒಂದು ಚರಿತ್ರೆಯನ್ನು ತಿರುಚಿದ್ದಾರೆ. ಬಸವಣ್ಣ ಮುಂದೆ ಲಿಂಗವನ್ನು ಕಟ್ಟಿದ, ಬಹಳ ಜನರಿಗೆ ಈ ಬಗ್ಗೆ ಸಂಶಯ ಇದೆ, ಜನಿವಾರ ಹೇಗೆ ಜಾತಿಯ ಸಂಕೇತವಾಗಿತ್ತೋ ಅದೇ ರೀತಿಯಲ್ಲಿ ಲಿಂಗವೂ ಕೂಡ ಒಂದು ಜಾತಿಯ ಸಂಕೇತವಾಗಿತ್ತು. ಅದನ್ನು ತಾವು ದಯವಿಟ್ಟು ಗಮನದಲ್ಲಿಟ್ಟುಕೊಳ್ಳಬೇಕು. ಅದಕ್ಕೇ ಬಸವಣ್ಣ ಸ್ಥಾವರ ಲಿಂಗಗಳು ಎಲ್ಲಿವೆಯೋ ಅವನ್ನು ಬಿಟ್ಟು ಇಷ್ಟಲಿಂಗವನ್ನು ಕಟ್ಟಿದ. ಲಿಂಗ ಎಂದರೆ ಅದು ಜಾತಿಯಕುರುಹಲ್ಲ, ಹೇಗೆ ತಾಳಿ, ಮೂಗುಬಟ್ಟು ಮದುವೆಯಾಗಿರುವ ಹೆಣ್ಣು ಮಗಳಿಗೆ ಚಿಹ್ನೆಯೋ, ಈ ಲಿಂಗವನ್ನು ಕಟ್ಟಿರತಕ್ಕಂಥ ಲಿಂಗಾಯತರದು ಒಂದು ಜಾತಿಯ ಕುರುಹಿಗಾಗಿ ಅಲ್ಲ. ಬಸವಣ್ಣನ ದೃಷ್ಟಿಯಲ್ಲಿ ಇವತ್ತೂ ಗೋದಾವರಿ, ಕೃಷ್ಣಾ, ಕಾವೇರಿ ಈ ಎಲ್ಲಾ ನದಿಗಳು ಎಲ್ಲೇ ಹರಿದರೂ ಕೂಡ ಅವುಗಳು ಸಮುದ್ರವನ್ನೇ ಸೇರುತ್ತವೆ. ಹಾಗೆಯೇ ಈ ಲಿಂಗ ಕಟ್ಟಿರುವುದರಲ್ಲೂ ಕೂಡ ಪರಮಾತ್ಮ ಅಣುರೇಣು ತೃಣಕಾಷ್ಟದಲ್ಲೆಲ್ಲದರಲ್ಲೂ ಅಡಗಿದ್ದಾನೆ. ಅವನಿಗಾಗಿ ಈ ಬಸವೇಶ್ವರ ದೇವಸ್ಥಾನ, ಆ ದೇವಸ್ಥಾನ ಈ ದೇವಸ್ಥಾನ ಎಂಬುದೆಲ್ಲಾ ಸುಳ್ಳು. ಇವ್ಯಾವುವು ಬಸವಣ್ಣನ ದೃಷ್ಟಿಯಲ್ಲಿ ಇಲ್ಲ. 'ಜಗದಗಲ, ಮುಗಿಲಗಲ ನಿಮ್ಮಗಲ ಪಾತಾಳದಿಂದತ್ತ ನಿಮ್ಮ ಶ್ರೀಚರಣ, ಆಕಾಶದಿಂದತ್ತ ನಿಮ್ಮ ಶ್ರೀ ಮುಕುಟ; ವಿಶ್ವಥೋ ಬಾಹು, ವಿಶ್ವಥೋ ಚಕ್ಷು? ಅಗಮ್ಯ ಅಗೋಚರ ಪ್ರತಿಮ ಲಿಂಗವೇ ಎನ್ನ ಕರಸ್ಥಳಕ್ಕೆ ಬಂದು ತುಳುಕಾದಿರಯ್ಯಾ' ಸಮುದ್ರವನ್ನು ಪೂಜೆ ಮಾಡಿದರೆ ಎಲ್ಲಾ ನದಿಯನ್ನು ಪೂಜೆ ಮಾಡಿದ ಹಾಗೆ. ಅದೇ ರೀತಿಯಲ್ಲಿ ಈ ಲಿಂಗವನ್ನು ಪೂಜೆ ಮಾಡಿದರೆ ಎಲ್ಲಾ ಧರ್ಮವನ್ನು, ಮತವನ್ನು, ಪುರುಷನ್ನು ಎಲ್ಲರನ್ನು ಪೂಜೆ ಮಾಡಿದಹಾಗೆ ಎಂಬುದೊಂದು ಕಲ್ಪನೆ. ನನ್ನ ಮಾತನ್ನು ಮುಗಿಸುತ್ತೇನೆ. 'ಮಾದರ ಚೆನ್ನಯ್ಯ ಲಿಂಗವ ಮುಟ್ಟಿ ಪೂಜಿಸಿದ, ದೋಹಾರ ಕಕ್ಕಯ್ಯ ಲಿಂಗವ ಕಟ್ಟಿಕೊಂಡು ಪೂಜಿಸಿದ, ಸಮಗಾರ ಹರಳಯ್ಯ ಲಿಂಗವ ಹೊತ್ತು ಪೂಜಿಸಿದ, ಮಡಿವಾಳ ಮಾಚಯ್ಯ ಒಡಗೆರಿಸಿ ಪೂಜಿಸಿದ, ಮುಲಿಯ ಚೆನ್ನಯ್ಯ ಲಿಂಗವ ಬಿಟ್ಟು ಪೂಜಿಸಿದ. ಭಕ್ತನಾಗಿ ಚೆನ್ನಬಸವಣ್ಣ ಅವರೆನ್ನೆಲ್ಲಾ

ಲಿಂಗವ ಮಾಡಿ ಪೂಜಿಸಿದ ನೋಡಾ ಎನ್ನ ವರಗುರು ಶಿವಕುಮಾರ ಪ್ರಭುವೇ. ಎಲ್ಲಿದೆ ಜಾತಿ ಇಲ್ಲಿ? ಯಾರು ಹೇಳಿದ್ದಾರೆ, ಜಾತಿಯ ಪ್ರಶ್ನೆ ಇಲ್ಲಿ ಇಲ್ಲವೇ ಇಲ್ಲ. ಜಾತಿಯ ಮೂಲವನ್ನೆ ನಾಶ ಮಾಡಿದ ಧರ್ಮದ ತಳಹದಿಯ ಮೇಲೆ ಕಟ್ಟತಕ್ಕಂಥದ್ದು ಬಸವಣ್ಣನ ಕರ್ತವ್ಯವಾಗಿತ್ತು. ಆ ದೃಷ್ಟಿಯಿಂದ ಆತ ಪ್ರಾರಂಭ ಮಾಡಿ ಅನುಭವ ಮಂಟಪವನ್ನು ಕಟ್ಟಿದಾಗ ಅದರ ಪರಿಚಾರಕ ಚೆನ್ನಬಸವಣ್ಣನವರಾಗಿದ್ದರು. ಬಸವಣ್ಣ ಬೆನ್ನಿನಲ್ಲಿ ಹುಟ್ಟಿದವರುಂಟೇ ಎಂದು ಕೇಳುತ್ತಾನೆ, ಇಲ್ಲ 'ಸಪ್ತಧಾತು, ಸಮಂಪಿಂಡಂ ಸಮಯೋಗಿಸಮುದ್ಭವಂ' ಆತ್ಮ ಜೀವಂ ಸಮಾಯುಕ್ತಮಂ ವರುಣಾನಾಂ ಕಿಂ ಪ್ರಯೋಜನಂ' ಕಾಸಿ ಕಮ್ಮಾರನಾದ ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ ವೇದವನೋದಿ ಹಾರವನಾದ, ಕರುಣದಲ್ಲಿ ಜನಿಸಿದವರುಂಟೆ ಎಂದು ಬಸವಣ್ಣನವರು ಕೇಳುತ್ತಾರೆ. ಹೀಗೆ ಹುಟ್ಟು, ಜನನ ಕ್ರಿಯೆ, ಗರ್ಭೋತ್ಪತ್ತಿ ಒಂದೇ ತೆರನಾಗಿದ್ದ ಮಾನವ ಕುಲದಲ್ಲಿ ಯಾವ ಜಾತಿ ಮತ ಭೇದ ಇಲ್ಲ. ಇವತ್ತು ಲಿಂಗದಲ್ಲಿ ನಾವು ಜಾತಿಯನ್ನು ಕಲ್ಪಿಸಿಕೊಂಡಿದ್ದೇವೆ. ಇದು ದುರ್ದೈವವಾಗಿದೆ. ಅವತ್ತು ಜನಿವಾರದಲ್ಲಿ ಜಾತಿಯನ್ನು ಕಂಡು ಬಸವಣ್ಣ ಜನಿವಾರವನ್ನು ಬಿಟ್ಟಂತೆ ಇವತ್ತು ಲಿಂಗಾಯಿತರಲ್ಲಿದ್ದ ಧರ್ಮಾಂಧತೆಯನ್ನು ನೋಡಿದ್ದರೆ ಆತ ದೇವರಾಣೆಗೂ ಲಿಂಗವನ್ನೂ ಕೂಡ ಬಿಡುತ್ತಿದ್ದ. ಆದುದರಿಂದ ಈ ಗ್ರಂಥದಲ್ಲಿ ಮೊದಲು ಮನೆಯನ್ನು ಬಸವಣ್ಣ ಬಿಟ್ಟ ಘಟನೆ ಏನಿದೆ, ಅದನ್ನು ಮುಚ್ಚಿ ಹಾಕಿರತಕ್ಕಂಥದ್ದು ಮಹಾ ಅಪರಾಧ. ಇನ್ನೂ ಅದರಲ್ಲಿ ಸಾಕಷ್ಟು ಬಹಲ ಲೋಪ ದೋಷಗಳಿವೆ. ಕೊನೆಗಳಿಗೆಯಲ್ಲಿ ಹರಳಯ್ಯ ಮತ್ತು ಮಧುವರಸರ ಸಂಬಂಧದ ಒಂದು ಕಾರಣದಿಂದ ಕಲ್ಯಾಣದಲ್ಲಿ ಕ್ರಾಂತಿಯಾಗುತ್ತದೆ. ಅದನ್ನು ಆನೆಯ ಕಾಲಿಗೆ ಕಟ್ಟಿ ಎಳೆಸತಕ್ಕಂಥ ಒಂದು ಶಿಕ್ಷೆಯಾಗುತ್ತದೆ. ಅದನ್ನು ಕಂಡು ಜನರೆಲ್ಲಾ ದಂಗೆಯೇಳುತ್ತಾರೆ. ಇವೆಲ್ಲಾ ಕಾರಣಗಳಿವೆ. ಮುಂದೆ ಬಸವಣ್ಣ ಕಲ್ಯಾಣ ಬಿಟ್ಟ ಮೇಲೆ ಕೂಡ ಅಕ್ಕನಾಗಮ್ಮ ಮಹಾ ಮನೆಯ ಒಡತಿಯಾಗಿದ್ದಳು.

**ಶ್ರೀ ಡೇವಿಡ್ ಸಿಮೆಯೋನ್ (ನಾಮನಿರ್ದೇಶನ ಹೊಂದಿದವರು):** ಮಾನ್ಯ ಉಪಸಭಾಪತಿಗಳೇ, 'ಧರ್ಮಕಾರಣ' ಈ ಒಂದು ಪುಸ್ತಕದ ಲೇಖಕರಾದ ಪಿ.ವಿ. ನಾರಾಯಣರವರು ಬರೆದಿರತಕ್ಕಂತಹ ಲೇಖನದಿಂದ ಈ ರಾಜ್ಯದ ಎಲ್ಲಾ ಜನತೆಗೆ ನೋವಾಗಿದೆ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ, ಅದರಲ್ಲೂ ವಿಶೇಷವಾಗಿ ವೀರಶೈವ ಗಣಾಚಾರರ ಸಮಾಜದಲ್ಲಿ ಇದು ಬಹಳ ನೋವು ಉಂಟು ಮಾಡಿದೆ, ಈ ಪುಸ್ತಕದ ಲೇಖಕರು ಯಾರೇ ಆಗಿರಲಿ, ತಮ್ಮ ಇತಿ ಮಿತಿಗಳನ್ನು ತಿಳಿದುಕೊಂಡು ಬೇರೆಯವರಿಗೆ ನೋವಾಗದ ರೀತಿಯಲ್ಲಿ ಬರೆದರೆ ಬಹಳ ಚೆನ್ನಾಗಿರುತ್ತದೆ. ಇತ್ತೀಚೆಗೆ ಲೇಖಕರು ಬರೆಯಲಿಕ್ಕ ಒಂದು ಹೊಸ ಶೈಲಿ ಗೊತ್ತಾಗಿದೆ ಎಂದು ಹೇಳಿ,

ಅಥವಾ ಬೇರೆ ಭಾಷೆಗಳನ್ನು ಅವರು ಬಲ್ಲಂತಹವರು ಆಗಿದ್ದಾರೆ, ಅದು ಆಂಗ್ಲ ಭಾಷೆಯಾಗಿರಬಹುದು ಅಥವಾ ಬೇರೆ ಬಾಷೆಯಾಗಿರಬಹುದು, ಅಲ್ಲಿರತಕ್ಕಂಥ ಸಂಸ್ಕೃತಿಯನ್ನು ಕನ್ನಡದಲ್ಲಿ ಅಳವಡಿಸಿ, ಕನ್ನಡದ ಜನತೆಗೆ ಒಂದು ಹೊಸ ಲೇಖನಗಳನ್ನು ಕೊಡುತ್ತೇವೆ ಎನ್ನತಂಕ್ಕಂಥ ಒಂದು ಹುಮ್ಮಸ್ಸಿನಿಂದ ಸಿಕ್ಕಾಪಟ್ಟೆ ವಿವಿಧ ಲೇಖನಗಳನ್ನು ಬರೆಯುವಂತಾದ್ದನ್ನು ನಾವು ಕಂಡಿದ್ದೇವೆ. ಮತ್ತು ಯಾವುದೇ ಒಂದು ವಿವಾದಾಸ್ಪದವಾದ ವಿಷಯ ಅಥವಾ ಹೊಸ ವಿಚಾರ ಎಂದು ಏನು ಹೇಳುತ್ತಾರೆ, ಆ ಹೊಸ ವಿಚಾಗಳನ್ನು ಐತಿಹಾಸಿಕವಾದ ಹಿನ್ನೆಲೆಯಲ್ಲಿ ಬರೆಯುವಾಗ ಉಲ್ಲೇಖ ಮಾಡತಕ್ಕಂಥದ್ದು ಬಹಳ ಮುಖ್ಯವಾಗಿರುತ್ತದೆ. ಈ 'ಧರ್ಮಕಾರಣ'ದಲ್ಲಿ ಮೊದಲನೆಯ ಪುಟದಿಂದ ಹಿಡಿದು ಕೊನೆಯ ಪುಟದವರೆಗೂ ನೋಡಿದಾಗ ಅಥವಾ ಪ್ರಾರಂಭದ ಮೊದಲನೆಯ ಅಧ್ಯಾಯದಿಂದ ಕೊನೆಯ ಅಧ್ಯಾಯದವರೆಗೂ ನೋಡಿದಾಗ ನಂತರ ಕೊನೆಯ ಒಂದು ಹಾಳೆ ನೋಡಿದಾಗ ಅದು ಬಿಳಿ ಹಾಳೆ ಮತ್ತು ಎಲ್ಲಿಯೂ 1, 2 ಅಂತಾಗಲಿ ಅಥವಾ ಯಾವುದೇ ರೀತಿಯಿಂದಾಗಲೀ ಅದರಲ್ಲಿ ಉಲ್ಲೇಖಗಳು ಇಲ್ಲವೇ ಇಲ್ಲ. ಡಾ॥ ನಾರಾಯಾಣ್‌ರವರು ಬಸವಣ್ಣನವರಿಗೆ ಹಿಂದೆ ಪರಿಚತರೇನೋ, ಅವರ ಜೊತೆಗೆ ಇದ್ದರೇನೋ, ಆ ವಿಷಯಗಳನ್ನು ತಾವು ತಿಳಿದುಕೊಂಡಿದ್ದರೇನೋ ಎಂದು ಹೇಳಿ ಬಹಳ ಆತ್ಮೀಯವಾಗಿ ಅವರ ಸ್ನೇಹಿತರಾಗಿದ್ದರು ಅನ್ನುವಂತಹ ರೀತಿಯಲ್ಲಿ ವಿಶ್ಲೇಷಣೆ ಮಾಡಿದ್ದಾರೆ ಬಹಳ ಸ್ನೇಹಿತರು ಯಾವ ರೀತಿ ಮಾಡುತ್ತಾರೋ ಆ ರೀತಿ ಮಾಡಿ ಇಡಿ ಜನತೆಗೆ ಒಂದು ತಪ್ಪು ರೀತಿಯಲ್ಲಿ ಎಳೆಯುವಂತಾದ್ದನ್ನು ನಾವು ನೋಡಿದ್ದೇವೆ. ಬಸವಣ್ಣನವರ ಅಕ್ಕ ನಾಗಮ್ಮನವರ ಬಗ್ಗೆ 15ನೇ ಶತಮಾನದಲ್ಲಿ 'ಅಮಲ ಬಸವ ಚಾರಿತ್ರ್ಯ' ಎಂಬುದರಲ್ಲಿ ಅವರ ಗಂಡ ಶಿವದೇವ ಅನ್ನತಕ್ಕಂಥದ್ದನ್ನು ಸ್ಪಷ್ಟವಾಗಿ ಬರೆದಿದ್ದಾರೆ. ಅದೇ ರೀತಿ 18ನೇ ಶತಮಾನದಲ್ಲಿ ಕೂಡ 'ದೇವಾಂಗ ಪುರಾಣ' ದಲ್ಲಿಯೂ ಕೂಡ ಅಕ್ಕ ನಾಗಮ್ಮನ ಗಂಡ ಶಿವದೇವ ಎಂಬ ಹೆಸರಿತ್ತು ಎಂದು ಅದರಲ್ಲಿ ಉಲ್ಲೇಖ ಇದೆ. ಇದು ಮಾತ್ರವಲ್ಲದೆ, ಹಳಕಟ್ಟಿಯವರು ಕೂಡ ಈ ವಿಷಯದಲ್ಲಿ ಪ್ರಸ್ತಾಪ ಮಾಡಿದ್ದಾರೆ. ಆದರೆ ಇತ್ತೀಚೆಗೆ ಹೊಸದಾಗಿ ಇದೆಲ್ಲವನ್ನು ಬಿಟ್ಟು, ಇವರೇನಾದರು ಹೊಸದಾಗಿ ಸಂಶೋಧನೆ ಮಾಡಿದ್ದರೇ, ಹೌದು, ನಾವು ಸಂಶೋಧನೆ ಮಾಡಿದ್ದೇವೆ ಅಥವಾ ಕರ್ನಾಟಕದ ಇಂತಹ ಒಂದು ಹಳ್ಳಿಯಲ್ಲಿ ಇಂತಹ ಒಂದು ಶಿಲೆ ಸಿಕ್ಕಿದೆ, ಅದರಲ್ಲಿ ಏನಾದರೂ ಬರೆದಿದೆ ಎನ್ನತಕ್ಕಂಥದ್ದನ್ನು ಏನಾದರು ಉಲ್ಲೇಖ ಮಾಡಿದ್ದರೆ ಬಹಳ ಚೆನ್ನಾಗಿತ್ತು. ಅದ್ಯಾವೂದನ್ನು ಮಾಡದೇ ಒಂದು ಸಮಾಜಕ್ಕೆ ನೇರವಾಗಿ ಮನ ನೋಯುವಂತಹ ರೀತಿಯಲ್ಲಿ, ಅದು ಪ್ರಮುಖವಾಗಿ ಒಬ್ಬ ಮಹಿಳೆಗೆ ಅವಮಾನ ತರುವಂತಹ ರೀತಿಯಲ್ಲಿ ಅದು,ಯಾರನ್ನು ತಾಯಿ

ಎಂದು ಹೇಳಿ ಎಲ್ಲರು ಭಾವಿಸುತ್ತೇವೇಯೋ ಅಂತಹ ಒಬ್ಬ ಮಹಿಳೆಗೆ ಬಹಳ ಅವಮಾನವಾಗುವ ರೀತಿಯಲ್ಲಿ 114ನೇ ಪುಟದಲ್ಲಿ ಅವರು ಉಲ್ಲೇಖ ಮಾಡಿರತಕ್ಕದ್ದನ್ನು ನೋಡಿದರು ಬಹಳ ವ್ಯಸನವಾಗುತ್ತದೆ. ನೇರವಾಗಿ ಈ ಲೇಖಕರು ಬರೆದಿರತಕ್ಕಂತಹಹ ಈ ಒಂದು ಕಾದಂಬರಿಯನ್ನು ನಾನು ಖಂಡಿಸುತ್ತೇನೆ. ಲೇಖಕರು ತಮಗೆ ಬರೆಯಲಿಕ್ಕೆ ಒಂದು ಅವಕಾಶ ಇದೆ, ಅಚ್ಚು ಹಾಕಿಸಲಿಕ್ಕೆ ಪ್ರಕಾಶಕರು ಇದ್ದಾರೆ ಅಥವಾ ತಾವು ಸ್ವತಃ ಅಚ್ಚು ಹಾಕಿಸಬಹುದು ಎಂದು ಹೇಳಿ, ಏನಾದರೂ ಈ ತರಹ ಬರೆಯುತ್ತಾ ಹೋದರೆ ಸಮಾಜದಲ್ಲಿ ಒಂದು ತರಹ ಕ್ರಾಂತಿ ಅಥವಾ ರಕ್ತಪಾತಗಳು ಆಗತಕ್ಕಂತಹ ಸಂಭವ ಹೆಚ್ಚಿದೆ. ರಾಜಕಾರಣಿಗಳಾದ ನಾವು ಒಂದಲ್ಲ ಒಂದು ರೀತಿಯಿಂದ ಸುಮ್ಮನಾಗಿ ಬಿಡುತ್ತೇವೆ. ಇತ್ತೀಚೆಗೆ ಲೇಖನ ಅಂದಾಗ ಯಾರು ಬರೆಯುವ ಸ್ವಾತಂತ್ರ್ಯ ಪಡೆದುಕೊಂಡಿದ್ದಾರೆ, ಪತ್ರಿಕೆಗಳಲ್ಲಾಗಿರಬಹುದು, ವಾರ ಪತ್ರಿಗೆಳಲ್ಲಾಗಿರಬಹುದು, ಪುಸ್ತಕ ರೂಪದಲ್ಲಿ ಆಗಿರಬಹುದು

**ಡಾ॥ ಮಹದೇವ್ ಬಣಕಾರ್ (ನಾಮ ನಿರ್ದೇಶನ ಹೊಂದಿದವರು):** ಮಾನ್ಯ ಸಭಾಪತಿಯವರೆ, ಅಸು ನೀಗಿರತಕ್ಕ ಶಾಸಕರುಗಳ ಹಾಗೂ ಮ್ನೀಯರ ಬಗ್ಗೆ ಈಗಾಗಲೇ ನನ್ನ ಮಿತ್ರರು ಮಾತನಾಡಿದ್ದಾರೆ. ನಾನು ಹೇಳಬೇಕಾಗಿರುವುದಿಷ್ಟೇ ದಿವಂಗತ ವೈ ರಾಮಕೃಷ್ಣರವರ ಬಗ್ಗೆ ಹೇಳುವುದಾದರೆ, ಅವರು ಒಬ್ಬ ವಿನಯದ ಸಾಕಾರ ಮೂರ್ತಿಯಾಗಿದ್ದರು. 1967ರಲ್ಲಿ ಅವರು ಮಂತ್ರಿಯಾಗಿದ್ದಾಗ ನಾನು ಕೂಡ ಶಾಸಕನಾಗಿದ್ದೆ. ಒಮ್ಮೆ ನಾನು ಅವರ ಮನೆಗೆ ತೆರಳಿ ಅವರನ್ನು ಭೇಟಿ ಮಾಡುವ ಸಲುವಾಗಿ ಚೀಟಿಯನ್ನು ಕಳುಹಿಸಿಕೊಟ್ಟಾಗ ಸ್ವತಃ ಅವರೇ ಮನೆ ಹೊರಗೆ ಬಂದು ನನ್ನನ್ನು ಕಂಡು 'ಇದು ನಿಮ್ಮ ಮನೆಯೇ ಅಲ್ಲವೇ? ನನ್ನನ್ನು ಕಾಣಲು ಚೀಟಿ ಕಳುಹಿಸಿ ಕಾಣಬೇಕೆ? ಒಳಗಡೆ ಬನ್ನಿ?' ಎಂದು ಆತ್ಮೀಯತೆಯಿಂದ ಒಳಗಡೆ ಕರೆದುಕೊಂಡು ಹೋದರು. ಈ ಒಂದು ಸಣ್ಣ ಘಟನೆಯಿಂದ ನಮಗೆ ತಿಳಿದು ಬರುವುದೇನೆಂದರೆ, ಅವರು ಯವಾಗಲೂ ಬಡವರ ಬಗ್ಗೆ, ದೇಶದ ಬಗ್ಗೆ ಚಿಂತನೆ ಮಾಡುತ್ತಿದ್ದರೇ ಹೊರತು ವೈಯಕ್ತಿಕ ಆಶೋತ್ತರಗಳ ಬಗ್ಗೆ ಗಮನಹರಿಸುತ್ತಿರಲಿಲ್ಲ. ಇಂತಹ ಒಬ್ಬ ಅಪರೂಪದ ರಾಜಕಾರಣಿ ಇವತ್ತು ನಮ್ಮನ್ನಗಲಿದ್ದಾರೆ. ನಮಗೆ ಇಂತಹವರು ಸಿಗುವುದು ಬಹಳ ಕಷ್ಟ. ಅವರ ಉತ್ತಮಗುಣಗಳನ್ನು ನಾವು ನಮ್ಮ ಬದುಕಿನಲ್ಲಿ ಅಳವಡಿಸಿಕೊಂಡರೆ ಅದೇ ಒಳ್ಳೆಯ ಕೆಲಸ ಎಂದು ನಾನು ತಿಳಿದುಕೊಂಡಿದ್ದೇನೆ. ದಿವಂಗತ ಅಂಬಡಗಟ್ಟಿಯವರು ಬಹಳ ಚಿಕ್ಕ ವಯಸ್ಸಿನವರಾಗಿದ್ದು ಅವರ ಮರಣ ಅಕಾಲಿಕವಾದಂಥದ್ದು ಮರಣ ಯಾರನ್ನು ಬಿಡುವುದಿಲ್ಲ. ಆದುದರಿಂದ ಅವರ ಬಗ್ಗೆಯೂ ಕೂಡ ನಾವು ವ್ಯಥೆ ಪಡಬೇಕಾಗುತ್ತದೆ. ಅವರ ಆತ್ಮಕ್ಕೂ ಸಹ ಚಿರಶಾಂತಿಯನ್ನು ಕೋರುತ್ತೇನೆ. ಅದೇ

ರೀತಿ ಎಲ್ಲಾ ಸ್ನೇಹಿತರು ಸಹ ನಮ್ಮ ಪರಿಚಯದ್ಧರೇ ಆಗಿದ್ದರು. ದಿವಂಗತ ಹಾಲಪ್ಪನವರ ಬಗ್ಗೆ ಹೇಳುವುದಾದರೆ ಅವರು ನಮ್ಮ ಬಂಧುಗಳಾಗಬೇಕು, ಅವರು 3–4 ಭಾರಿ ಚುನಾಯಿತರಾಗಿ ಬಂದಾಗಲೂ ಕೂಡ ಯಾರಿಗೂ ಒಂದು ಕಾಸನ್ನು ಕೊಟ್ಟವರಲ್ಲ, ಹಾಗೆಯೇ ಚುನಾಯಿತರಾಗಿ ಬರುತ್ತಿದ್ದರು. ಜೊತೆಗೆ ಅಷ್ಟೇ ವಿನಯಶೀಲ ಮನುಷ್ಯರಾಗಿದ್ದ ಅವರ ಅಗಲಿಕೆಯಿಂದ ನಮಗೆ ಬಹಳ ದುಃಖ ಉಂಟಾಗಿದೆ. ಇನ್ನು ಚಿ. ನಾ. ಮಂಗಳ ವಿಷಯದಲ್ಲಿ ಹೇಳುವುದಾದರೆ, ಭಾರತೀಯ ನಾರಿ ಸರ್ವ ಗುಣಗಳನ್ನು ಅವರು ತಮ್ಮ ಸ್ವರೂಪದಲ್ಲಿ ಕಂಡುಕೊಂಡಿದ್ದರು. ಇಂಗ್ಲೀಷಿನಲ್ಲಿ ಒಂದು ಮಾತು ಇದೆ. God could not be everywhere. Therefore, he made the mothers. ದೇವರಿಗೆ ಎಲ್ಲಾ ಕಡೆಯೂ ಇರುವುದಕ್ಕೆ ಸಾದ್ಯವಿಲ್ಲ, ಅದಕ್ಕೋಸ್ಕರ ಅಲ್ಲಲ್ಲೇ ತಾಯಂದಿರನ್ನು ನಿರ್ಮಾಣ ಮಾಡಿದ್ದಾನೆ ಎಂದು ಹೇಳುತ್ತಾರೆ. ಹಾಗೆ ಚಿ.ನಾ. ಮಂಗಳ ಧೀರೋಧಾತ್ತ ಮಹಿಳೆಯೂ ಹೌದು, ಭೌದ್ಧಿಕವಾಗಿ ಅತ್ಯುನ್ನತ ಮಟ್ಟವನ್ನು ಮುಟ್ಟಿರತಕ್ಕಂಥವರು ಹೌದು. ಭಾರತೀಯ ನಾರಿತ್ವದ ನಿಜವಾದ ಸ್ವರೂಪವನ್ನು ಅವರು ಹೊತ್ತು ಜನರಿಗೆ ಆದರ್ಶನೀಯ, ಅನುಕರಣೀಯರಾಗಿದ್ದರು. ಇಂತಹವರ ಮರಣ ನಿಜವಾಗಿಯೂ ತುಂಬಲಾರದಂತಹ ಹಾನಿ. ಈ ಎಲ್ಲಾ ಮೃತರ ಆತ್ಮಕ್ಕೆ ದೇವರು ಚಿರಶಾಂತಿಯನ್ನು ಕೊಡಲಿ ಎಂದು ಲೋಕಶಕ್ತಿಯ ಪರವಾಗಿ ನಾನು ಶೋಕವನ್ನು ವ್ಯಕ್ತಪಡಿಸುತ್ತೇನೆ.

**ಶ್ರೀ ಟಿಎನ್. ನರಸಿಂಹ (ವಿಧಾನಸಭಾ ಕ್ಷೇತ್ರ):** ಮಾನ್ಯ ಸಭಾಪತಿಯವರೆ, ಮುಂದುವರೆದ ಈ ಬಜೆಟ್ ಅಧಿವೇಶನದ ಪ್ರಾರಂಭದಲ್ಲಿ ತಾವು ಒಂದು ಸೂಚನೆಯನ್ನು ಸಭೆಯ ಮುಂದೆ ಮಂಡಿಸಿದ್ದೀರಿ. ಹಾಲಿ ಇಬ್ಬರು ಕೆಳಮನೆಯ ಸದಸ್ಯರಾದಂತ ಶ್ರೀಮಾನ್ ವೈ. ರಾಮಕೃಷ್ಣರವರು ಮತ್ತು ಶ್ರೀಮಾನ್ ಶ್ರೀಕಾಂತ ಅಂಬಡಿಗಟ್ಟಿಯವರು ಮತ್ತು ಆ ಸದನದಲ್ಲಿ ಸದಸ್ಯರಾಗಿ ಸೇವೆ ಸಲ್ಲಿಸಿರುವಂಥ ಶ್ರೀಮಾನ್ ವೆಂಕಟರಮಣರವರು, ಶಾಮಯ್ಯ ಗೌಡರು, ಸಾಸನೂರ್‌ರವರು ಮತ್ತು ಶಿಕ್ಷಣ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿರತಕ್ಕಂಥ ಒಬ್ಬ ಮಹಿಳೆಯ ಬಗ್ಗೆ ಹಾಗೂ ಧಾರ್ಮಿಕ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿರುವ ಮತ್ತೊಬ್ಬರ ಬಗ್ಗೆ ಸೂಚನಾ ಪತ್ರದಲ್ಲಿ ತಂದಿರತಕ್ಕಂಥದ್ದನ್ನು ಮನಃಪೂರ್ವವಾಗಿ ಬೆಂಬಲಿಸುತ್ತೇನೆ. ಪ್ರಪ್ರಥಮವಾಗಿ ಶ್ರೀಮಾನ್ ವೈ. ರಾಮಕೃಷ್ಣರವರ ಬಗ್ಗೆ ಹೇಳುವುದಾದರೆ, ಅವರ ಬಗ್ಗೆ ಮಾತನಾಡಬೇಕಾದರೆ ನನಗೆ ಹಳೆಯ ನೆನಪು ಬರುತ್ತದೆ. ಅವರು ಅಂದು ಮಂತ್ರಿಗಳಾಗಿದ್ದರು.

**ಡಾ॥ ಮಹದೇವ್ ಬಣಕಾರ್ (ನಾಮನಿರ್ದೇಶನ ಹೊಂದಿದವರು):** ಮಾನ್ಯ ನಗರಾಭಿವೃದ್ಧಿ ಸಚಿವರು. ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೇ?

ಅ) ಹಾವೇರಿ ನಗರಕ್ಕೆ ಪ್ರಸ್ತುತ ಸರಬರಾಜು ಆಗುತ್ತಿರುವ ಕುಡಿಯುವ ನೀರಿನ ವ್ಯವಸ್ಥೆಯನ್ನು ಎಂದಿನಿಂದ ರೂಪಿಸಲಾಗಿದೆ?

ಆ) ಪ್ರಸ್ತುತ ಜನಸಖ್ಯೆಗೆ ಅನುಗುಣವಾಗಿ ನೀರಿನ ಪೂರೈಕೆ ಸಮರ್ಪಕವಾಗಿ ಆಗದೆ ಇರುವುದು ನಿಜವೇ?

**ಬಿ.ಎನ್. ಬಚ್ಚೇಗೌಡ (ನಗರಾಭಿವೃದ್ಧಿ ಸಚಿವರು):**

ಅ) ಹಾವೇರಿ ನಗರಕ್ಕೆ ಪ್ರಸ್ತುತ ಕುಡಿಯುವ ನೀರು ಸರಬರಾಜು ಯೋಜನೆಯು, ವರದಾ ನದಿಯನ್ನು ಮೂಲವಾಗಿಟ್ಟುಕೊಂಡು, 1965ರಲ್ಲಿ ರೂಪಿಸಲಾಗಿದೆ. ಇದಲ್ಲದೆ, ನಗರದಲ್ಲಿ 133 ಕೊಳವೆ ಬಾವಿಗಳಿಂದ ಸಹಾ ನೀರು ಸರಬರಾಜು ಮಾಡಲಾಗುತ್ತಿದೆ.

ಆ) ಹೌದು.

ಇ) ಹಾವೇರಿ ಪಟ್ಟಣಕ್ಕೆ ಸಮರ್ಪಕ ಕುಡಿಯುವ ನೀರು ಸರಬರಾಜು ಮಾಡಲು, ಒಂದು ಸಮಗ್ರ ನೀರು ಸರಬರಾಜು ಯೋಜನೆಯನ್ನು ವರದಾ ನದಿಯನ್ನು ಮೂಲವಾಗಿಟ್ಟುಕೊಂಡು ರೂ. 1095.18 ಲಕ್ಷಗಳಿಗೆ, ಸರ್ಕಾರವು ತನ್ನ ಆದೇಶ ಸಂಖ್ಯೆ. ಯಡಿ : 21 : ಯಡಬ್ಲ್ಯುಎಸ್ : 91 ದಿನಾಂಕ : 26.8.97ರಂದು ಆಡಳಿತಾತ್ಮಕ ಅನುಮೋದನೆ ನೀಡಿದೆ. ಈ ಬಗ್ಗೆ ಮುಂದಿನ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.

**ಶ್ರೀ. ಬಿ.ಎನ್. ಬಚ್ಚೇಗೌಡ:** ಮಾನ್ಯ ಸಭಾಪತಿಯವರೆ, ವರದಾ ನದಿಯನ್ನು ನಾನು ನೋಡಿಕೊಂಡು ಹೋಗಿದ್ದೇನೆ, ಮಾನ್ಯ ಸದಸ್ಯರು ಹೇಳುವ ಹಾಗೆ ಆ ನದಿಯಲ್ಲಿ ನೀರು ಇಲ್ಲ. ಈ ನದಿಗೆ ಅಡ್ಡಲಾಗಿ ಒಂದು ಬ್ಯಾರೇಜನ್ನು ಕಟ್ಟಿ ಅಲ್ಲಿಂದ ನೀರು ಸಪ್ಲೈ ಮಾಡುವ ಬಗ್ಗೆ ಒಂದು ಸಲಹೆ ಮಾಡಲಾಗಿತ್ತು. ಅದರೆ, ಅದು ಸಾದ್ಯವಾದುದಲ್ಲವೆಂದು ತಿಳಿದ ಮೇಲೆ ಆ ಯೋನಜೆಯನ್ನು ಕೈಬಿಡಲಾಯಿತು. ನಂತರ ಇದೇ ನದಿಗೆ ಕಟ್ಟಲಾಗಿರುವ ಇರಿಗೇಷನ್ ಡ್ಯಾಮ್ನಿಂದ ನೀರು ತೆಗೆದುಕೊಳ್ಳುವ ಬಗ್ಗೆ ಪ್ರಫೋಸಲ್ ಇತ್ತು. ಇರಿಗೇಷನ್ಗೇ ನೀರು ಸಾಕಾಗದೆ ಇರುವುದರಿಂದ ನಾವು ಕೊಡುವುದಕ್ಕಾಗುವುದಿಲ್ಲವೆಂದು ಅವರು ಹೇಳಿದರು. ನಂತರ, ತುಂಗಭದ್ರಾ ನದಿಯಿಂದ ನೀರು ತರುವ ಬಗ್ಗೆ 14 ಕೋಟಿ ರೂಪಾಯಿಗಳ ಒಂದು ಪ್ರಾಜೆಕ್ಟ ತಯಾರುಮಾಡಿದ್ದೇವೆ. ಆದಷ್ಟು ಬೇಗ ಈ ಬಗ್ಗೆ ಟೆಂಡರ್ ಕರೆದು, ಕೆಲಸವನ್ನು ಮುಗಿಸಿ ಈ ನಗರಕ್ಕೆ ನೀರು ಕೊಡುವಂಥ ಕೆಲಸವನ್ನು ಮಾಡಿಸುತ್ತೇವೆ.

**ಡಾ॥ ಮಹದೇವ್ ಬಣಕಾರ್:** ಮಾನ್ಯ ಸಭಾಪತಿಯವರೆ, ಹಾನಗಲ್ ತಾಲ್ಲೂಕು ಬಸಾಪುರ ಏತ ನೀರಾವರಿ ಯೋಜನೆ ಮೂಲಕ ತಾತ್ಕಾಲಿಕವಾಗಿ ನೀರನ್ನು

ಒದಗಿಸಿ ಕೊಡುವ ಕೆಲಸವನ್ನು ಪ್ರಾರಂಭ ಮಾಡಿ ಅದು ಅರ್ಧದಲ್ಲೇ ನಿಂತು ಹೋಗಿದೆ. ತುಂಗಭದ್ರಾ ಯೋಜನೆ ಮೂಲಕ ನೀರು ಬರುವವರೆಗೂ, ತಾತ್ಕಾಲಿಕವಾಗಿ ನೀರು ಕೊಡುವ ಈ ಬಸಾಪುರ ಯೋಜನೆಯನ್ನಾದರು ಮುಗಿಸಿ ನೀರನ್ನು ಒದಗಿಸಿಕೊಡಲಾಗುತ್ತದೆಯೇ ಎಂದು ಕೇಳುತ್ತೇನೆ.

**ಶ್ರೀ ಬಿ.ಎನ್. ಬಚ್ಚೇಗೌಡ:** ಬಸಾಪುರ ಏತ ನೀರಾವರಿ ಯೋಜನೆಯನ್ನು, ಕೇವಲ ನೀರಾವರಿ ಮಾಡುವ ಉದ್ದೇಶದಿಂದ ಮಾಡಲಾಗಿದೆ. ಅದೂ ಅಲ್ಲದೆ ವರ್ಷದ 365 ದಿವಸಗಳಷ್ಟು ಇಲ್ಲಿ ನೀರು ಸಿಗುವುದಿಲ್ಲ. ಆದುದರಿಂದ, ಈ ನಗರಕ್ಕೆ ತುಂಗಭದ್ರಾ ಯೋಜನೆಯ ಮೂಲಕವೇ ನೀರು ತರುವುದು ಎಲ್ಲಾ ರೀತಿಯಲ್ಲೂ ಸರಿಯಾಗಿದೆ. ಇವತ್ತಿನ ದಿವಸದಲ್ಲಿ ಮಲಪ್ರಭಾ ನದಿಯಲ್ಲೂ ನೀರು ಕೆಳ ಮಟ್ಟಕ್ಕೆ ಹೊರಟುಹೋಗಿದೆ. ಬಿಜಾಪುರಕ್ಕೆ ನೀರು ಸಪ್ಲೈ ಮಾಡುತ್ತಿದ್ದ **"ಕೊಲ್ಲಾರ"** ದಲ್ಲೂ ನೀರಿನ ಮಟ್ಟ ಕೆಳ ಮಟ್ಟಕ್ಕೆ ಹೋಗಿದೆ. ಅಲ್ಲೂ ಇನ್ನು 20 ದಿವಸ ಅಥವಾ 30 ದಿವಸಗಳಿಂದ ಆಗುವಷ್ಟು ಮಾತ್ರ ನೀರು ಇದೆ. ದಿವಸಕ್ಕೆ ಒಮ್ಮೆ ನೀರು ಕೊಡಲಾಗುತ್ತದೆ. ಮಳೆ ಬರುವವರೆಗೂ ಇದೇ ಪರಿಸ್ಥಿತಿ ಮುಂದುವರೆಯುತ್ತದೆ.

**ಡಾ॥ ಮಹದೇವ್ ಬಣಕಾರ್:** ತುಂಗಭದ್ರಾ ಯೋಜನೆಯಿಂದ ನೀರು ಕೊಡುವವರೆಗೂ ಬೋರ್ವೆಲ್ಗಳ ಮೂಲಕ ನೀರನ್ನು ಸಪ್ಲೈ ಮಾಡಿಕೊಡುತ್ತೇವೆ. ಈಗಾಗಲೇ ಯೋಜನೆಯನ್ನು ಸಿದ್ದಪಡಿಸಲಾಗಿದೆ. ಮೇ ತಿಂಗಳ 8ನೇ ತಾರೀಖು ಟೆಂಡರ್ ಕರೆಯಬೇಕೆಂದು ಸಹಾ ಸಮಯವನ್ನು ನಿಗದಿ ಮಾಡಿದ್ದೇವೆ. 1999ನೇ ಇಸವಿ ಮುಗಿಯುವುದರೊಳಗೆ ಈ ಕೆಲಸವನ್ನು ಮಾಡಿ ಮುಗಿಸುತ್ತೇವೆ. ತುಂಭದ್ರಾ ನದಿಯಿಂದ ಹಾವೇರಿ ನಗರದವರೆಗೆ ಸುಮಾರು 35 ಕಿಲೋ ಮೀಟರ್‌ನಷ್ಟು ಉದ್ದ ಪೈಪುಗಳನ್ನು ಅಳವಡಿಸಬೇಕಾಗುತ್ತದೆ. ಒಟ್ಟಿನಲ್ಲಿ ಆದಷ್ಟು ಬೇಗ ಕೆಲಸವನ್ನು ಮಾಡಿ ಮುಗಿಸುತ್ತೇವೆ.

ರಾಜ್ಯದಲ್ಲಿ ಕಳೆದ 40 ದಿವಸಗಳಿಂದ ವ್ಯಾಪಾರಸ್ಥರು ಮುಷ್ಕರ ಮಾಡುತ್ತಿರುವುದರಿಂದ ಹತ್ತಿ, ಜೋಳ ಮುಂತಾದ ಸರಕುಗಳ ವ್ಯಾಪಾರಗಳು ಸಂಪೂರ್ಣವಾಗಿ ಸ್ಥಗಿತಗೊಂಡಿರುವುದು

**ಶ್ರೀ ಹೆಚ್.ಕೆ. ಪಾಟೀಲ್ (ವಿರೋಧ ಪಕ್ಷದ ನಾಯಕರು):** ಮಾನ್ಯ ಸಭಾಪತಿಯವರೆ, ಕರ್ನಾಟಕ ರಾಜ್ಯದಲ್ಲಿ 40 ದಿವಸಗಳಿಂದ ವ್ಯಾಪಾರಸ್ಥರು ಮುಷ್ಕರ ಮಾಡುತ್ತಿರುವುದು ನಮ್ಮ ಭಾಗದಲ್ಲಿ ಮುಖ್ಯವಾಗಿ ಹತ್ತಿ, ಜೋಳ, ಗೋವಿನ ಜೋಳ, ಗೋಧಿ ಹಾಗೂ ಇನ್ನಿತರ ಎಲ್ಲಾ ಸರಕುಗಳ ವ್ಯಾಪಾರಸ್ಥರುಗಳು

ಸಂಪೂರ್ಣವಾಗಿ ಸ್ಥಗಿತಗೊಂಡಿವೆ. ಒಂದೇ ಒಂದು ದಿನ ಮಾರ್ಕೆಟ್‌ನಲ್ಲಿ ವ್ಯಾಪಾರ ನಿಂತರೆ ಏನಾಗಬಹುದೆಂದು ಅನುಭವವುಳ್ಳಂಥ ಸಾಕಷ್ಟು ಜನ ಇಲ್ಲಿದ್ದಾರೆ. ಆದರೆ, ಇವತ್ತು 40 ದಿವಸಗಳಿಂದ ಮಾರುಕಟ್ಟೆಯಲ್ಲಿ ವ್ಯಾಪಾರ ನಿಂತು ಹೋಗಿದೆ. ನಮ್ಮ ಭಾಗದಲ್ಲಿ ಎಲ್ಲಾ ಹತ್ತಿಯು ಹಾಗೇ ಸ್ಟಾಕ್ ಉಳಿದಿದೆ. ಒಂದು ಬೇಲ್ ಹತ್ತಿಯು ಬಯಲಿನಲ್ಲಿ ಒಂದು ದಿವಸ ಬಿದ್ದಿದ್ದರೆ ಅನೇಕ ಕಾರಣಗಳಿಂದ ಒಂದು ಬೇಲ್‌ನಲ್ಲಿ ಎರಡು ಕೆ.ಜಿ. ಯಿಂದ 5 ಕೆ.ಜಿ.ಯವರೆಗೆ ಹತ್ತಿ ಲಾಸ್ ಆಗುತ್ತದೆ. ಒಂದು ದಿವಸಕ್ಕೆ ಇಷ್ಟು ಲಾಸ್ ಆದರೆ ಇನ್ನು 40 ದಿವಸಕ್ಕೆ ಎಷ್ಟು ಲಾಸ್ ಆಗಬಹುದೆಂದು ಅಂದಾಜು ಮಾಡಬಹುದು. ಹೀಗಾದರೆ ಹತ್ತಿಯನ್ನು ಬೆಳೆದಂಥ ರೈತರುಗಳ ಪರಿಸ್ಥಿತಿ ಏನಾಗಬುದು? ಅದೂ ಅಲ್ಲದೆ ಮದುವೆ ಸೀಸನ್ ಆಗಿರುವುದರಿಂದ ರೈತರುಗಳಿಗೆ ಹಣಕಾಸಿನ ಅವಶ್ಯಕತೆ ಬಹಳ ಇರುತ್ತದೆ. ರೈತರುಗಳು ಬೆಳೆದಂಥ ಹತ್ತಿ ಮಾರಾಟವಾಗಲಿಕ್ಕೂ ಇವತ್ತಿನ ದಿವಸ ಸಾದ್ಯವಾಗದ ಪರಿಸ್ಥಿತಿಗೆ ಬಂದುಮುಟ್ಟಿದೆ. ನಮ್ಮ ಕಡೆ ಸುಮಾರು 8 ರಿಂದ 9 ಲಕ್ಷ ಬೆಲ್‌ನಷ್ಟು ಹತ್ತಿಯನ್ನು ಬೆಳೆಯುತ್ತಾರೆ. ಇದರ ಜೊತೆಗೆ ಇತರೆ ದಾನ್ಯಗಳನ್ನೂ ಬೆಳೆಯುತ್ತಾರೆ. ಇವೆಲ್ಲವೂ ಒಂದೇ ಕಡೆ ಸಂಗ್ರಹವಾಗಿ 40 ದಿವಸಗಳಿಂದ ವ್ಯಾಪಾರವಿಲ್ಲದೆ ರೈತರುಗಳಿಗೆ ಈ ಮದುವೇ ಸಿಸನ್‌ನಲ್ಲಿ ಹಣ ಸಿಗದ ಹಾಗಾಗಿದೆ. ಆಮೇಲೆ, ನಮ್ಮ ಅದೃಷ್ಟವಶಾತ್ ಈ ವರ್ಷ ಮಳೆ ಬರಲು ಈಗಾಗಲೆ ಪ್ರಾರಂಭವಾಗಿದೆ. ಮಳೆ ಬಂದ ಮೇಲೆ ರೈತರುಗಳು ಭೂಮಿಯನ್ನು ಹದ ಮಾಡಬೇಕು, ಬೀಜ–ಗೊಬ್ಬರಗಳನ್ನು ಹವಣಿಸಿಕೊಳ್ಳಬೇಕು, ಇಷ್ಟೆಲ್ಲಾ ಮಾಡುವುದಕ್ಕೆ ರೈತರುಗಳಿಗೆ ದುಡ್ಡುಬೇಕಾಗುತ್ತದೆ. ಆದರೆ, ಮಾರ್ಕೆಟ್‌ನಲ್ಲಿ ವ್ಯಾಪಾರಸ್ಥರು ಮುಷ್ಕರ ಮಾಡುತ್ತಿರುವುದರಿಂದ ರೈತರುಗಳು ತಾವು ಬೆಳೆದ ಮಾಲನ್ನು ಮಾರಾಟ ಮಾಡಲಾಗದೆ ಹಣವಿಲ್ಲದೆ ಕಷ್ಟಪಡುವಂಥ ಪರಿಸ್ಥಿತಿ ಬಂದಿದೆ. 40 ದಿವಸಗಳಿಂದ ಮಾರ್ಕೆಟ್‌ವ್ಯವಹಾರ ನಿಂತಿದ್ದರೂ ಅದರ ಬಗ್ಗೆ ಯಾವುದೇ ಕ್ರಮವನ್ನು ಸರ್ಕಾರ ತೆಗೆದುಕೊಳ್ಳಲಿಲ್ಲ. ಇದರಿಂದಾಗಿ, ರೈತರು ಮಾಲುಗಳೆಲ್ಲಾ ಬೇರೆ ರಾಜ್ಯಗಳ ಕಡೆಗೆ ಹೋಗುವಂಥ ಪರಿಸ್ಥಿತಿ ನಿರ್ಮಾಣವಾಗಿದ್ದರೂ ಅದನ್ನು ಸರ್ಕಾರ ಅದನ್ನೆಲ್ಲಾ ನೋಡಿಕೊಂಡು ಸುಮ್ಮನೆ ಕುಳಿತಿದೆ. ಮುಷ್ಕರವನ್ನು ಕೊನೆಗಾಣಿಸುವ ಸಲುವಾಗಿ ವ್ಯಾಪಾರಸ್ಥರನ್ನು ಕರೆದು ಅವರ ಜೊತೆ ಮಾತುಕತೆ ನಡೆಸಬೇಕು. ಒಂದು ಪಕ್ಷ ವ್ಯಾಪಾರಸ್ಥರುಗಳಿಗೆ ತೊಂದರೆಯಾದರೂ ರೈತರುಗಳಿಗೆ ಯಾವುದೇ ಕಾರಣಕ್ಕೂ ತೊಂದರೆಯಾಗಬಾರದು. ಇವತ್ತು ಸರ್ಕಾರದ ನಿಷ್ಕಾಳಜಿಯಿಮದ ರೈತರುಗಳು 40 ದಿವಸಗಳಿಂದ ತೊಂದರೆಪಡುವಂತಾಗಿದೆ. ಮಂತ್ರಿಗಳಾಗಿತಕ್ಕಂಥ ಮಾನ್ಯ ಎಂ.ಎಸ್. ಪಾಟೀಲರೆ ಒಂದು ಮಾತನ್ನು ಹೇಳಿದರು, ಅದೇನೆಂದರೆ, ನಿಮ್ಮ ಗದಗ್, ನವಲಗುಂದ, ನರಗುಂದ, ಹುಬ್ಬಳ್ಳಿ ಮಾರ್ಕೆಟ್‌ನಲ್ಲಿ ಬಿದ್ದಿರುವುದಕ್ಕಿಂತ

ಹೆಚ್ಚು ಹತ್ತಿ ನಮ್ಮ ರಾಯಚೂರು ಮಾರ್ಕೆಟ್‌ನಲ್ಲಿ ಬಿದ್ದಿದೆ, ಹತ್ತಿ ಬೆಳೆದಿರತಕ್ಕಂಥ ರೈತರುಗಳಿಗೆ ಹಣಕಾಸು ಸಿಗದೆ ಬಹಳ ತೊಂದರೆಪಡುತ್ತಿದ್ದಾರೆಂದು ನೊಂದ ಮನಸ್ಸಿನಿಂದ ಹೇಳಿದರು. ಹತ್ತಿ ಬೆಳೆಗಾರರ ಸಂಕಷ್ಟಕ್ಕೆ ಪರಿಹಾರವನ್ನು ಒದಗಿಸಿಕೊಡುವ ಬಗ್ಗೆ ಮಾನ್ಯ ಜವಳಿ ಖಾತೆ ಸಚಿವರು ಹಾಗೂ ಹುಬ್ಬಳ್ಳಿ, ಕೊಪ್ಪಳ, ನವಲಗುಂದ, ಧಾರವಾಡ, ಹಾವೇರಿ, ರಾಣೆಬೆನ್ನೂರು, ಸವಣೂರು ಈ ಪ್ರದೇಶಗಳಲ್ಲಿ ಹತ್ತಿ ಬೆಳೆಯತಕ್ಕಂಥ ರೈತರುಗಳು ಚಳುವಳಿಯನ್ನು ಮಾಡಿದರು. ಹುಬ್ಬಳ್ಳಿಯಲ್ಲಿ ತಹಶೀಲ್ದಾರ್ ಕಛೇರಿಗೆ ಬೀಗ ಹಾಕುವುದಕ್ಕೆ ರೈತರುಗಳು ಹೋಗಿದ್ದರು, ಇಷ್ಟಾದರೂ ಈ ಬಗ್ಗೆ ಸರ್ಕಾರದಿಂದ ಏನೂ ಸ್ಪಂದನೆಯಾಗದೆ ಸಂಪೂರ್ಣವಾಗಿ ನಿಷ್ಕ್ರೀಯವಾದಂತೆ ಆಗಿದೆ. 40 ದಿವಸಗಳಿಂದ ಮಾರ್ಕೆಟ್ ಬಂದ್ ಆಗಿದೆಯಲ್ಲಾ? ಯಾವ ರೀತಿ ಸರ್ಕಾರ ನಡೆಸಲಾಗುತ್ತದೆಯೆಂದು ಅವರು ಆತ್ಮಾವಲೋಕನ ಮಾಡಿಕೊಳ್ಳಬೇಕು. ರೈತರುಗಳೆಂದರೆ ಸರ್ಕಾರದ ಕಣ್ಣಿಗೆ ಕಾಣುವುದಿಲ್ಲವೇನು? ಅನ್ ಆರ್ಗನೈಸ್ಡ್ ಆಗಿರತಕ್ಕಂಥ ಈ ರೈತ ವರ್ಗಕ್ಕೆ ಆಗುತ್ತಿರತಕ್ಕಂಥ ಹಾನಿ ತಕ್ಷಣ ನಿಲ್ಲುವುದಕ್ಕಾಗಿ ವ್ಯಾಪಾರಸ್ಥರುಗಳನ್ನು ಕರೆಸಿ ಸರ್ಕಾರ ಮಾತನಾಡಿ ತೀರ್ಮಾನ ಮಾಡಬೇಕು. ವ್ಯಾಪಾರಸ್ಥರು ಸಲ್ಲಿಸಿದ್ದ ಬೇಡಿಕೆಗಳಲ್ಲಿ ಫಸ್ಟ್ ಪಾಯಿಂಟ್‌ನಿಂದ ಲಾಸ್ಟ ಪಾಯಿಂಟ್‌ಗೆ ಹಾಕುವ ಬಗ್ಗೆ ಸರ್ಕಾರ ಒಪ್ಪಿಕೊಂಡಿರುವ ಬಗ್ಗೆ ಒಂದು ನೋಟಿಫಿಕೇಷನ್ ಹೊರಡಿಸಬೇಕೆಂದು ಅವರು ಒತ್ತಾಯ ಮಾಡುತ್ತಿದ್ದಾರೆಂದು ನನಗೆ ತಿಳಿದು ಬಂದಿದೆ. ಒಂದು ನೊಟಿಫಿಕೇಷನ್ ಹೊರಡಿಸುವುದಕ್ಕೆ ಇಷ್ಟು ಸಮಯಾ ಬೇಕಾ? ಇದರ ಬಗ್ಗೆ ನೋಟಿಫಿಕೇಷನ್ ಮಾಡಲು ಸಾಧ್ಯವಿಲ್ಲದೇ ಇದ್ದರೆ. ಬೇರೆ ರೀತಿಯಲ್ಲಿ ವ್ಯಾಪಾರಸ್ಥರ ಮನವೊಲಿಸಿ ಮುಷ್ಕರವನ್ನು ಹಿಂತೆಗೆದುಕೊಳ್ಳುವಂತೆ ಮಾಡಬೇಕಾಗಿತ್ತು. ಅಥವಾ ಸಿ.ಸಿ.ಐ., ನವರಿಗೆ ಅಥವಾ ಬೇರೆ ಬೇರೆ ಫೆಡೆರೇಷನ್‌ವರಿಗೆ ಹೇಳಿ ರೈತರು ಬೆಳೆದಂಥ ಹತ್ತಿಯನ್ನು ಮಾರಾಟ ಮಾಡುವುದಕ್ಕೆ ಏಕೆ ವ್ಯವಸ್ಥೆಯನ್ನು ಮಾಡಲಿಲ್ಲ? ಸಿ.ಸಿ.ಐ., ಛೇರ್ಮನ್ ಹತ್ತಿರ ಹೋಗಿ ಎಲ್ಲಾ ಹತ್ತಿಯನ್ನು ಖರೀದಿ ಮಾಡಬೇಕೆಂದು ಸರ್ಕಾರ ಒತ್ತಾಯ ಮಾಡಬೇಕಾಗಿತ್ತು. ರೈತರುಗಳಿಗೆ ಒಂದು ಸಾವಿರ ಕೋಟಿ ಕೊಡುತ್ತೇವೆ. 5 ಸಾವಿ ಕೋಟಿ ಕೊಡುತ್ತೇವೆ ಎಂದು ದೊಡ್ಡ ದೊಡ್ಡ ಮಾತುಗಳನ್ನು ಹೇಳುವಾಗ ಇಂಥಾ ಒಂದು ಸಣ್ಣ ಕೆಲಸವನ್ನ ಮಾಡಲು ಸಹಕಾರಿ ಕ್ಷೇತ್ರದಿಂದ ಆಗಲಿಲ್ಲ. ಸಿ.ಸಿ.ಐ.ನಿಂದಲೂ ಮಾಡಿಸಲಿಲ್ಲ. ಏಕೆ ಇಷ್ಟು ಬೇಜವಾಬ್ದಾರಿಯಿಂದ ಸರ್ಕಾರ ಕೆಲಸ ಮಾಡುತ್ತಿದೆ ಎಂದು ನಾವು ಪ್ರಶ್ನೆ ಮಾಡಬೇಕಾಗಿದೆ. ಈ ಒಂದು ವಿಷಯದಲ್ಲಿ ನಾವು ಬಹಳಷ್ಟು ವಿಚಾರಗಳನ್ನು ತಮಗೆ ಹಾಗೂ ಸದನಕ್ಕೆ ತಿಳಿಸಬೇಕಾಗಿದೆ, ಹಾಗೂ ಇದರ ಬಗ್ಗೆ ಚರ್ಚೆ ಮಾಡಬೇಕಾಗಿದೆ. ಆದುದರಿಂದ 59ನೇ ನಿಯಮದ

ಪ್ರಕಾರ ಎಲ್ಲಾ ವಿಷಯಗಳನ್ನು ಬದಿಗೊತ್ತಿ ನಮಗೆ ರೈತರ ವಿಚಾರದಲ್ಲಿ ಚರ್ಚೆ ಮಾಡುವುದಕ್ಕೆ ಅವಕಾಶ ಕೊಡಬೇಕೆಂದು ತಮ್ಮನ್ನು ಕೇಳಿಕೊಳ್ಳುತ್ತೇನೆ.

**ಡಾ|| ಮಹದೇವ್ ಬಣಕಾರ್ (ನಾಮನಿರ್ದೇಶನ ಹೊಂದಿದವರು):** ಸನ್ಮಾನ್ಯ ಸಭಾಪತಿಯವರೆ, ನಮ್ಮ ದೇಶದಲ್ಲಿ ಅತೀ ದೊಡ್ಡದಾದ ಹತ್ತಿ ಮಾರುಕಟ್ಟೆ ನಮ್ಮ ರಾಯಚೂರಿನಲ್ಲಿದೆ.

**ಡಾ ಮಹದೇವ್ ಬಣಕಾರ್:** ಮಾನ್ಯ ಸಭಾಪತಿಗಳೆ, ಮಾನ್ಯ ವಿರೋಧ ಪಕ್ಷದ ನಾಯಕರಾದಂತ ಹೆಚ್.ಕೆ. ಪಾಟಿಲರು ಮತ್ತು ಹಿಂಡಸಗೇರಿಯವರು ಹೃದಯದ್ರಾವಕಾರಗಿ ತಮ್ಮ ಕಳವಳನ್ನು ವ್ಯಕ್ತಪಡಿಸುತ್ತಾರೆ. ಪಾಪ ಅವರಿಗೆ ಸರಿ ಇಲ್ಲವೇನೋ? ಅವರ ಮೆಂಟಲ್‌ಗೆ ಅಷ್ಟೊಂದು ತೊಂದರೆಯಾಗಿದೆ ಅಂತ ಕಾಣುತ್ತದೆ. ಆದ್ದರಿಂದ ನಮ್ಮ ಆರೋಗ್ಯ ಸಚಿವರು ಹೆಚ್ಚು ಗಮನಹರಿಸಬೇಕು ಎಂದು ನಾನು ಅವರ ಪರವಾಗಿ ತಮಗೆ ಬೇಡಿಕೊಳ್ಳುತ್ತಿದ್ದೇನೆ.

**ಶ್ರೀ ಎ.ಎಂ. ಹಿಂಡಸಗೇರಿ:** ನಮಗೆ ಏನು ಆಗಿಲ್ಲ.

**ಡಾ|| ಎಂ.ಆರ್. ತಂಗಾ:** ನಮಗೆಲ್ಲ ಸರಿ ಇದೆ. ನಾಳೆ ಅವಶ್ಯಕತೆ ಬೀಳುತ್ತದೆ ಎಂದು ಅವರಿಗೆ ಚಿಂತೆ ಇದೆ. ಅವರಿಗೆ ಅವರ ಬಗ್ಗೆ ಚಿಂತನೆ ಮಾಡಲಿಕ್ಕೆ ಸಮಯ ಇಲ್ಲ ಮತ್ತೆ ಅವರಿಗೆ ಅಂತಹ ಪರಿಸ್ತಿತಿಯಲ್ಲಿ ಚಿಂತನೆ ಮಾಡುವುದಕ್ಕೆ ಆಗುವುದಿಲ್ಲ. ಅದಕ್ಕಾಗಿ ನಮ್ಮ ಸಹೊದ್ಯೋಗಿಗಳಿಗೆ ನಾಳೆ ಅವಶ್ಯಕತೆ ಬಿದ್ದಾಗ ವ್ಯವಸ್ಥೆ ಸರಿಯಾಗಿ ಇರಬೇಕು ಎಂದು ನಿಮ್ಮ ಬಗ್ಗೆ ನಾವು ಚಿಂತನೆ ಮಾಡುತ್ತದ್ದೇವೆ.

**ಸಭಾಪತಿಯವರು:** ಈಗಾಗಲೇ ಸಾಕಷ್ಟು ಚರ್ಚೆಯಾಗಿದೆ. The scope of calling attention notice is limited.

ಟಿ.ಸಿ.ಹೆಚ್. ಉದ್ಯೋಗಾಕಾಂಕ್ಷಿಗಳಿಗೆ ಉದ್ಯೋಗ ನೀಡುವಾಗ ಸರ್ಕಾರ ವಯೋಮಿತಿ ಆಧಾರದ ಮೇಲೆ ನೇಮಕಾತಿ ಮಾಡುವುದು

**ಡಾ ಮಹದೇವ್ ಬಣಕಾರ್ :** ಮಾನ್ಯ ಸಭಾಪತಿಗಳೆ, ಟಿ.ಸಿ.ಹೆಚ್. ಉದ್ಯೋಗಾಕಾಂಕ್ಷಿಗಳಿಗೆ ಉದ್ಯೋಗ ನೀಡುವಾಗ ಸರ್ಕಾರವು ವಯೋಮಿತಿ ಆಧಾರದ ಮೇಲೆ ನೇಮಕಾತಿ ಮಾಡುವ ಬಗ್ಗೆ ಪ್ರಾಥಮಿಕ, ಪ್ರೌಢ ಹಾಗೂ ಉನ್ನತ ಶಿಕ್ಷಣ ಸಚಿವರ ಗಮನವನ್ನು ಸೆಳೆಯುತ್ತೇನೆ.

**ಶ್ರೀ ಜಿ. ಗೋವಿಂದಗೌಡ (ಪ್ರಾಥಮಿಕ, ಪ್ರೌಢ ಹಾಗೂ ಉನ್ನತ ಶಿಕ್ಷಣ ಸಚಿವರು):** ಮಾನ್ಯ ಸಭಾಪತಿಗಳೆ, ಸಾಮಾನ್ಯ ನೇಮಕಾತಿ ನಿಯಮಗಳಲ್ಲಿ ಉದ್ಯೋಗ

ನೀಡುವ ಸಲುವಾಗಿ ವಯೋಮಿತಿಯನ್ನು ನಿಗದಿ ಪಡಿಸಲಾಗಿದೆ. ಅದರಂತೆ ಸಾಮಾನ್ಯ ಗುಂಪಿಗೆ 33 ವರ್ಷಗಳೆತಂಲೂ ಹಾಗೂ ಓ.ಬಿ.ಸಿ. ಅವರಿಗೆ 35 ವರ್ಷಗಳೆಂತಲೂ ನಿಗದಿ ಪಡಿಸಲಾಗಿದೆ. ಪರಿಶಿಷ್ಟ ಜಾತಿ ಮತ್ತು ಪಂಗಡಕ್ಕೆ 38 ವರ್ಷಗಳೆಂದು ನಿಗದಿಪಡಿಸಲಾಗಿದೆ. ಶಿಕ್ಷಕರ ನೇಮಕಾತಿ ಪ್ರತ್ಯೇಕವಾದ ನಿಯಮಾವಳಿಗಳನ್ನು ರಚನೆ ಮಾಡಲಾಗಿದ್ದು ಸಾಮಾನ್ಯ ಗುಂಪಿಗೆ ಗರಿಷ್ಟ 45 ವರ್ಷಗಳೆಂತಲೂ ನಿಗದಿಪಡಿಸಲಾಗಿದೆ. 29 ವರ್ಷ ವಯೋಮಿತಿಯನ್ನು ಮೀರಿದ ಗರಿಷ್ಟ ವಯೋಮಿತಿ 45 ವರ್ಷಗಳೊಳಗಿನ ಅಭ್ಯರ್ಥಿಗಳಿಗೆ 1991–1993–, 1995ರ ವಿಶೇಷ ನೇಮಕಾತಿಯನ್ನು ಮಾಡಲಾಗಿದೆ.

ಶಿಕ್ಷಣ ಕ್ಷೇತ್ರದಲ್ಲಿ ಶೈಕ್ಷಣಿಕ ಮಟ್ಟವನ್ನು ಕಾಪಾಡುವುದು ಶಿಕ್ಷಣ ನೀತಿಯ ಧ್ಯೇಯವಾಗಿರುತ್ತದೆ. ಇಂದಿನ ಸ್ಪರ್ಧಾತ್ಮಕ ದಿನಗಳಲ್ಲಿ ಇದು ಅಗತ್ಯವಾಗಿರುತ್ತದೆ. ಶೈಕ್ಷಣಿಕ ಮಟ್ಟವು ಹೆಚ್ಚುತ್ತದೆ. ತರಬೇತಿ ಪಡೆದ ಪ್ರತಿಭಾವಂತ ಅಭ್ಯರ್ಥಿಗಳು ಆಯ್ಕೆಯಾದಲ್ಲಿ ಅವರ ಪ್ರತಿಭೆಯೊಂದಿಗೆ ಅವರು ತರಬೇತಿಯಲ್ಲಿ ಪಡೆದ ಅನುಭವನ್ನು ಭೋದನೆಯಲ್ಲಿ ಅಳವಡಿಸಿಕೊಳ್ಳಲು ಅವಕಾಶವಿರುತ್ತದೆ. ಕೇವಲ ವಯಸ್ಸಿಗೆ ಮಾತ್ರ ಆದ್ಯತೆ ನೀಡಿದರೆ, ಪ್ರತಿಭಾವಂತರು ವಂಚಿತರಾಗುವುದಲ್ಲದೆ ಅದರ ಪರಿಣಾಮದಿಂದಾಗಿ ಭೋದನಾ ಮಟ್ಟವು ಕುಂಠಿತವಾಗಿ ಶೈಕ್ಷಣಿಕ ಮಟ್ಟವು ಕುಸಿಯುತ್ತದೆ.

**ಡಾ॥ ಮಹದೇವ್ ಬಣಕಾರ್:** ಈ ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ನೋಂದಾಯಿಸಿರತಕ್ಕಂಥ ಜನಗಳಲ್ಲಿ ಕ್ಲರ್ಕ್ ಪೋಸ್ಟ್, ಡ್ರೈವರ್ಸ್ ಇತರೆ ಎಲ್ಲಾ ಹುದ್ದೆಗಳಿಗೂ ಅಲ್ಲಿಂದ ಕರೆ ಬರುತ್ತದೆ. ಮತ್ತು ಅಲ್ಲಿಂದಲೇ ತುಂಬುತ್ತಾರೆ. ಆದರೆ ಯಾರು ಟಿ.ಎಸ್.ಎಚ್. ಮಾಡಿಕೊಂಡಿದ್ದಾರೋ ಅವರಿಗೆ ನೇಮಕಾತಿ ಮಾಡಿಕೊಳ್ಳುವ ವಿಚಾರದಲ್ಲಿ, ಈ ವರೆಗೂ ಈ ಇಲಾಖೆ ಉದ್ಯೋಗ ವಿನಿಮಯ ಕೇಂದ್ರದಿಂದ ಒಂದು ಹೆಸರನ್ನೂ ತರಿಸಿಲ್ಲ ಮತ್ತು ಅವರಿಗೆ ಕೆಲಸವನ್ನು ಕೊಟ್ಟಿಲ್ಲ. ಈ ತಾರತಮ್ಯ ಏಕೆ? ಹಾಗಿದ್ದಮೇಲೆ ಈ ಉದ್ಯೋಗ ವಿನಿಮಯ ಕೇದ್ರಗಳು ಏತಕ್ಕೆ ಬೇಕು?

**ಶ್ರೀ ಹೆಚ್.ಕೆ. ಪಾಟಿಲ್:** ಆದ್ದರಿಂದ ಉದ್ಯೋಗ ವಿನಿಮಯ ಕೇಂದ್ರ ತನ್ನ ವಿಶ್ವಾಸವನ್ನು ಕಳೆದುಕೊಳ್ಳುವ ಮೊದಲು ನೀವು ಅದರ ರಕ್ಷಣೆಗೆ ಬರಬೇಕು. ಅದರ ಜೊತೆಗೆ ಈ ಒಂದು ಟಿ.ಸಿ.ಹೆಚ್. ಅದವರು ಸುಮಾರು ವರ್ಷಗಳಿಂದ ಹೋರಾಟ ಮಾಡುತ್ತಿದ್ದು ಅವರ ಹೋರಾಟಕ್ಕೆ ಸರ್ಕಾರ ಸ್ಪಂದಿಸಬೇಕು. ಅವರದು ನಿಜವಾದ ಬೇಡಿಕೆಗಳು ಯಾವುದು ಇದ್ದಾವೆ ಅವುಗಳನ್ನು ಈಡೇರಿಸುವ ಸಲುವಾಗಿ ತಾವು ಏನು ಕಾರ್ಯಕ್ರಮಗಳನ್ನು ಹಾಕಿಕೊಳ್ಳುತ್ತಿರೆಂದು ಹೇಳಬೇಕು ಮತ್ತು

ಅವರಿಗೆ ವಿಶ್ವಾಸವನ್ನು ಮೂಡಿಸಬೇಕು. ಆದರೆ ಅದರ ಬದಲಾಗಿ ಏನಾಗಿದೆಯೆಂದರೆ ಅವರು ನಮ್ಮ ದೇಶದ ಪ್ರಜೆಗಳೆಂಬುದನ್ನೇ ಸರ್ಕಾರ ಸಂಪೂರ್ಣವಾಗಿ ಮರೆತು ಬಿಟ್ಟಿದೆ. ಅವರು ವಿಧಾನಸೌಧ ಚಲೊ ಮಾಡುತ್ತಾರೆ, ಅರೆಬೆತ್ತಲೆ ಮೆರವಣಿಗೆ ಮಾಡುತ್ತಾರೆ, ಉಪವಾಸ ಸತ್ಯಾಗ್ರಹ ಮಾಡುತ್ತಾರೆ, ಅಮರಣಾಂತ ಉಪವಾಸ ಸತ್ಯಾಗ್ರಹ ಮಾಡುತ್ತಾರೆ. ರಾಜಕಾರಣಿಗಳು ಅಮರಣಾಂತ ಉಪವಾಸ ಕುಳಿತರೆ ಬಹಳ ಗಂಭಿರವಾಗಿ ನೋಡುತ್ತೀರಿ. ಅವರು ಕುಳಿತರು ಎಂದರೆ ಪೊಲೀಸರನ್ನು ಕಳುಹಿಸಿ ಅವರನ್ನು ಹಿಡಿದು ದವಾಖಾನೆಗೆ ಹಾಕಿ ಅವರ ಉಪವಾಸ ಸತ್ಯಾಗ್ರಹವನ್ನು ಬಿಡಿಸುತ್ತೀರಿ. ಈ ರೀತಿಯಾಗಿ ಅವರು ಹೋರಾಟ ಮಾಡತಕ್ಕಂಥ ಸಂದರ್ಭದಲ್ಲೂ ಸರ್ಕಾರ ಅಡ್ಡ ಬಂದಿದೆ. ಅವರ ಹೋರಾಟಕ್ಕೆ, ಅವರ ಬೇಡಿಕೆಗಳಿಗೆ ಯಾವುದೇ ರೀತಿಯಾಗಿ ಸ್ಪಂದಿಸಲಿಲ್ಲ. ಅದರ ಜೊತೆಗೆ ಅವರ ಬೇಡಿಕೆಗಳು ನ್ಯಾಯಪೂರ್ವಕವಾಗಿಲ್ಲ ಎಂಬ ಒಂದು ವಾತಾವರಣವನ್ನು ಇವತ್ತು ಸರ್ಕಾರ ಮೂಡಿಸಿದೆ. ಅವರ ಬೇಡಿಕೆಗಳೇನಿವೆ ಅದಕ್ಕೆ ಸ್ಪಂದಿಸತಕ್ಕಂಥದ್ದು ಸರ್ಕಾರದ ಕೆಲಸ. ನಮ್ಮ ಅಭಿಪ್ರಾಯಗಳ ಬಗ್ಗೆ ನಾವು ಈಗಾಗಲೇ ವಿವರವಾಗಿ ಹೇಳಿದ್ದೇನೆ. ಅವರ ಬೇಡಿಕೆಗಳಲ್ಲಿ ಸಾಕಷ್ಟು ನ್ಯಾಯಸಮ್ಮತವಾದ ಬೇಡಿಕೆಗಳು ಇವೆ ಆದರೆ ಅವರೇನು ಎಲ್ಲಾ ಟೀಚರ್ಸ್‌ದು ನೇಮಕಾತಿಯನ್ನು ರದ್ದು ಪಡಿಸಿ ಎನ್ನುತ್ತಾರಲ್ಲ, ನಾನು ರದ್ದು ಪಡಿಸಿರಿ ಎನ್ನುವುದಿಲ್ಲ. ನಾನು ತಮ್ಮನೇನು ಕೇಳುತ್ತೇನೆಂದರೆ ಈಗ ಆಗಿದ್ದು ಆಗಿಹೋಯಿತು. ಇನ್ನು ಮುಂದಕ್ಕೆ ನೇಮಕಾತಿಯನ್ನು ಮಾಡಿಕೊಳ್ಳುವಂಥದ್ದರಲ್ಲಿ ಇವರಿಗೆ ಅನುಕೂಲವಾಗುವ ಹಾಗೆ ಯಾರು ಅರ್ಹರಿದ್ದಾರೋ ಅವರಿಗೆ ನೌಕರಿ ಸಿಗುವ ಹಾಗೆ, ಸೇವಾ ಅವಕಾಶ ಸಿಗುವಹಾಗೆ ತಾವು ವಿಶೇಷವಾಗಿರತಕ್ಕ ಮುತುವರ್ಜಿ ಕಳಕಳಿ ಹಾಗೂ ಮಾನವೀಯ ಅಂಶಗಳನ್ನು ತಾವು ಇದರಲ್ಲಿ ನೋಡಿಕೊಂಡು ಸಮಸ್ಯೆಗೆ ಪರಿಹಾರವನ್ನು ಒದಗಿಸಿಕೊಡಬೇಕೆಂದು ಮಾನ್ಯ ಶಿಕ್ಷಣ ಸಚಿವರಲ್ಲಿ ತಮ್ಮ ಮುಖಾಂತರ ಒತ್ತಾಯ ಮಾಡುತ್ತೇನೆ.

**ಡಾ|| ಮಹದೇವ್ ಬಣಕಾರ್:** ಈಗಾಗಲೇ ಮಾಡಿರತಕ್ಕಂಥ ನೇಮಕಾತಿ ಪಟ್ಟಿ ಅಂತಿಮವಾಗಿಲ್ಲ. ಆದ್ದರಿಂದ ಅದನ್ನು ತಡೆಹಿಡಿದು ಈಗಿನಿಂದಲೆ ಅದನ್ನು ಅನುವುಗೊಳಿಸಬೇಕೆಂದು ನನ್ನ ಪ್ರಾರ್ಥನೆ.

**ಸಭಾಪತಿಯವರು:** ಗಮನ ಸೆಳೆಯುವ ಸೂಚನೆಯಲ್ಲಿ ತಾಸುಗಟ್ಟಲೆ ಚರ್ಚೆ ಮಾಡಿದರೆ ಹೇಗೆ?

**ಡಾ|| ಮಹದೇವ್ ಬಣಕಾರ್ :** ಉದ್ಯೋಗ ವಿನಿಮಯ ಕೇಂದ್ರದಿಂದ ಹೆಸರುಗಳನ್ನು ತರಿಸುವಾಗ ಸೀನಿಯಾರಿಟಿ ಏನಾದರು ಕೇಳಿದ್ದಿರಾ?

**ಶ್ರೀ ಹೆಚ್.ಜಿ. ಗೋವಿಂದೇಗೌಡ:** ಸೀನಿಯಾರಿಟಿ ಅಲ್ಲ, 29 ವರ್ಷದ ಕೆಳಗಿರುವವರ ಹೆಸರುಗಳನ್ನೆಲ್ಲಾ ಕಳುಹಿಸಿ ಎಂದು ಕೇಳಿದೆವು. ಅವರು ಕಳುಹಿಸಿದ್ದಾರೆ.

**ಡಾ॥ ಮಹದೇವ್ ಬಣಕಾರ್:** ಇತ್ತೀಚಿನ ವರ್ಷದಲ್ಲಿ ತೆಲಗು, ತಮಿಳರೆಲ್ಲ ಕನ್ನಡ ಕಲಿತುಕೊಂಡು ಉದ್ಯೋಗ ವಿನಿಮಯ ಕೇಂದ್ರದಲ್ಲಿ ತಮ್ಮ ಹೆಸರುಗಳನ್ನು ನೋಂದಾಯಿಸಿದ್ದಾರೆ. ಅದರಲ್ಲಿ ನೀವೇನಾದರೂ ಸೀನಿಯಾರಿಟಿ ಕನ್ಸಿಡರ್ ಮಾಡಿದ್ದರೆ ನಮ್ಮ ಅಭ್ಯಂತರವೇನು ಇಲ್ಲ. ಈಗಲೂ ನೀವು ಉದ್ಯೋಗ ವಿನಿಮಯ ಕೇಂದ್ರದಲ್ಲಿ ಸೀನಿಯಾರಿಟಿ ಕನ್ಸಿಡರ್ ಮಾಡುವುದಾದರೆ ನಮಗೆ ಯಾವ ಅಭ್ಯಂತರವೂ ಇಲ್ಲ.

**ಶ್ರೀ ಹೆಚ್.ಕೆ. ಪಾಟಿಲ್:** ಸನ್ಮಾನ್ಯ ಸಭಾಪತಿಗಳೆ, ಸನ್ಮಾನ್ಯ ಸಚಿವರು ಕೊಟ್ಟಿರತಕ್ಕಂಥ ನಿರ್ದೇಶನವನ್ನು ಉದ್ಯೋಗ ವಿನಿಮಯ ಕೇಂದ್ರದವರು ಪಾಲನೆ ಮಾಡಿದ್ದಾರೆ. ಆದರೆ ಅದು ನಿಯಮವನ್ನು ಉಲ್ಲಂಘನೆ ಮಾಡಿದಂತೆ. ಏಕೆಂದರೆ, ಉದ್ಯೋಗ ವಿನಿಮಯ ಕೇಂದ್ರದಲ್ಲಿ ಯಾರ ಹೆಸರನ್ನು ಕಳುಹಿಸಬೇಕು ಎಂದರೆ ಸೀನಿಯರ್ಸ್ ಯಾರು ಇರುತ್ತಾರೆ ಅಂದರೆ ನೀವು ಹತ್ತು ಜನರನ್ನು ಕಳುಹಿಸಿರಿ ಎಂದರೆ ಹತ್ತು ಜನ ಸೀನಿಯರ್ಸ್ ಯಾರು ಇರುತ್ತಾರೆ, ಅವರನ್ನು ಕಳುಹಿಸುತ್ತಾರೆ. 20 ಜನರನ್ನು ಕೇಳಿದರೆ ಮೊದಲ 20 ಜನ ಯಾರು ಇರುತ್ತಾರೆ ಅವರನ್ನು ಕಳುಹಿಸುತ್ತಾರೆ. ಆ ರಿಜಿಸ್ಟ್ರೇಷನ್ ಸೀನಿಯಾರಿಟಿಯನ್ನು ಉಲ್ಲಂಘನೆ ಮಾಡುವುದಕ್ಕೆ ಉದ್ಯೋಗಾಧಿಕಾರಿಯವರಿಗೆ ಯಾವುದೇರೀತಿಯಾದ ಹಕ್ಕಿಲ್ಲ. ಆದರೆ ಸರ್ಕಾರ ಕೊಟ್ಟಿರತಕ್ಕಂಥ ನಿರ್ದೇಶನದ ಅನ್ವಯ ಅವರು ಉದ್ಯೋಗ ವಿನಿಮಯ ಕೇಂದ್ರದ ನಿಯಮವನ್ನು ಸಹಿತ ಇವತ್ತು ಉಲ್ಲಂಘನೆ ಮಾಡಿ ಕಳುಹಿಸಿದ್ದಾರೆ. ನಾನು ಅದರ ಬಗ್ಗೆ ಪ್ರಸ್ತಾಪ ಮಾಡುವುದಿಲ್ಲ. ಆದರೆ ನನ್ನ ಮೂಲ ತಕರಾರು ಎಂದರೆ ಈ 3–4 ವರ್ಷದ್ದು ಬಿಡಿ. ಹಿಂದೆ 10–12 ವರ್ಷಗಳ ಅವಧಿ ಏನಿತ್ತು ಯಾವಾಗ ಡಿ.ಎಲ.ಆರ್.ಸಿ. ಕಾನ್ಸ್ಟಿಟ್ಯೂಟ್ ಆಗಿ ಲಕ್ಷಗಟ್ಟಲೆ ಲಂಚ ಪಡೆದು ಶಿಕ್ಷಕರು ನೇಮಕಾತಿಯನ್ನು ಮಾಡಿರಲಿಲ್ಲ, ಆ ಸಂದರ್ಭದಲ್ಲಿ ಈ ಉದ್ಯೋಗ ವಿನಿಮಯ ಕೇಂದ್ರದಿಂದ ತರಿಸಿಕೊಳ್ಳಲಿಲ್ಲ. ಅದೇ ಸುಮಾರು 10–15 ಬ್ಯಾಚುಗಳಾದವು. ಆ ಸಂದರ್ಭದಲ್ಲಿ ಆಗಿರುವಂಥ ಪ್ರಮಾದವನ್ನು ಸರಿಪಡಿಸತಕ್ಕಂಥದ್ದು ಅವರ ಜವಾಬ್ದಾರಿ ತಾನೆ?

**ಶ್ರೀ ಹೆಚ್.ಜಿ. ಗೋವಿಂದೇಗೌಡ:** ಜೊತೆಗೆ ಇಷ್ಟು ಜನ ನಿರುದ್ಯೋಗಿಗಳು ಏಕೆ ಆದರು ಎಂದರೆ 1995–96, 1996–97, 1997–98,ರಲ್ಲಿ ನಮ್ಮ ಸರ್ಕಾರ 60.000 ಉಪಾಧ್ಯಾಯರುಗಳನ್ನು ನೇಮಕ ಮಾಡಿದೆ. ಹಿಂದೆ 5 ಸಾವಿರ, 10

ಸಾವಿರ ಉಪಾಧ್ಯಯರುಗಳನ್ನು ನೇಮಕ ಮಾಡಿದ್ದರಿಂದ ಬ್ಯಾಕ್‌ಲಾಗೆಲ್ಲಾ ಅಲ್ಲಿ ಭರ್ತಿಯಾಯಿತು. ಆದರೂ ಸಹ ನನ್ನ ಮನಸ್ಸಿಗೆ ನೋವಿದೆ. ನಾನು ಮೊನ್ನೆ ದಿವಸ ಪ್ರತಿಭಾ ಪುರಸ್ಕಾರಕ್ಕೆ ಹೋಗಿದ್ದಾಗ ಒಬ್ಬ ಪರಿಶಿಷ್ಟ ಜಾತಿಗೆ ಸೇರಿದಂತಹ ಹುಡುಗ ಆತ 10ನೇ ರ್‍ಯಾಂಕನ್ನು ಪಡೆದಿದ್ದಾನೆ, ಆತನಿಗೆ ಮುಂದೆ ನೀನು ಏನು ವಿಧ್ಯಾಬ್ಯಾಸ ಮಡುತ್ತೀಯೇ ಎಂದು ಕೇಳಿದಾಗ ನಾನು ಮೇಸ್ತ್ರಾಗಬೇಕು ಸ್ವಾಮಿ, ಟಿ.ಸಿ.ಹೆಚ್. ಗೆ ಹೋಗುತ್ತೇನೆ ಎಂದು ಹೇಳೀದ. ಇವತ್ತು ಲಂಚ ಇಲ್ಲದ ರೀತಿಯಲ್ಲಿ, ಜಾತಿ ಹೊರಗಾಗಿಬಿಟ್ಟು ಇಂತಹ ಒಂದು ವ್ಯವಸ್ಥೆ ಈ ಸರ್ಕಾರದಲ್ಲಿ ನಡೆಯುತ್ತಿದೆ ಎಂಧು ತುಂಬಾ ಜನ ಟಿ.ಸಿ.ಹೆಚ್. ಕಡೆಯೇ ಬರುತ್ತಿದ್ದಾರೆ. ನಾನು ಏತಕ್ಕೆ ಈ ಮಾತನ್ನು ಹೇಳುತ್ತಿದ್ದೇನೆ ಎಂದರೆ ನಮಗೆ ಗುಣಮಟ್ಟ ಚೆನ್ನಾಗಿ ಆಗಬೇಕು ನಮ್ಮ ಪಾಠಶಾಲೆಗಳು ಖಾಶಗೀ ಪಾಠಶಾಲೆಗಳಿಗೆ ಕಾಂಪೀಟ್ ಮಾಡಬೇಕು ಎಂಬ ಉದ್ದೇಶದಿಂದ ಇದನ್ನೆಲ್ಲಾ ಮಾಡುತ್ತಿರುವುಂಥದ್ದು. ಸ್ವಲ್ಪ ನೋವು ಕೂಡ ಆಗುತ್ತದೆ. ನನಗೆ ನೋವಾಗುವುದಿಲ್ಲ ಎಂದು ತಾವು ದಯವಿಟ್ಟು ತಿಳಿದುಕೊಳ್ಳಬೇಡಿ. ಮತ್ತೆ ಈಗ 15 ವರ್ಷ ಆಗಿದೆ ಎಂದು ಸ್ನೇಹಿತರು ಹೇಳಿದರು. 10–15 ವರ್ಷಗಳ ಹಿಂದೆ ಪಾಸ್ ಮಾಡಿದವರಿಗೆ ಈ ವಿಷಯದ ಬಗ್ಗೆ ಪರಿಚಯ ಇರುವುದಿಲ್ಲವೆಂದು ನಮ್ಮ ಮನಸ್ಸಿನಲ್ಲಿದ್ದರೂ ಸಹ 29 ವರ್ಷಕ್ಕೆ ಮೇಲ್ಪಟ್ಟವರಿಗೆಲ್ಲಾ ನಾವು ಅವಕಾಶ ಮಾಡಿಕೊಟ್ಟವು.

**ಶ್ರಿ ರಾಮಚಂದ್ರ ಗೌಡ:** ತಾವು ಸಬ್ಜೆಕ್ಟ್ ಬಗ್ಗೆ ಟಚ್ ಇರುವುದಿಲ್ಲ ಎಂದು ಹೇಳಿದ್ದೀರಿ.

**ಶ್ರೀ ಹೆಚ್.ಸಿ.ಗೋವಿಂದೇಗೌಡ:** ಮಾನ್ಯ ಸಭಾಪತಿಯವರೇ, ಬೇರೆ ಯಾವುದಾದರೂ ಉದ್ಯೋಗವನ್ನು ಕೊಡಬಹುದು. ಆದರೆ ಉಪಾದ್ಯಾಯ ಹುದ್ದೆಯನ್ನು ಕೊಡಬೇಕಾದರೆ ಆ ವಿಷಯದ ಬಗ್ಗೆ ಕಮಿಟ್‌ಮೆಂಟ್ ಇರಬೇಕಾಗುತ್ತದೆ.

**ಶ್ರೀ ರಾಮಚಂದ್ರ ಗೌಡ:** ಮಾನ್ಯ ಸಭಾಪತಿಯವರೆ, ವಯಸ್ಸಾದಷ್ಟು ಮತ್ತು ಫೇಲ್ ಆದಷ್ಟು ಉಪಾಧ್ಯಾಯರು ಒಳ್ಳೆಯ ಅನುಭವಿ ಉಪಾಧ್ಯಾಯರಾಗುತ್ತಾರೆ.

**MR. CHAIRMAN :** If the minister replies there ends the matter.

**ಶ್ರೀ ಹೆಚ್.ಜಿ. ಗೋವಿಂದೇಗೌಡ:** ಮಾನ್ಯ ಸಭಾಪತಿಯವರೆ, ಪರೀಕ್ಷೆಗಳಲ್ಲಿ ಕಾಪಿ ಮಾಡುವ ಪದ್ದತಿ ಹೆಚ್ಚಾಗಿ ಕಂಡುಬಂದುದರಿಂದ ಸುಮಾರು ಮೂರು ವರ್ಷಗಳಿಂದೀಚೆಗೆ ಎಸ್.ಎಸ್.ಎಲ್.ಸಿ. ಮತ್ತು ಪಿ.ಯು.ಸಿ. ಯ 160 ಪರೀಕ್ಷಾ

ಕೇಂದ್ರಗಳಲ್ಲಿ ಮುಚ್ಚಿದ್ದೇವೆ. ಈ ವಿಷಯದಲ್ಲಿ ನಾವು ಯಾವುದೇ ಒತ್ತಡಕ್ಕೆ ಮಣಿದಿಲ್ಲ. ಶಿಕ್ಷಣದ ಗುಣಮಟ್ಟ ಉತ್ತಮಗೊಳ್ಳಬೇಕು ಎಂಬ ಒಂದೇ ಒಂದು ಉದ್ದೇಶದಿಂದ ನಾವು ಇದನ್ನೆಲ್ಲಾ ಮಾಡಿದ್ದೇವೆ.

**ಡಾ॥ ಮಹದೇವ್ ಬಣಕಾರ್:** ಮಾನ್ಯ ಸಬಾಪತಿಯವರೆ, ಶಿಕ್ಷಣದ ಗುಣಮಟ್ಟವನ್ನು ಹೆಚ್ಚು ಮಾಡುವ ಉದ್ದೇಶದಿಂದ ಇವುಗಳನ್ನೆಲ್ಲಾ ಮಾಡುವುದಾದರೆ ಈ ವರ್ಷ ಸುಮಾರು 250 ಪಿಯುಸಿ ಕಾಲೇಜ್‌ಗಳನ್ನು ಬಂದ್ ಮಾಡಿಸುತ್ತಿದ್ದಾರೆ. ಕೆಲವು ಕಾಲೆಜುಗಳಲ್ಲಿ 10 ಜನ ವಿದ್ಯಾರ್ಥಿಗಳಿದ್ದರೆ 15 ಮಂದಿ ಶಿಕ್ಷಕರು ಇದ್ದಾರೆ. ಈಗಿರುವ ಸಿಸ್ಟಮ್‌ನಿಂದ ಶಿಕ್ಷಣದ ಗುಣಮಟ್ಟವನ್ನು ಉತ್ತಮಪಡಿಸುವುದಕ್ಕೆ ಸಾಧ್ಯವಾಗುವುದಿಲ್ಲ. ನೀವು ಕೇವಲ ಕಾನೂನು ಮತ್ತು ಸಮಜಾಯಿಷಿಯನ್ನು ಹೇಳುವುದನ್ನು ಬಿಟ್ಟು ಇದಕ್ಕೆ ನ್ಯಾಯಯುತವಾದಂತಹ ಒಂದು ಮಾರ್ಗವನ್ನು ಹುಡುಕದೆ ಹೋದರೆ, ಇನ್ನು ಕಲವೇ ದಿನಗಳಲ್ಲಿ ಸುಮಾರು 25.000 ಮಂದಿ ಶಿಕ್ಷಕರು ಇಲ್ಲಿಗೆ ಬಂದು ಧರಣಿ ಮಾಡುವಂಥಹ ಅಥವಾ ಬೇರೆ ಯಾವುದೇ ಅನಾಹುತಕ್ಕೆ ತಾವು ಕಾರಣರಾಗಬೇಡಿ ಎಂದು ತಮ್ಮ ಮೂಲಕ ಮಾನ್ಯ ಸಚಿವರಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ.

**ಶ್ರೀ ಹೆಚ್.ಜಿ. ಗೋವಿಂದೇಗೌಡ:** ಮಾನ್ಯ ಸಭಾಪತಿಯವರೆ, ಇನ್ನು ಸ್ಕಾಡ್ ಬಗ್ಗೆ ಮಾನ್ಯ ಸದಸ್ಯರು ಪ್ರಸ್ತಾಪ ಮಾಡಿದ್ದಾರೆ. ಮೊದಲು ನಮ್ಮ ಇಲಾಖೆ ಡಿಡಿಪಿಐಗಳು, ಜಾಯಿಂಟ್ ಡೈರೆಕ್ಟರ್‌ಗಳು, ಕಾರ್ಯದರ್ಶಿಗಳು, ಆಯುಕ್ತರುಗಳನ್ನು ನಾವು ಸ್ಕಾಡ್‌ಗಳನ್ನಾಗಿ ನೇಮಕ ಮಾಡುತ್ತಿದ್ದೇವು. ಈಗ ಪ್ರತಿಯೊಂದು ಜಿಲ್ಲೆಯಲ್ಲಿ ಡೆಪ್ಯುಟಿ ಕಮಿಷನರ್‌ರವರು, ಎಸ್‌ಪಿಯವರು, ಜಿಲ್ಲಾ ಮಟ್ಟದ ಸಂಬಂಧ ಪಟ್ಟ ಅಧಿಕಾರಿಗಳು ಹಾಗೂ ಉಪ ವಿಭಾಗ ಮಟ್ಟದಲ್ಲಿ ಅಸಿಸ್ಟೆಂಟ್ ಕಮಿಷ್‌ನರ್, ತಾಲ್ಲೂಕು ಮಟ್ಟದಲ್ಲಿ ತಹಶೀಲ್ದಾರರು ಮತ್ತು ನಮ್ಮ ಶಿಕ್ಷಣ ಇಲಾಖೆಗೆ ಸಂಬಂಧ ಪಟ್ಟ ಅಧಿಕಾರಿಗಳು ಪರೀಕ್ಷಾ ಕೇಂದ್ರಗಳಿಗೆ ಭೇಟಿ ನೀಡಿ ಕಾರ್ಯನಿರ್ವಹಿಸುತ್ತಿದ್ದಾರೆ. ಪರೀಕ್ಷೆಗಳಲ್ಲಿ ಕಾಪಿ ಮಾಡುವ ಪದ್ದತಿ ಹೋಗಬೇಕು, ಶಿಕ್ಷಣದ ಗುಣಮಟ್ಟ ಹೆಚ್ಚಾಗಬೇಕೆಂಬ ಕಾರಣದಿಂದ ನಾವು ಇವುಗಳನ್ನೆಲ್ಲಾ ಮಾಡಿದ್ದೇವೆ.

Notice of Adjournment Motion re: Arocities Commited by some Goondas at the Exhibition, Davnagere

**Sri. S.M. GUREDDY (Muddebihal):** On a point of orders Sir. Rule 312 of the Rules of Procedure says:

**Mr. SPEAKER:** Mr. Vatal Ngaraj has given notice and I have informed him and the other hon. Members here.........

**Sri. M.G. BNKAR (Byadgi):** will the Chief Minister be pleased to state:-

a) the number of kannada Typewriters purchaced by the Government;

b) in order to encourage those who have qualified themselves in Kannada Typewriting and Shorthand weather they would pay then more than at present;

c) if not, the reson therefor weather they inted to give more pay?

**Sri VERENDRA PATIL (Chief Minister)**

a) 200

b) B) Yes. Government have directed that I division Clerks who are qualified in Kannada Shorthand and Typewriting may be paid a special pay of Rs.30 per month while II division Clerks who are qualified in Kannada Shotrhand and Typeriting may be paid a special pay of Rs. 20 per month.

c) Does not arise.

**ಶ್ರೀ ಎಂ.ಜಿ. ಬಣಕಾರ್:** ನಾನು ನನ್ನ ಕನ್ನಡ ಟೈಪಿಸ್ಟ ವಿಷಯದಲ್ಲಿ ಪ್ರಶ್ನೆ ಕೇಳಿದ್ದೆನೆ. ಸರ್ಕಾರದವರು ಗುಮಾಸ್ತರ ವಿಷಯದಲ್ಲಿ ಉತ್ತರ ಕೊಟ್ಟಿದ್ದಾರೆ. ಇದಕ್ಕೆ ಕಾರಣವೇನು?

**ಶ್ರೀ ವೀರೇಂದ್ರ ಪಾಟೀಲ್:** (ಅ) ಗೆ ಉತ್ತರವಾಗಿ ಕನ್ನಡ ಟೈಪ್‌ರೈಟರುಗಳು 200 ಇವೆಯೆಂದು ಹೇಳಿದೆ. ಮೊದಲನೆಯ ದರ್ಜೆಯ ಗುಮಾಸ್ತರಿಗೆ 30 ರೂಪಾಯಿಗಳಂತೆಯೂ, ಎರಡನೆಯ ದರ್ಜೆಯ ಗುಮಾಸ್ತರಿಗೆ 20 ರೂಪಾಯಿಗಳಂತೆ ವಿಶೇಷ ವೇತನವನ್ನು ಕೊಡಬಹುದೆಂದು ಹೇಳಿದೆ.

**ಶ್ರೀ ಎಂ.ಜಿ. ಬಣಕಾರ್:** ಪ್ರಥಮ ದರ್ಜೆ ಮತ್ತು ಎರಡನೆ ದರ್ಜೆ ಗುಮಾಸ್ತರು ಕನ್ನಡ ಟೈಪಿಸ್ಟ್‌ಗಳಾಗಿ ಕೆಲಸಮಾಡುತ್ತಿದ್ದಾರೆ, ಅಂತಹವರಿಗೆ ವಿಶೇಷ ವೇತನ ಕೊಡುತ್ತೇವೆಂದು ಹೇಳುತ್ತೀರಿ. ನಾನು ಬರೀ ಕನ್ನಡ ಟೈಪಿಸ್ಟ್ ಆಗಿರುವ ಬಗ್ಗೆ ಪ್ರಶ್ನೆ ಕೇಳಿದ್ದೆನೆ. ಅದಕ್ಕೇನು ಹೇಳುತ್ತೀರಿ?

**ಶ್ರೀ ವೀರೇಂದ್ರ ಪಾಟಿಲ್:** ಇದರಲ್ಲಿ ಬರೇ ಟೈಪಿಸ್ಟ್ ಆಗಿರುವ ಪ್ರಶ್ನೆ ಬರುವುದಿಲ್ಲ.

**ಶ್ರೀ ಎಂ. ಜಿ. ಬಣಕಾರ್:** ನಾನು ಕೇಳಿರುವ ಪ್ರಶ್ನೆ ಕನ್ನಡ ಟೈಪ್‌ರೈಟಿಂಗ್ ಮತ್ತು ಕನ್ನಡ ಶೀಘ್ರಲಿಪಿಗಳಲ್ಲಿ ಪರಿಣತರಾದವರಿಗೆ ವಿಶೇಷ ಸಂಭಾವನೆಯನ್ನು ನೀಡುವ ವಿಚಾರ. ಸರ್ಕಾರದವರು ಗುಮಾಸ್ತರಾಗಿದ್ದು ಕನ್ನಡ ಟೈಪ್ ಮಾಡುವವರ ಬಗ್ಗೆ ಉತ್ತರ ಕೊಟ್ಟದ್ದೀರಿ.

**Mr. SPEAKER:** What will be the policy if he is mererly a Typist or a Steno it? It is the policy to pay more?

**ಶ್ರೀ ವೀರೇಂದ್ರ ಪಾಟೀಲ್:** ಸಬ್ಜಕ್ಟ ವೆರಿಫಿಕೇಶನ್, ಸ್ಟ್ರೈಟ್‌ಗಾಗಿ ಪಾಸಾಗಿ ಬರುವವರು ಕಡಿಮೆ. ಕನ್ನಡ ಟೈಪಿಸ್ಟ್ ಯಾರು ಇದ್ದಾರೆಯೋ ಅವರು ಕನ್ನಡ ಶೀಘ್ರಲಿಪಿಯನ್ನು ಕಲಿತರೆ ಅಂತಹವರಿಗೆ ಇನ್‌ಸೆಂಟಿವ್ ಕೊಡೋಣ. ಯಾರ‍್ಯಾರು ಇದರಲ್ಲಿ ಪರಿಣತಾರಾಗಿದ್ದಾರೆಯೋ ಅಂತಹವರಿಗೂ ಇನ್‌ಸೆನಟಿವ್ ಕೊಡುತ್ತೇವೆ.

**ಶ್ರೀ ಸಿದ್ದಯ್ಯ ಕಾಶೀಮಠ:** ಕನ್ನಡ ಟೈಪಿಸ್ಟುಗಳಿಗೆ ವಿಶೇಷ ಭತ್ಯವನ್ನು ಕೊಡುವ ಬಗ್ಗೆ ಆಜ್ಞೆಯನ್ನು ಮಾಡಿದ ನಂತರ ಅದನ್ನು ಜಾರಿಗೆ ತರುವುದಕ್ಕೆ ಪ್ರಯತ್ನ ಮಾಡುತ್ತೀರಾ?

**ಶ್ರೀ ವೀರೇಂದ್ರ ಪಾಟೀಲ್:** ಈಗ ಯಾರು ಯಾರು ಪ್ರಥಮ ದರ್ಜೆಯ ಗುಮಾಸ್ತರು ಮತ್ತು ಎರಡನೆಯ ದರ್ಜೆಯ ಗುಮಾಸ್ತರು ಕನ್ನಡ ಟೈಪ್‌ರೈಟರ್ ಮತ್ತು ಕನ್ನಡ ಶೀಘ್ರ ಲಿಪಿಯಲ್ಲಿ ಪರಿಣತರಾಗಿ ಆ ಕೆಲಸವನ್ನು ಮಾಡುತ್ತಾರೆಯೋ ಯಾರು ಯಾರು ಅದಕ್ಕೆ ಅರ್ಹಗುತ್ತಾರೆಯೋ ಅವರಿಗೆ ಮಾಹೆಯಾನ 20–30 ರೂಪಾಯಿಗಳ ವಿಶೇಷ ವೇತನ ಸಿಕ್ಕುತ್ತದೆ.

**ಶ್ರಿ ಎಂ.ಜಿ. ಬಣಕಾರ್:** ಸ್ವಾಮಿ, ನಾನು ಕೇಳಿರತಕ್ಕ ಪ್ರಶ್ನೆಯಲ್ಲಿ ಪ್ರಥಮ ದರ್ಜೆಯ ಗುಮಾಸ್ತರು ಮತ್ತು ಎರಡನೆ ದರ್ಜೆಯ ಗುಮಾಸ್ತರು ಕನ್ನಡ ಟೈಪಿಂಗ್ ಮತ್ತು ಶೀಘ್ರಲಿಪಿ ಬರತಕ್ಕವರು ಯಾರು ಇದ್ದಾರೆಯೋ ಅವರು ಈ ರಾಜ್ಯದಲ್ಲಿ ಯಾವುದೇ ಡಿಪಾರ್ಟಮೆಂಟ್‌ನಲ್ಲಿ ಇರಲಿ ಅವರಿಗೆ ಹೆಚ್ಚಿನ ವೇತನವನ್ನು

ಕೊಡುತ್ತಿದ್ದೀರಾ ಎಂದು ಕೇಳಿದ್ದೇನೆ, ಈ ಪ್ರಶ್ನೆ ಸ್ವಲ್ಪ ದೊಡ್ಡದಾದರೂ ಇದನ್ನು ಪರಿಶೀಲನೆ ಮಾಡಿ ಇದಕ್ಕೆ ಸಮಗ್ರವಾದ ಉತ್ತರವನ್ನು ಕೊಡುತ್ತೀರಾ.

**ಶ್ರೀ ವೀರೇಂದ್ರ ಪಾಟಿಲ್:** ಈಗ ಮಾನ್ಯ ಸದಸ್ಯರು ಕೇಳತಕ್ಕಂತ ಪ್ರಶ್ನೆ ಏನಿದೆ ಇದು ಜನರಲ್ ಪ್ರಶ್ನೆ. ಆದ್ದರಿಂದ ಇದಕ್ಕೆ ಪ್ರತ್ಯೇಕವಾದ ಪ್ರಶ್ನೆಯನ್ನು ಕೇಳಿದರೆ ಉತ್ತರವನ್ನು ತರಿಸಿಕೊಡುತ್ತೇನೆ.

**Sri D.B. KALMANKAR :** What are your views with regard to the observations of the Supreme Court that monopolists are being indirectly encouraged?

**Sri. D. DEVRAJ URS:** All that has been stated by Sri Nagappa and I don’t want to repeat them.

**Sri. H.M. CHANNABASAPPA:** What are the views of the hon. Member on the views of the Supreme Court that Governmenrt’s bona fides are doubted.

**Sri D. DEVRAJ URS:** The other day itself I have spoken about it, What is the use of my hon. Friend asking me to repeat it again and again. The Other day I have stated that Caeser,s wife must be above board. I assert the same statement again and and I stick to the statement I made the other day.

**Sri D.M. SIDDAIAH:** The Hon. Member said that one must be above board like Casers. Casers had Cleopatra also as his wife. So, to which wife the Member refred?

**Sri D.DEVRAJ URS:** I referred to the wedded wife and not to the kudik wife.

**Mr. SPEAKER:** I think he refrred to both the views.

**Sri D. DEVARAJ URS:** Yes, to both the wives. I think you for the suggestation.

**Mr. SPEAKER:** Hon. Member must conclude.

**Sri. D. M. SIDDAIAH:** Some is limitation of time.

**Mr. SPEAKER:** There is limitation of time.

**Sri. D. DEVRAJ URS:** Since there is no time, I will sit down.

**ಶ್ರೀ ಎಂ.ಜಿ. ಬಣಕಾರ್ (ಬ್ಯಾಡಗಿ):** ಮಾನ್ಯ ಅಧ್ಯಕ್ಷರೇ, ಈ ದಿವಸ ಅರ್ಥ ಮಂತ್ರಿಗಳು ಮಂಡಿಸಿರುವ ಸೇಲ್ಸ್ ಟ್ಯಾಕ್ಸ್ ಅಬ್‌ಕಾರಿ, ಮತ್ತು ಇತರೆ ತೇಪೆಯ ಎಲ್ಲಾ ಡಿಮ್ಯಾಂಡ್‌ಗಳನ್ನು ವಿರೋಧಿಸುತ್ತಾ ಸೇಲ್ಸ್ ಟ್ಯಾಕ್ಸ್ ವಿಷಯದಲ್ಲಿ ಒಂದು ಮಾತನ್ನು ನಾನು ಸ್ಪಷ್ಟೀಕರಣ ಮಾಡುವುದಕ್ಕೆ ಇಚ್ಚೆ ಪಡುತ್ತೇನೆ. ಕಳೆದ ಅಧಿವೇಶನದಲ್ಲಿ ಬ್ಯಾಡಗಿ ರೆಗ್ಯುಲೇಡ್ ಮಾರ್ಕೆಟ್‌ನಲ್ಲಿ ಸೇಲ್ಸ್‌ಟ್ಯಾಕ್ಸ್‌ನ್ನು ಮೆಣಸಿನಕಾಯಿಯ ಮೇಲೆ ಕೊಡತಕ್ಕವರು ಯಾರು ಎನ್ನುವ ಬಗ್ಗೆ ಬಹು ದೊಡ್ಡ ಜಿಜ್ಞಾಸೆ ಬಂದು ಸುಮಾರು 15 ದಿವಸಗಳವರೆಗೆ ಮಾರ್ಕೆಟ್ ಬಂದ್ ಆಗಿತ್ತು. ಈ ವಿಚಾರವನ್ನು ನಾನು ಮಾನ್ಯ ಅರ್ಥಿಕ ಮಂತ್ರಿಗಳವರೆಗೆ ಬರವಣಿಗೆಯ ಮೂಲಕ ತಿಳಿಸಿದ್ದೆ. ಆದರೆ ಅವರಿಂದ ಇದುವರೆಗೆ ನನಗೆ ಉತ್ತರ ಬಾರದಿರುವುದನ್ನು ನೋಡಿ ನನಗೆ ಕಳವಳವಾಗಿದೆ. ಮೊದಲನೆಯದಾಗಿ ಪೂಜ್ಯ ಗಾಂಧೀಜಿ ಅವರು ಉಪ್ಪಿನ ಮೇಲೆ ತೆರಿಗೆ ವಿಧಿಸಬಾರದೆಂದು ಏನು ಒಂದು ಆಂದೋಲನ ನಡೆಸಿದರೋ ಅದರಲ್ಲಿ ಸಾಮಾನ್ಯವಾಗಿ ಅವಶ್ಯಕ ವಸ್ತು ವಿನಮೇಲೆ ಕರಬಾರ ಇರಬಾರದು ಎನ್ನುವ ಭಾವವೈಶಾಲ್ಯ ಅಡಕವಾಗಿತ್ತು. ಅದೇ ರೀತಿ ಮೆಣಸಿನಕಾಯಿಯೂ ಕೂಡ ಬಡವರ ಆಹಾರವಾಗಿದೆ. ಅದರ ಮೇಲೆ ತೆರಿಗೆ ಇರಬಾರದು.ಮಹಾರಾಷ್ಟ್ರ ರಾಜ್ಯದಲ್ಲಿಯೂ ಕೂಡ ಬಡವರ ನನಗೆ ತಿಳಿದ ಮಟ್ಟಿಗೆ ಮೆನಸಿನ ಕಾಯಿಯ ಮೇಲೆ ಸೇಲ್ಸ್‌ಟ್ಯಾಕ್ಸ್ ಇಲ್ಲ. ಆದ್ದರಿಂದ ಮೈಸೂರು ರಾಜ್ಯದಲ್ಲಿಯೂ ಕೂಡ ಮೆಣಸಿನಕಾಯಿಯ ಮೇಲಿರುವ ತೆರಿಗೆಯನ್ನು ತೆಗೆಯಬೇಕು ಎಂದು ಮೊದಲನೆಯದಾಗಿ ಮಾನ್ಯ ಮಂತ್ರಿಗಳಲ್ಲಿ ಸೂಚನೆ ಮಾಡುತ್ತೇನೆ. ಈ ಮೆಣಸಿನ ಕಾಯಿಯ ಬ್ಯಾಡಗಿ ಮಾರ್ಕೆಟ್‌ನಲ್ಲಿ ಎಷ್ಟು ಮಾರಾಟವಾಗುತ್ತಿದೆ ಎಂದರೆ ಗುಂಟುರು ಮತ್ತು ಪಾಟ್ಣಾಗಳನ್ನು ಬಿಟ್ಟರೆ ಬ್ಯಾಡಗಿಯೇ ಮೂರನೆಯ ಅತೀ ದೊಡ್ಡ ಮೆಣಸಿನಕಾಯಿ ಮಾರಾಟ ಮಾಡುವ ಮಾರ್ಕೆಟ್ ಆಗಿದೆ. ಕಳೆದ 10 ವರ್ಷಗಳಲ್ಲಿ ಆ್ಯವರೇಜ್ ಲೆಕ್ಕ ತೆಗೆದು ಕೊಂಡರೆ ಪ್ರತಿ ವರ್ಷ ಒಂದು ಕೋಟಿ ರೂಪಾಯಿಗಳ ಮೇಲೆ ಟರ್ನ್–ಓವರ್ ಆಗುತ್ತಿದೆ. ಕಳೆದ ಸಾರಿ ಈ ಮೆಣಸಿನಕಾಯಿಯ ಮೇಲೆ ಸೇಲ್ಸ್‌ಟ್ಯಾಕ್ಸ್ ಕೊಡುವವರು ಯಾರು ಎಂಬ ಜಿಜ್ಞಾಸೆ

ಬಂತು. ರೈತ ಹೇಳಿದ, ಕಾನೂನು ಬದ್ಧವಾಗಿ ನಾನು ಸೇಲ್ಸ್‌ಟಾಕ್ಸ್‌ನಿಂದ ಎಕ್ಸೆಪ್ಟ್ ಆಗಿದ್ದೇನೆ ಎಂದು ದಳ್ಳಾಳಿ ಹೇಳಿದ, ನಾನು ಖರೀದಿ ಮಾಡುವವನೂ ಅಲ್ಲ, ಕೊಡುವವನೂ ಅಲ್ಲ, ನಾನು ಬರೀ ಖರೀದಿದಾರನ ಏಜೆಂಟ್ ಆಗಿರುವುದರಿಂದ ಸೇಲ್ಸ್‌ಟ್ಯಾಕ್ಸ್‌ನ ನನಗೆ ಅನ್ಯಾಯವಾಗುವುದಿಲ್ಲ ಎಂದು. ಖರೀದಿದಾರ ಹೇಳಿದ. ಖರೀದಿ ಮಾಡತಕ್ಕವನು ಸೇಲ್ ಪಾಯಿಂಟ್‌ನಲ್ಲಿ ಇರುವುದರಿಂದ ನನಗೆ ಸೇಲ್ಸ್ ಟ್ಯಾಕ್ಸ್ ಅನ್ವಯಿಸುವುದಿಲ್ಲ ಎಂದು. ಈ ರೀತಿಯಾದರೆ ಸೇಲ್ಸ್ ಟಾಕ್ಸ್ ಕೊಡತಕ್ಕವರು ಯಾರು ಎಂಬುದನ್ನು ಬೆಳೆಯುತ್ತಾರೋ ಅಂತಹವರು ತಾವು ರೈತರು ಎಂದು ಸ್ಥಿರ ಪಡಿಸಿದರೆ ಅವರು ಸೇಲ್ಸ್ ಟ್ಯಾಕ್ಸ್ ಕೊಡಬೇಕಾಗಿಲ್ಲ, ಆ ರೀತಿ ಸ್ಥಿರ ಪಡಿಸದಿದ್ದರೆ ಕೊಡಬೇಕಾಗುತ್ತದೆ ಎಂದು ರೈತನಿಂದ ಮೆನಸಿನಕಾಯಿಯನ್ನು ದಳ್ಳಾಳಿ ತೆಗೆದುಕೊಂಡು ಹೊಗುವುದಕ್ಕಿಂತ ಮುಂಚೆ ಇಂತಹ ಹೊಲದಲ್ಲಿ ಈ ಮೆಣಸಿನಕಾಯಿ ಬೆಳೆದಿದೆ ಎಂದು ಒಂದು ಎಕ್ಸ್ಟ್ರ್ಯಾಕ್ಟನ್ನು ಸಂಬಂಧ ಪಟ್ಟ ರೈತನು ಅಧಿಕಾರಿಗಳ ಮುಂದೆ ತೋರಿಸಬೇಕು ಆಮೇಲೆ ದಳ್ಳಾಳಿ ಚಿಲ್ಲಿ ಮಾರ್ಕೆಟ್‌ನಲ್ಲಿ ಮೂರು ಪರಸೆಂಟ್ ಸೇಲ್ಸ್‌ಟ್ಯಾಕ್ಸ್ ಕೊಡಬೇಕು. ಈಗ ರೈತನು 30 ರೂಪಾಯಿಗಳನ್ನು ತರಾಟೆಗೆ ಕೊಟ್ಟರೂ ಕೂಡ ಅವನು ಒಂದು ಎಕ್ಸ್‌ಟ್ರಾಕ್ಟನ್ನು ಕೊಡುವುದಿಲ್ಲ. ಅಗಸರ ನಾಯಿ ಹಳ್ಳ ಕಾಣಲಿಲ್ಲ, ಮನೆ ಕಾಣಲಿಲ್ಲ ಎನ್ನುವ ರೀತಿಯಲ್ಲಿ ದಳ್ಳಾಳಿ ಕೈಯಲ್ಲಿ ಉರಿಯಬೇಕೋ, ತಲಾಟಿ ಕೈಯಲ್ಲಿ ಸಾಯಬೇಕೊ ಎನ್ನುವ ಸ್ತಿತಿ ರೈತನಿಗೆ ಬಂದೊದಗಿದೆ. ವಿರೋಧ ಪಕ್ಷದವರು ರಚನಾತ್ಮಕ ಸಲಹೆಗಳನ್ನು ಕೊಟ್ಟರು ಅದನ್ನು ಆಡಳಿತ ಪಕ್ಷದವರು ಅಂಗೀಕಾರ ಮಾಡುವುದಿಲ್ಲ. ಸಾಮಾನ್ಯವಾಗಿ ಲೆಕ್ಕ ಪತ್ರಗಳ ಹೊಂದಾಣಿಕೆಗೆ ಹೆಚ್ಚುವೇಳೆಯನ್ನು ಕಳೆಯುತ್ತಾರೆ. ಇದು ಕಬ್ಬಿಣದ ಅಂಗಡಿಗೆ ನೊಣ ಹೋದರೆ ಏನು ಪ್ರಯೋಜನವಾಗುತ್ತದೆಯೋ ಅದಾಗುತ್ತದೆ. ಎನ್ನುವ ಭಾವನೆ ಇದೆ. ಮಾನ್ಯ ಸಚಿವರು ಕರ್ತವ್ಯದೃಷ್ಟಿಯಿಂದ ಮೆಣಸಿನಕಾಯಿ ಮೇಲಿನ ತೆರಿಗೆಯನ್ನು ತೆಗೆದು ಹಾಕಬೇಕು ಇಲ್ಲದಿದ್ದರೆ ಸೇಲ್ ಪಾಯಿಂಟ್ ತೆಗೆದು ಪರ್ಚೆಸ್ ಪಾಯಿಂಟ್‌ಗೆ ಬದಲಾಯಿಸಬೇಕು. ಈ ರೀತಿ ಮಾಡಿದರೆ ರೈತ ತಕ್ಕ ಮಟ್ಟಿಗೆ ಬದುಕಬಹುದೋ ಏನೋ ಎನ್ನುವ ಸಲಹೆಯನ್ನು ಮಾನ್ಯ ಸಚಿವರಿಗೆ ಅಧ್ಯಕ್ಷಕರ ಮೂಲಕ ಕೊಡಬಯಸುತ್ತೇನೆ.

**ಶ್ರೀ ಎಸ್. ಪುಟ್ಟಸ್ವಾಮಿ (ಚಾಮರಾಜಗರ):** ಮಾನ್ಯ ಅಧ್ಯಕ್ಷಕರೇ, ಮಾನ್ಯ ಹಣಕಾಸಿನ ಸಚಿವರು ಅವರ ಖಾತೆಗಳಿಗೆ ಸಂಬಂಧ ಪಟ್ಟ ಬೇಡಿಕೆಗಳನ್ನು ಈ ಸಭೆಯ ಮುಂದಿಟ್ಟಿದ್ದಾರೆ, ಅವನ್ನು ವಿರೋಧಿಸುತ್ತಾ ಒಂದೆರಡು ವಿಷಯಗಳನ್ನು ಹೇಳುತ್ತೇನೆ. ಈಗತಾನೆ ಈ ಬೇಡಿಕೆಗಳ ಮೇಲೆ ಅನೇಕ ಸದಸ್ಯರು ರಚನಾತ್ಮಕ

ಸಲಹೆಗಳನ್ನು ಕೊಟ್ಟಿದ್ದಾರೆ. ಈ ಬೇಡಿಕೆಗಳಲ್ಲಿ ಅತಿ ಮುಖ್ಯವಾದುದು ಮಾರಾಟ ತೆರಿಗೆ.

**Sri MAHADEV BNAKAR (Byadagi):** Will the Minister for Health be pleased to state :-

a) the number of leapers in the State (Districtwise figures may please be furnished);

b) whether it has come to their notice that leprosy is increasing day by day;

c) if so whether they would take action to establish leprosy centre in each Directrict;

**Sri Y. RAMAKRISHNA (Minister for Health):**

a) 23,256 Patients

| | | | |
|---|---|---|---|
| Banglore | - | 507 | Panties |
| Belgum | - | 1.591 | do |
| Bidar | - | 1.563 | do |
| Bijapur | - | 4.424 | do |
| Bellary | - | 1.284 | do |
| Chikkamangluru | - | 1 | do |
| Chitrdurga | - | 42 | do |
| Dharwad | - | 1.009 | do |
| Gulbarga | - | 2.437 | do |
| Hasana | - | 1 | do |
| Kolar | - | 1.893 | do |
| Mysore | - | 3.814 | do |

| | | | |
|---|---|---|---|
| Mandya | - | 675 | do |
| Manglore | - | 1.828 | do\ |
| Raichur | - | 1.932 | do |
| Shivmoga | - | 39 | do |
| Tumkur | - | 216 | do |

b) New cases are reported in places where there are no Leprosy Centres.

c) No. The existing Centre will be converted into control centres. And also some more new Leprosy Centre will be started in districts where there is this desease.

**ಶ್ರೀ ಮಹದೇವ್ ಬಣಕಾರ್:** ಸ್ವಾಮಿ ನನ್ನ ಪ್ರಶ್ನೆಗೆ ಕೊಟ್ಟಿರತಕ್ಕ ಉತ್ತರದಲ್ಲಿ ಚಿಕ್ಕಮಂಗಳೂರು ಜಿಲ್ಲೆಯಲ್ಲಿ ಒಬ್ಬ ಮಹಾರೋಗಿ ಇದ್ದಾನೆ, ಕೋಲಾರದಲ್ಲಿ ಒಬ್ಬ ಮಹಾರೋಗಿ ಇದ್ದಾನೆ, ಹಾಸನದಲ್ಲಿ ಒಬ್ಬ ಮಹಾರೋಗಿ ಇದ್ದಾನೆ ಎಂದು ತಾವು ಉತ್ತರ ಕೊಟ್ಟಿದ್ದೀರಿ, ಈ ಅಂಕಿ ಆಂಶಗಳು ಸ್ವಲ್ಪ ಸರಿಯಾದ್ದಲ್ಲ ಎಂದು ನನ್ನ ಭಾವನೆ ಇದೆ. ಇದಕ್ಕೆ ತಾವು ಏನು ಹೇಳುತ್ತೀರಾ? ಒಬ್ಬ ಮಹಾರೋಗಿಯಿಂದ ಕೊನೆಯ ಪಕ್ಷ 10 ಜನಗಳಿಗೆ ಆ ಖಾಯಿಲೆಯು ತಗಲುತ್ತದೆ. ಆದರೆ ತಾವು ಇಡೀ ರಾಜ್ಯದಲ್ಲಿರತಕ್ಕ ಮಹಾರೋಗಿಗಳ ಸಂಖ್ಯೆ 23,256 ಮಾತ್ರ ಕೊಟ್ಟಿದ್ದೀರಿ, ಇದು ಸರಿಯಲ್ಲ. ಇದು 3 ಲಕ್ಷ ಇರಬೇಕೆಂದರೆ ಒಪ್ಪುತ್ತೀರಾ?

**ಶ್ರೀ ವೈ. ರಾಮಕೃಷ್ಣ:** ಈ ಮಹಾರೋಗ ಯಾರು ಯಾರಿಗೆ ತಗುಲಿದೆ ಎಂಬುದನ್ನು ರಜಿಸ್ಟರ್ ಮಾಡಿಸಿದ್ದನ್ನು ಮಾತ್ರ ನಾನು ಹೇಳುತ್ತೇನೆ. ಆ ಖಾಯಿಲೆ ಬಂದರೂ ಕೂಡ ಅದನ್ನು ಅವರು ಬಚ್ಚಿಟ್ಟುಕೊಂಡರೆ ಸರ್ಕಾರಕ್ಕೆ ಹೇಗೆ ಅದು ಗೊತ್ತಾಗುತ್ತದೆ? ಈಗ ನಮ್ಮ ಗಮನಕ್ಕೆ ಏನು ಬಂದಿದೆ ಅದನ್ನು ಮಾತ್ರ ನಾನು ತಿಳಿಸಿದ್ದೇನೆ.

**ಶ್ರೀ ಮಹದೇವ್ ಜಿ. ಬಣಕಾರ್:** ಈ ಕುಷ್ಟ ರೋಗಿಗಳಿಗೆ ಸಂಬಂಧಪಟ್ಟ ಹಾಗೆ ಒಂದು ಸಮಗ್ರವಾದ ಯೋಜನೆಯನ್ನು ಮಾಡುತ್ತೀರಾ?

**Sri. Y. RAMKRISHNA:** The proposals are before the Government to sanction training centre. We will take action as

